# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



**ಚಿತ್ರಗಳು :** ಸುವರ್ಣ, ಸಂಕೇತ್, ಶ್ರೀಹರಿ, ರಾಂಚಂದ್ರ ಕೊಪ್ಪಲು
ಜಿ. ಎಂ. ಬೊಮ್ನಳ್ಳಿ, ಕಮಲಂ ಅರಸು

**ಮುಖಚಿತ್ರ :** ಕಾರ್ಲ್ ಮಾರ್ಕ್ಸ್

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

ಹೆಸರಿಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ. ಆದರೆ ಅದರ ಸದಸ್ಯರುಗಳು, ಆಡಳಿತಗಾರರು, ಅಧಿಕಾರಿಗಳು ನಡೆದುಕೊಳ್ಳುವ ರೀತಿ ಮಾತ್ರ ಸಣ್ಣತನದ್ದು. ಭ್ರಷ್ಟಾಚಾರದ ವಿಚಾರ ಬಿಡಿ. ಅದು ಅದಕ್ಕೆ ಅಂಟಿಕೊಂಡಿರುವ ಜಾಡ್ಯ. ಇತ್ತೀಚೆಗೆ ಕ್ರಿಕೆಟ್ ಮಂಡಳಿಯಿಂದ ಐಪಿಎಲ್ ಎಂಬ ಕ್ರಿಕೆಟ್ ಪಂದ್ಯಗಳಿಗೆ ಬಿಟ್ಟಿ ಟಿಕೇಟು ಪಡೆದುಕೊಳ್ಳುವುದರಲ್ಲಿ ಮಹಾನಗರ ಪಾಲಿಕೆ ನಡೆದುಕೊಂಡಿರುವ ಬಗೆ ತೀರಾ ತಲೆ ತಗ್ಗಿಸುವಂಥದ್ದು. ಇಂತಿಷ್ಟು ಬಿಟ್ಟಿ ಪಾಸುಗಳು ಬೇಕು ಎನ್ನುವುದೇ ಅವಮಾನಕರ. ಕ್ರಿಕೆಟ್‌ಮಂಡಳಿಯವರು ಅವರ ಬೇಡಿಕೆ ತಿರಸ್ಕರಿಸಿದ್ದಕ್ಕೆ ಸ್ಟೇಡಿಯಂನಿಂದ ಕಸ ತೆಗೆಯುವುದಿಲ್ಲ ಎಂದು ಬೆದರಿಕೆ ಹಾಕಿದ್ದು ಅಧಃಪತನ. ಸದಸ್ಯರುಗಳ ಸಮರ್ಥನೆ ಪಾಲಿಕೆ ಮಂಡಳಿಗೆ ರಿಯಾಯಿತಿ ದರದಲ್ಲಿ ಭೂಮಿ ಒದಗಿಸಿದೆ, ತೆರಿಗೆ ವಿನಾಯಿತಿ ನೀಡಿದೆ ಎನ್ನುವುದು. ಕ್ರಿಕೆಟ್ ಪಂದ್ಯಗಳ ಮೋಜು ವೀಕ್ಷಿಸಲು ಬಿಟ್ಟಿ ಪಾಸ್ ಪಡೆಯುವುದಕ್ಕೆ ರಿಯಾಯಿತಿ ನೀಡಿರುವುದು ಬೆಂಗಳೂರಿನ ನಾಗರಿಕರಿಗೆ ಎಸಗಿರುವ ವಂಚನೆ. ಕ್ರಿಕೆಟ್ ಮಂಡಳಿ ಬಡ ಸಂಸ್ಥೆ ಏನಲ್ಲ. ಕೋಟಿಗಟ್ಟಲೆ ಹಣ ಸಂಪಾದಿಸುತ್ತಿದೆ. ಹಾಗಿರುವಾಗ ಅದಕ್ಕೆ ರಿಯಾಯಿತಿ ಏಕೆ ? ಇದು ಪ್ರಶ್ನೆ. ಐಪಿಎಲ್ ಪಂದ್ಯ ಎನ್ನುವುದು ಕುದುರೆ ಜೂಜಿನಂತೆ. ಕ್ರೀಡಾಪಟುಗಳನ್ನು ಹರಾಜಿನಲ್ಲಿ ಕೊಂಡಿರುವ ಮಾಲೀಕರುಗಳಾದ ಸಿನಿಮಾ ನಟ ಶಾರುಕ್‌ಖಾನ್, ಉದ್ಯಮಿ ವಿಜಯಮಲ್ಯ ಮತ್ತಿತರರು ಮೋಜಿಗಾಗಿ ನಡೆಸುತ್ತಿರುವ ಆಟ ಇದು. ಇದಕ್ಕೆ ಆಮದುಮಾಡಿಕೊಂಡಿರುವ ಲಲನೆಯರ ವೈಯ್ಯಾರ ಬೇರೆ; ಇದೇ ನಮ್ಮ ಕಾರ್ಪೊರೇಟರುಗಳಿಗೆ, ಅಧಿಕಾರಿಗಳಿಗೆ ಆಕರ್ಷಣೆ. ಇನ್ನಾದರೂ ಬೆಂಗಳೂರಿನ ನಾಗರಿಕರು ಎಚ್ಚೆತ್ತು ಕಾರ್ಪೊರೇಟರುಗಳು ಗೌರವದಿಂದ ನಡೆದುಕೊಳ್ಳುವಂತೆ ಒತ್ತಾಯ ತರಬೇಕು ಮತ್ತು ಕ್ರಿಕೆಟ್ ಮಂಡಳಿಯ ಎಲ್ಲ ಸ್ವತ್ತುಗಳ ಮೇಲೆ ನ್ಯಾಯವಾದ ತೆರಿಗೆ ವಿಧಿಸಬೇಕು ಎಂದು ಒತ್ತಾಯಪಡಿಸಬೇಕು. ಕಾರ್ಪೊರೇಟರುಗಳು ಕ್ರಿಕೆಟ್ ಕ್ಲಬ್‌ಗಳ ಸದಸ್ಯತ್ವಕ್ಕೆ ಬೇಡಿಕೆ ಇಟ್ಟಿರುವುದು ಈಚಿನದು. ಇದು ನಮ್ಮ ಕಾರ್ಪೊರೇಟರುಗಳು ಎಂಥ ಮಾನಗೆಟ್ಟವರು ಎನ್ನುವುದಕ್ಕೆ ಇನ್ನೊಂದು ನಿದರ್ಶನ.

* * *

ಹೈಕೋರ್ಟಿನಿಂದ ಛೀಮಾರಿ ಹಾಕಿಸಿಕೊಳ್ಳುವುದು ಭಾಜಪ ಸರಕಾರಕ್ಕೆ ಒಗ್ಗಿಹೋಗಿದೆ. ಕಾರಾಗೃಹದಲ್ಲಿದ್ದು ಬಂದು ಭ್ರಷ್ಟಾಚಾರಿಯ ಹಣೆಪಟ್ಟಿ ಹೊತ್ತಿರುವ ನುರಿತ ಭಾಜಪ ನಾಯಕ ಯಡಿಯೂರಪ್ಪ ಮತ್ತೆ ಅಧಿಕಾರದ ಗದ್ದುಗೆ ಏರಲು ತಿಪ್ಪರಲಾಗಹಾಕುತ್ತಿರುವುದೇ ಅವಮಾನಕರ. ಭಾಜಪ ಹೈಕಮಾಂಡ್‌ನವರು ಅವರನ್ನು ಪಕ್ಷದಿಂದ ಹೊರಹಾಕದೆ ಇರುವುದು ಅವರ ದುರ್ಬಲತೆಗೆ ಸಾಕ್ಷಿ. ಕರ್ನಾಟಕ ಉಪ ಲೋಕಾಯುಕ್ತ ನ್ಯಾಯಮೂರ್ತಿ ಚಂದ್ರಶೇಖರಯ್ಯ ಇವರ ನೇಮಕಾತಿ ವಿಚಾರದಲ್ಲಿ ಸರಕಾರಕ್ಕೆ ರಾಜ್ಯ ಹೈಕೋರ್ಟು ಚೆನ್ನಾಗಿ ತೀಡಿದೆ. ಕಾನೂನುರೀತ್ಯ ಮುಖ್ಯ ನ್ಯಾಯಾಧೀಶರನ್ನು ಕಡೆಗಣಿಸಿ ತರಾತುರಿಯಲ್ಲಿ ಉಪ ಲೋಕಾಯುಕ್ತರ ನೇಮಕ ಮಾಡಿದ್ದೇ ಕಾರಣ. ನ್ಯಾಯಮೂರ್ತಿ ಸಂತೋಷ ಹೆಗ್ಗಡೆ ನಿವೃತ್ತರಾದ ಮೇಲೆ ಕರ್ನಾಟಕ ಲೋಕಾಯುಕ್ತ ಕಛೇರಿ ದಿಕ್ಕುದಿವಾಣಿ ಇಲ್ಲದಂತಾಗಿದೆ. ಈಗಿರುವುದು ಒಬ್ಬರೇಒಬ್ಬ ಉಪಲೋಕಾಯುಕ್ತರು. ಒತ್ತಡಗಳಿಗೆ ಮಣಿದ ಮುಖ್ಯಮಂತ್ರಿ ಸದಾನಂದಗೌಡರು ಕಚೇರಿಯ ಅಧಿಕಾರಿಗಳನ್ನು ಯದ್ವಾತದ್ವಾ ಎತ್ತಂಗಡಿ ಮಾಡಿದ್ದಾರೆ.

ಸರಕಾರಕ್ಕೆ ಹೈಕೋರ್ಟಿನಿಂದ ಮುಖಭಂಗವಾಗಿರುವ ಇನ್ನೊಂದು ಪ್ರಕರಣ ಡಿಜಿಪಿಯಾಗಿ ಶಂಕರ ಬಿದರಿ ನೇಮಕಾತಿ. ಸೀನಿಯಾರಿಟಿ ಕಡೆಗಣಿಸಿ ಬೇಕಾದವರನ್ನು ನೇಮಕ ಮಾಡಿಕೊಂಡಿದ್ದೇ ಕಾರಣ. ಕೋರ್ಟು ಮೆಟ್ಟಲೇರಿ ಶಂಕರ ಬಿದರಿ ಮುಖಕ್ಕೆ ಇನ್ನಷ್ಟು ಕೆಸರೆರಚಿಕೊಂಡಿದ್ದಾರೆ. ಗಟ್ಟಿ ಕುಳದ ಅಧಿಕಾರಿ ನಡೆಸಿದ ದೌರ್ಜನ್ಯಗಳು ಈಗ ಜಗಜ್ಜಾಹೀರಾಗಿದೆ. ಭಾಜಪ ಸರಕಾರದ ಮುಖಕ್ಕೂ ಮಸಿ ಬಳಿದಂತಾಗಿದೆ.

* * *

ಮಮತಾ ಬ್ಯಾನರ್ಜಿ ಯಾವತ್ತೂ ಸುದ್ದಿಯಲ್ಲಿರುವ ಮಹಿಳೆ. ಅಧಿಕಾರದಲ್ಲಿದ್ದಾಗ, ಇಲ್ಲದಿದ್ದಾಗ ಕೂಡ ಈಕೆಯ ಅಬ್ಬರ ಸುದ್ದಿ ಮಾಡುತ್ತಿರುತ್ತದೆ. ಯಾವ ಸಂದರ್ಭದಲ್ಲಿ ಈಕೆ ಏನು ಮಾಡುತ್ತಾಳೆ ಎಂಬುದು ಗೊತ್ತಾಗದು. ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟ್ ಆಡಳಿತದ

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
# ಹೊಸತು
ನಿಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ-೧೦ ಮೇ ೨೦೧೨

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೪೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathu.blogspot.in**

## ಮಾಧ್ಯಮಗಳ ಮೇಲೆ ನಿಯಂತ್ರಣ ಅಗತ್ಯವೇ ?




ಸ್ವಾತಂತ್ರ್ಯಾನಂತರ ದೇಶದಲ್ಲಿ ಪತ್ರಿಕೋದ್ಯಮ ಕುರಿತು ಅಧ್ಯಯನ ನಡೆಸಿ ವರದಿ ಸಲ್ಲಿಸಲು ನಿವೃತ್ತ ನ್ಯಾಯಮೂರ್ತಿ, ಶ್ರೀ. ರಾಜ್ಯಾಧ್ಯಕ್ಷ ಇವರ ನೇತೃತ್ವದಲ್ಲಿ ಸರಕಾರ ಆಯೋಗವೊಂದನ್ನು ರಚಿಸಿತ್ತು. ಈ ಆಯೋಗ ಸಮಗ್ರವಾದ ತನಿಖೆ ನಡೆಸಿ ಸಲ್ಲಿಸಿದ ವರದಿಯ ಆಧಾರದ ಮೇಲೆ ಸರಕಾರ ಕಾರ್ಯನಿರತ ಪತ್ರಕರ್ತರ ರಕ್ಷಣೆಗಾಗಿ ವಿಶೇಷವಾದ ಕಾಯಿದೆಯೊಂದನ್ನು ಮಾಡಿತು. ವರದಿಯ ಶಿಫಾರಸುಗಳಲ್ಲಿ ಮುಖ್ಯವಾದ ಒಂದು ಅಂಶ ಪತ್ರಿಕಾ ಸ್ವಾತಂತ್ರ್ಯ ಕುರಿತಾಗಿದ್ದು, ಪತ್ರಿಕೆಗಳು ಭಾರೀ ಉದ್ದಿಮೆದಾರರ ಹಿಡಿತಕ್ಕೆ ಒಳಪಡುವುದರ ಬಗ್ಗೆ ಆತಂಕ ವ್ಯಕ್ತಗೊಳಿಸಿತ್ತು. ಈಗ ಅದೆಲ್ಲ ಹಳೆಯ ವಿಚಾರ. ಪತ್ರಿಕೆಗಳು ಅಗಾಧವಾಗಿ ಬೆಳೆದು ದೊಡ್ಡ ಉದ್ಯಮವಾಗಿ ಭಾರಿ ಬಂಡವಾಳಗಾರರ ಹಿಡಿತದಲ್ಲಿ ಇವೆ. ಪತ್ರಿಕೆಗಳ ನೀತಿ ಸಂಹಿತೆ ಕಾಪಾಡಲು ಪ್ರೆಸ್ ಕೌನ್ಸಿಲ್ ಸ್ಥಾಪನೆಯಾಗಿದೆ. ಪತ್ರಿಕೆಗಳ ಜೊತೆಗೆ ದೃಶ್ಯಮಾಧ್ಯಮವೂ ಸೇರಿಕೊಂಡಿದೆ. ಈ ಇಲೆಕ್ಟ್ರಾನಿಕ್ ಮಾಧ್ಯಮ ಅತ್ಯಂತ ಕಡಿಮೆ ಕಾಲಾವಧಿಯಲ್ಲಿ ಬೃಹದಾಕಾರವಾಗಿ ಬೆಳೆದು ಇಂದು ನೂರಾರು ಚಾನೆಲ್‌ಗಳು ಲಭ್ಯವಿವೆ. ಪ್ರಪಂಚದ ಎಲ್ಲ ಭಾಗಗಳ ಆಗುಹೋಗುಗಳ ಸುದ್ದಿ ಕ್ಷಣ ಮಾತ್ರದಲ್ಲಿ ನಮಗೆ ದೊರಕಲಿದೆ. ಅತ್ಯಂತ ಪ್ರಬಲವಾಗಿ ಬೆಳೆದಿರುವ ಈ ಮಾಧ್ಯಮ ಅಷ್ಟೇ ಪ್ರಭಾವಶಾಲಿಯಾಗಿಯೂ ಇದೆ. ಅನಿರ್ಬಂಧವಾದ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವ ಈ ಮಾಧ್ಯಮ ಕೆಲವೊಮ್ಮೆ ಲಕ್ಷ್ಮಣರೇಖೆಯನ್ನು ದಾಟಿರುವ ಪ್ರಸಂಗಗಳೂ ಇವೆ. ಪತ್ರಿಕೆಗಳಿಗಾದರೆ ಅಂಥ ಸಂದರ್ಭಗಳಲ್ಲಿ ಎಚ್ಚರಿಕೆ ನೀಡಲು ಪ್ರೆಸ್ ಕೌನ್ಸಿಲ್ ಇದೆ. ಮಾಧ್ಯಮಗಳಿಗೂ ಒಂದು ನೀತಿಸಂಹಿತೆ ರೂಪಿಸಬೇಕು ಎನ್ನುವುದರ ಬಗ್ಗೆ ಈಗ ಸಾಕಷ್ಟು ಚರ್ಚೆ ನಡೆದಿದೆ, ನಡೆಯುತ್ತಿದೆ. ಈಗಿರುವ ಪ್ರೆಸ್ ಕೌನ್ಸಿಲ್‌ನ ಅಧ್ಯಕ್ಷರು ಈ ಬಗ್ಗೆ ಖಚಿತವಾದ ಅಭಿಪ್ರಾಯ ವ್ಯಕ್ತಗೊಳಿಸಿದ್ದಾರೆ. ಇಲೆಕ್ಟ್ರಾನಿಕ್ ಮಾಧ್ಯಮಗಳನ್ನು ನಿಯಂತ್ರಣಕ್ಕೊಳಪಡಿಸಬೇಕು ಎಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಅದು ಸ್ವಯಂಪ್ರೇರಿತವಾದ್ದಾಗಿರಬೇಕೆ, ಇಲ್ಲವೇ ಬೇರಾವುದಾದರೂ ವ್ಯವಸ್ಥೆಯಾಗಬೇಕೆ ಎಂಬುದು ಸ್ಪಷ್ಟವಾಗಿಲ್ಲ. ಅಂತೂ ಒಂದು ನೀತಿಸಂಹಿತೆ ಬೇಕು ಎನ್ನುವುದು ನಿಜ.

ಈ ವಿವಾದ ಮತ್ತು ಚರ್ಚೆಗಳಿಗೆ ಒಂದು ಬಲವಾದ ಹಿನ್ನೆಲೆಯಿದೆ. ಖಾಸಗಿ ಟೆಲಿವಿಷನ್ ಚಾನೆಲ್‌ಗಳು ಪ್ರಸಾರ ಮಾಡುತ್ತಿರುವ ಮನರಂಜನಾ ಕಾರ್ಯಕ್ರಮಗಳ ವಿಚಾರ ಬೇರೆಯೇ ವಿಷಯ. ಹೆಚ್ಚಿನ ಕಾರ್ಯಕ್ರಮಗಳು ಜೊಳ್ಳು ಮತ್ತು ಮೂಢನಂಬಿಕೆ ಪೋಷಿಸುವಂಥವು. ಜಾತಕಫಲದಿಂದ ಹಿಡಿದು ದೆವ್ವ, ಭೂತ, ವಾಮಾಚಾರ, ಅಪರಾಧಕೃತ್ಯಗಳ ವೈಭವೀಕರಣ ಎಲ್ಲವೂ ತುಂಬಿರುತ್ತವೆ. ಇವನ್ನು ನಿಯಂತ್ರಿಸುವ ವಿಚಾರದಲ್ಲಿ ಚರ್ಚೆ ಜರೂರು ಅಗತ್ಯ. ಈಗ ವಿವಾದಕ್ಕೆ ಗ್ರಾಸವಾಗಿರುವುದು ಸುದ್ದಿಮಾಧ್ಯಮಗಳ ಪ್ರಸಾರ : ಉತ್ಪ್ರೇಕ್ಷೆ, ಭಾವೋದ್ವೇಗ ಕೆರಳಿಸುವಂಥ ವರದಿಗಳು, ಸುದ್ದಿಗಳಿಗೆ ನೀಡುತ್ತಿರುವ ಪ್ರಾಶಸ್ತ್ಯ. ಇಡೀ ದಿನ ಪ್ರಸಾರ ಮಾಡುವ ಈ ಸುದ್ದಿ ಮಾಧ್ಯಮಗಳು ಬಹುಮಟ್ಟಿಗೆ ಕ್ಷಣ ಕ್ಷಣದ ಸುದ್ದಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತವೆ. ಆದರೆ ಅನೇಕ ವೇಳೆ ಉತ್ಪ್ರೇಕ್ಷೆಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತವೆ. ಮತ್ತೆ ಪ್ರಸಾರವಾಗುವ ಸುದ್ದಿ, ಅಥವಾ ಪ್ರಕಟಣೆಗಳ ಸತ್ಯಾಸತ್ಯತೆಯನ್ನು ತಪಾಸಣೆ ಮಾಡುವ ಗೋಜಿಗೂ ಹೋಗದಿರುವುದು ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಇದಲ್ಲದೆ ಸುದ್ದಿ ಸ್ಫೋಟಗೊಂಡನಂತರ ಆಮಂತ್ರಿತರೊಂದಿಗೆ ನಡೆಸುವ ಚರ್ಚೆ ಬಹುತೇಕ ಒಣ ಚರ್ಚೆಯಾಗಿರುತ್ತದೆ ಮತ್ತು ತಮ್ಮ ಮೂಗಿನ ನೇರಕ್ಕೆ, ನಿಲುವಿಗೆ ಅಂಟಿಕೊಂಡಿರುತ್ತವೆ. ಇದನ್ನು ಈಗಿರುವ ನಮ್ಮ ಇಂಗ್ಲಿಷ್ ಚಾನೆಲ್‌ಗಳಲ್ಲಿ ಕಾಣುತ್ತೇವೆ. ಹೆಚ್ಚುಕಡಿಮೆ ಇಂಥ ಚರ್ಚೆಗಳಲ್ಲಿ ಭಾಗವಹಿಸುವವರೂ ಕೂಡ ಅದೇ ಪರಿಚಿತ ಮುಖಗಳು. ಇತರ ಭಾಷೆಯ ಸುದ್ದಿಮಾಧ್ಯಮಗಳೂ ಅದನ್ನೇ ಅನುಸರಿಸುತ್ತಿರುವುದನ್ನು ಕಾಣುತ್ತೇವೆ. ಪ್ರಿಂಟ್ ಮಾಧ್ಯಮಕ್ಕೂ ಇಲೆಕ್ಟ್ರಾನಿಕ್ ಮಾಧ್ಯಮಕ್ಕೂ ಭಾರಿ ವ್ಯತ್ಯಾಸವಿದೆ. ಸುದ್ದಿಯನ್ನು ಪರಾಮರ್ಶಿಸಿ ವಿವೇಚನೆಯಿಂದ ಓದುಗರಿಗೆ ತಲುಪಿಸುವುದಕ್ಕೆ ಪ್ರಿಂಟ್ ಮೀಡಿಯಾಗೆ ಸಮಯಾವಕಾಶ ಇರುತ್ತದೆ, ಆದರೆ ಇಲೆಕ್ಟ್ರಾನಿಕ್ ಮಾಧ್ಯಮ ಹಾಗಲ್ಲ, ಸುದ್ದಿ ನೇರವಾಗಿ ವೀಕ್ಷಕನನ್ನು ತಲುಪುತ್ತದೆ. ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಹೆಚ್ಚಿನ ಜನ ಸುದ್ದಿಗೆ ಇಲೆಕ್ಟ್ರಾನಿಕ್ ಮಾಧ್ಯಮಕ್ಕೆ ಮಾರುಹೋಗಿರುವುದು. ಹಾಗಾಗಿ, ಈ ಮಾಧ್ಯಮ ಅತ್ಯಂತ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸಬೇಕಾಗಿದೆ. ಅಂಥ ಜವಾಬ್ದಾರಿಯನ್ನು ಈ ಮಾಧ್ಯಮ ನಿರ್ವಹಿಸುತ್ತಿದೆಯೇ ಎನ್ನುವುದೇ ನಮ್ಮ ಮುಂದಿರುವ ಪ್ರಶ್ನೆ.

ಇತ್ತೀಚಿನ ಒಂದು ಸುದ್ದಿ ಸ್ಫೋಟವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸೋಣ. ಪ್ರಮುಖ ದಿನಪತ್ರಿಕೆಯೊಂದರಲ್ಲಿ ಸೇನಾ ತುಕಡಿಗಳ ಚಲನವಲನ ಕುರಿತ ಸುದ್ದಿಯನ್ನು ಎತ್ತಿಕೊಂಡ ಇಲೆಕ್ಟ್ರಾನಿಕ್ ಮಾಧ್ಯಮ ದಿನವಿಡೀ ಅದನ್ನು ನಾನಾ ರೀತಿಯಲ್ಲಿ ಅರ್ಥೈಸಿ ಪ್ರಸಾರ ಮಾಡಿದವು. ಚಲನವಲನ ಎನ್ನುವುದು ನಡೆದ ಮೂರು ತಿಂಗಳ ನಂತರ ಅದಕ್ಕೆ ನಾನಾ ಬಗೆಯ ತಿರುವುಗಳನ್ನು ನೀಡಿ ಪ್ರಕಟಿಸಲಾಯಿತು. ಇದು ಗಂಭೀರವಾದ ವಿಷಯ. ಪರಿಣಾಮಗಳನ್ನು ವಿವೇಚಿಸದೆ, ಸೇನೆ ಮತ್ತು ನಾಗರಿಕ ಸರಕಾರಗಳ ನಡುವೆ ವಿರಸ ಉಂಟಾಗಿದೆಯೆಂದು ಉತ್ಪ್ರೇಕ್ಷೆ ಮಾಡಲಾಯಿತು. ಇದಕ್ಕೆ ಮಾಧ್ಯಮಗಳು ಅಷ್ಟು ಅಧಿಕ ಪ್ರಾಶಸ್ತ್ಯ ನೀಡಬೇಕಿತ್ತೆ ಎಂಬುದೇ ಪ್ರಶ್ನೆ. ಇಂಥ ಎಷ್ಟೋ ಪ್ರಕರಣಗಳನ್ನು ಪ್ರಸ್ತಾಪಿಸಬಹುದು. ಇವನ್ನೆಲ್ಲ ಗಮನಿಸಿದಾಗ ಒಂದು ರೀತಿಯ ಕಡಿವಾಣ ಅಗತ್ಯವೇ ಎನ್ನುವ ಪ್ರಶ್ನೆ ಉದ್ಭವಿಸದಿರದು.

ನಮ್ಮ ರಾಜ್ಯದಲ್ಲೇ ನಡೆದ ಘಟನೆಯೊಂದನ್ನು ನೋಡೋಣ. ಮಾಧ್ಯಮದವರಿಗೂ ಮತ್ತು ವಕೀಲರಿಗೂ ನಡುವೆ ಹೊಡೆದಾಟ ಬಡಿದಾಟವಾದದ್ದು, ನಂತರ ಪೊಲೀಸರು ಮಧ್ಯೆ ಪ್ರವೇಶಿಸಿ ನಡೆಸಿದ ಹಲ್ಲೆ ನಮ್ಮ ನೆನಪಿನಲ್ಲಿ ಇನ್ನೂ ಹಸಿರಾಗಿಯೇ ಇದೆ. ಈ ಪ್ರಕರಣದಲ್ಲಿ ನಿರತರಾಗಿದ್ದವರಲ್ಲಿ ಪೆಟ್ಟು ತಿಂದವರು ಬಹುತೇಕ ಟಿ.ವಿ. ಮಾಧ್ಯಮದವರು. ನಂತರದ ಸರದಿ ವಕೀಲರದ್ದು. ಈ ದುರ್ಘಟನೆಗೆ ಸಂಬಂಧಿಸಿದಂತೆ ಕನ್ನಡವಾಹಿನಿಗಳು ಮಾಡಿದ ಪ್ರಸಾರವನ್ನು ಕಂಡಿದ್ದೇವೆ. ಈ ಇಡೀ ಪ್ರಕರಣದ ವಿಚಾರಣೆ ನಡೆಯುತ್ತಿದೆ. ವಕೀಲರು ಮತ್ತು ಮಾಧ್ಯಮದವರ ನಡುವೆ ವೈಮನಸ್ಯ ಏಕಾಯಿತು ? ಪ್ರಾಯಶಃ ವಿಚಾರಣೆ ನಡೆಸುತ್ತಿರುವ ನ್ಯಾಯಮೂರ್ತಿಗಳ ವರದಿಯಿಂದ ಅದು ತಿಳಿದೀತೇನೋ. ಈ ಪ್ರಕರಣ ಕೂಡ ಮಾಧ್ಯಮದ ನೀತಿಸಂಹಿತೆ ಕುರಿತ ಚರ್ಚೆಗೆ ಗ್ರಾಸವಾಗಿದೆ. ಮಾಧ್ಯಮಗಳ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುತ್ತಿರುವಾಗಲೇ ಅದರ ಮೇಲೆ ನಿಯಂತ್ರಣದ ವಿಚಾರವನ್ನು ಪರಿಶೀಲಿಸುವುದು ಸೂಕ್ತವಾದೀತು.

## ಅಳಿಸಿಹೋಗದ ಆಶಯ – ಅಳಿಸಿಹೋಯಿತೆಂಬ ಭ್ರಮೆ

ಅಮೆರಿಕಾದ ನ್ಯೂಯಾರ್ಕ್ ರಾಜ್ಯದಲ್ಲಿ ಎಲ್ಮಿರಾ ಎಂಬ ಊರು. ಮಾರ್ಕ್ ಟ್ವೇನ್ ಅಲ್ಲಿ ವಾಸಿಸುತ್ತಿದ್ದ. ಅಲೆದಾಟದ ಹುಚ್ಚಿನಲ್ಲಿ ಅವನು ಕೆಲಕಾಲ ಕಣ್ಮರೆಯಾಗಿದ್ದ. ಪತ್ರಿಕೆಯೊಂದು ಅವನು ಗತಿಸಿಹೋದನೆಂದು ವರದಿ ಮಾಡಿತು. ಅದಕ್ಕೆ ಟ್ವೇನ್ ಪ್ರತಿಕ್ರಿಯೆ ಹೀಗಿತ್ತು: ''ಅದೊಂದು ಅತಿ ಉತ್ಪ್ರೇಕ್ಷೆಯ ಮಾತು.'' ಮೊದಲನೆ ಮಹಾಯುದ್ಧದ ತರುವಾಯದಲ್ಲಿ ಬರ್ಟ್ರಂಡ್ ರಸೆಲ್ ಚೀನಾಕ್ಕೆ ಭೇಟಿ ನೀಡಿದ. ಅಲ್ಲಿಂದ ಬಹುಕಾಲ ಆತನ ಬಗ್ಗೆ ಏನೂ ಸಮಾಚಾರ ಬರಲಿಲ್ಲ. ಒಂದು ಚರ್ಚಿನ ನಿಯತಕಾಲಿಕವು ಆತ ಸತ್ತುಹೋದನೆಂದು ಪ್ರಕಟಿಸಿ ಒಂದು ಷರಾ ಬರೆಯಿತು : ''ಈ ನಾಸ್ತಿಕ ಗತಿಸಿದ್ದರಿಂದ ಚರ್ಚಿನ ಜನ ಸ್ವಲ್ಪ ನೆಮ್ಮದಿಯ ಜೀವನ ನಡೆಸಬಹುದೆಂದು ಹೇಳಿದರೆ ತಪ್ಪಾಗಿ ಭಾವಿಸಬಾರದು.'' ಅವರ ನೆಮ್ಮದಿ ಅಲ್ಪಕಾಲಿಕವಾಯಿತು, ಏಕೆಂದರೆ ರಸೆಲ್ ಹಿಂದಿರುಗಿದ ಮತ್ತು ಆಮೇಲೆ ಐವತ್ತು ವರ್ಷ ಜೀವಿಸಿದ, ''ನಾನೇಕೆ ಕ್ರೈಸ್ತಧರ್ಮಿಯಲ್ಲ'' ಎಂಬ ಪುಸ್ತಕ ಪ್ರಕಟಿಸಿದ.

ಕಾರ್ಲ್ ಮಾರ್ಕ್ಸ್ ಅಳಿಸಿಹೋದ, ಅಪ್ರಸ್ತುತನಾಗಿಹೋದ, ಚರಿತ್ರೆಯ ಅಂತ್ಯವಾಯಿತು (ಫುಕುಯಾಮ), ಹೀಗೆ ಮನಬಂದಂತೆ ಚೀರುವವರ ಸಾಲಿಗೆ ಈಗಷ್ಟೆ ಮಮತಾ ಬ್ಯಾನರ್ಜಿ ಸೇರಿಕೊಂಡಿದ್ದಾರೆ. ಅವನನ್ನು ಕುರಿತಂತೆ ಪಠ್ಯಪುಸ್ತಕಗಳಲ್ಲಿರಬಹುದಾದ ಒಂದೆರಡು ಪ್ಯಾರಾಗಳನ್ನು ತೆಗೆದುಹಾಕಿದರೆ ಮಾರ್ಕ್ಸ್ ನಿರ್ನಾಮವಾಗುತ್ತಾನೆಂಬ ಅವರ ಹುಂಬತನಕ್ಕೆ ಕನಿಕರವೆನಿಸುತ್ತದೆ. ಮಾರ್ಕ್ಸ್ ಬಗ್ಗೆ ಸಾಕಷ್ಟು ತಿಳಿದ ಮಂದಿ ಎಲ್ಲವನ್ನೂ ತರಗತಿಗಳಲ್ಲಿ ಕೂತು ಪಠ್ಯಪುಸ್ತಕಗಳಿಂದ ಕಲಿತವರಲ್ಲ, ಓದಲುಬಾರದ ಲಕ್ಷಗಟ್ಟಲೆ ದುಡಿಯುವ ಜನ ಅವನ ಬಗ್ಗೆ ತಿಳಿದುಕೊಂಡಿರುವುದು ಹೋರಾಟದ ರಂಗದಲ್ಲಿ, ಜೀವನವೆಂಬ ಶಾಲೆಯಲ್ಲಿ. ಸುತ್ತಣ ಪ್ರಪಂಚದ ಆಗುಹೋಗುಗಳ ವಿಶ್ಲೇಷಣಾ ವಿಧಾನವನ್ನು ಕ್ಲುಪ್ತವಾಗಿ ಕರಗತಮಾಡಿಕೊಳ್ಳಲು ಮಾರ್ಕ್ಸ್ ಅವರಿಗೆ ಕಲಿಸಿದ್ದು ತರಗತಿಗಳಲ್ಲಿ ಪಾಠ ಹೇಳುವ ಮೂಲಕ ಅಲ್ಲ, ವರ್ಗಸಮರದಲ್ಲಿ ಭಾಗಿಗಳನ್ನಾಗಿಸುವ ಮೂಲಕ, ಅಷ್ಟೆ. ೧೬೪ ವರ್ಷಗಳ ಹಿಂದೆ ಮಾರ್ಕ್ಸ್ ಮತ್ತು ಏಂಗಲ್ಸ್ ರಚಿಸಿದ ''ಕಮ್ಯುನಿಸ್ಟ್ ಪ್ರಣಾಲಿಕೆ'' ಪ್ರಕಟಗೊಂಡಿತು. ಅಂದಿನಿಂದಲೂ ಮಾರ್ಕ್ಸ್‌ವಾದವು ನಶಿಸುತ್ತದೆ, ನಶಿಸಿತು, ಎಂದು ಪ್ರತಿ ದಶಕದಲ್ಲೂ ಹೇಳುತ್ತಾ ಬಂದ ವಿದ್ವಾಂಸರಿದ್ದಾರೆ, ಬಂಡವಾಳಶಾಹಿ ವ್ಯವಸ್ಥೆಯ ಕನಸುಗಾರರಿದ್ದಾರೆ. ಪ್ರತಿ ಹಂತದಲ್ಲೂ ನಿರಾಸೆಯ ಬೆಂಕಿ ಅವರನ್ನು ಸುಡುತ್ತಲೇ ಬಂದಿದೆ. ಆದ್ದರಿಂದ ಮಮತಾ ಅವರ ಭ್ರಮೆಯಲ್ಲಿ ಹೊಸದೇನೂ ಇಲ್ಲ, ಕಳವಳಕ್ಕೆ ಕಾರಣವೂ ಇಲ್ಲ.

೧೮೧೮ರ ಮೇ ೫ರಂದು ಜನಿಸಿದ ಮಾರ್ಕ್ಸ್ ಚಿರಂಜೀವಿಯಾಗಿ ಉಳಿಯುತ್ತಾನೆಂದು ಯಾರೂ ಎಣಿಸಿರಲಿಲ್ಲ, ಜೋಯಿಸರನ್ನು ಕೇಳಿ ಅವರಪ್ಪ ಅದನ್ನು ಮನಸ್ಸಿನಲ್ಲಿ ಸ್ಥಿರಪಡಿಸಿಕೊಂಡಿರಲಿಲ್ಲ. ಮಾರ್ಕ್ಸ್ ಹುಟ್ಟುವ ಸುಮಾರು ೧೮೦೦ ವರ್ಷಗಳಿಗೆ ಮುಂಚೆ ಸ್ಪಾರ್ಟಕಸ್ ಎಂಬ ಗುಲಾಮನು ರೋಮ್ ಚಕ್ರಾಧಿಪತ್ಯದ ವಿರುದ್ಧ ಬಂಡಾಯವನ್ನು ಸಂಘಟಿಸಿದ್ದ, ಅಧಿಪತಿಗಳನ್ನು ನಡುಗಿಸಿದ್ದ. ಅಂದರೆ, ಮಾರ್ಕ್ಸ್ ಎಂಬ ವ್ಯಕ್ತಿ ಇಲ್ಲದೆಯೂ ಶೋಷಕ ಮತ್ತು ಶೋಷಿತ ವರ್ಗಗಳು ಚರಿತ್ರೆಯುದ್ದಕ್ಕೂ ಸೆಣಸುತ್ತಲೇ ಬಂದಿವೆ. ಭಾರತದ ಸಂದರ್ಭದ ಒಂದು ಉದಾಹರಣೆಯನ್ನು ನೋಡುವುದಾದರೆ ಸುಮಾರು ೨೭೦೦ ವರ್ಷಗಳ ಹಿಂದೆ ಶೂದ್ರರ ಸಾಮಾಜಿಕ-ಆರ್ಥಿಕ ಸನ್ನಿವೇಶ ಏನಿದ್ದಿತು ಮತ್ತು ಮುಂದಿನ ಒಂದು ಸಾವಿರ ವರ್ಷಗಳ ನಂತರ ಹೇಗೆ ಮತ್ತು ಎಷ್ಟು ಬದಲಾಗಿದ್ದಿತು ಎಂಬುದನ್ನು ಗಮನಿಸಬಹುದು. ಇತರರ ಸೇವೆ ಮಾಡುವುದೊಂದೇ ಅವನ ಕೆಲಸ, ಅದರಲ್ಲೇ ಅವನ ಶ್ರೇಯಸ್ಸು ಅಡಗಿದೆ, ಎಂಬಂತೆ ಶೂದ್ರರನ್ನು ಹೀನಾಯವಾಗಿ ನಡೆಸಿಕೊಂಡ ಸಂಸ್ಕೃತಿ ನಮ್ಮದು, ಅಸ್ಪೃಶ್ಯತೆಯನ್ನು ಆಚರಿಸಿದ ಕೀಳು ನಡತೆ ನಮ್ಮದು. ಅದನ್ನು ಕಂಡು ಬುದ್ಧ ರೋಸಿಹೋದ, ಸಿಡಿದೆದ್ದ. ''ನಿಮ್ಮ ನಿರರ್ಥಕ ಯಜ್ಞಗಳಿಂದ ಏನನ್ನು ಸಾಧಿಸುತ್ತೀರಿ ?'' ಎಂದು ಉಚ್ಚವರ್ಣದ ಪುರೋಹಿತ ಮತ್ತು ಪ್ರಭುತ್ವ ವರ್ಗವನ್ನು ಅವನು ಟೀಕಿಸಿದ, ಲೇವಡಿ ಮಾಡಿದ. ಯಜ್ಞ ಮಾಡಲು ರಾಜನ್ಯ; ಮಾಡಿಸಿ ಭೂರಿದಕ್ಷಿಣೆ ಪಡೆಯಲು ಪುರೋಹಿತ; ಆದರೆ ಯಜ್ಞ ಶಾಲೆಯನ್ನು ನಿರ್ಮಿಸಿಕೊಡಲು ಶೂದ್ರ. ಎಲ್ಲವನ್ನೂ ನಿರ್ಮಿಸಿ ಸಿದ್ಧಗೊಳಿಸಿದ ನಂತರ ಅವನು ಯಜ್ಞಶಾಲೆಯ ಬಳಿ ಸುಳಿಯುವಂತಿರಲಿಲ್ಲ. ತಾನೇ ಯಜ್ಞ ಮಾಡುವುದಂತೂ ಊಹಿಸಲಾಗದಂತಹದ್ದು. 'ಶೂದ್ರ' ಎಂದರೆ ಸದಾ ಬವಣೆಗೆ ಗುರಿಯಾದವನೆಂಬ ವ್ಯಾಖ್ಯಾನವನ್ನು ಛಾಂದೋಗ್ಯ ಉಪನಿಷತ್ತಿನ ಒಂದು ಪ್ರಸಂಗದಲ್ಲಿ ಕಾಣುತ್ತೇವೆ.


ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ







**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

''ಕೂಲಿ ಕೊಡದೆಯೂ ಅವನಿಂದ ಸೇವೆ ಪಡೆಯಬಹುದು, ದಾಸ್ಯವು ಅವನ ಸಹಜ ಸ್ಥಿತಿ'' ಎಂದು ಮಹಾಮಹಿಮ ಮನು ಒರಲಿದ. ಭಾರತರತ್ನ ಪಿ. ವಿ. ಕಾಣೆ ಇದನ್ನೆಲ್ಲಾ ಸಮಗ್ರವಾಗಿ ನಿರೂಪಿಸಿದ್ದಾರೆ. ಕಾಣೆ ಮಾರ್ಕ್ಸ್‌ವಾದದ ಪರಿಚಯ ಮಾಡಿಕೊಂಡಿದ್ದವರಲ್ಲ, ಆದರೆ ಇತಿಹಾಸವನ್ನು ವಸ್ತುನಿಷ್ಠವಾಗಿ ನೋಡಬಲ್ಲ ಮಾನವ ಹೃದಯವುಳ್ಳ ವಿದ್ವಾಂಸರಂತೂ ಖಂಡಿತ ಆಗಿದ್ದರು. ಶೂದ್ರನ ಮೇಲೆ ಕಟ್ಟುನಿಟ್ಟಿನ ನಿಯಮಗಳನ್ನು ಹೇರಿದ್ದ ಅದೇ ಮನು ಪರಂಪರೆಯ ಧರ್ಮಶಾಸ್ತ್ರಕಾರರು ಗುಪ್ತರ ಕಾಲದ ವೇಳೆಗೆ (ಸುಮಾರು ಕ್ರಿ. ಶ. ೩೦೦) ಶೂದ್ರರ ಬಗ್ಗೆ ಗೌರವದಿಂದ ಮಾತನಾಡುವಂತಾಯಿತು. ''ಅವರೂ ಪತ್ನಿ ಸಮೇತರಾಗಿ ಯಜ್ಞ ಮಾಡಬಹುದು'' ಮತ್ತು ಯಜ್ಞ ಮಾಡಿಸಿ ಪುರೋಹಿತ ಅವರಿಂದ ದಕ್ಷಿಣೆ ಪಡೆಯಬೇಕು ಎಂದು ಆ ಧರ್ಮಶಾಸ್ತ್ರಕಾರರು ಅಂಗಲಾಚಿದ್ದಾರೆ. ವಿವರಗಳಿಗೆ ಆರ್. ಎಸ್. ಶರ್ಮಾ ಅವರ ಕೃತಿಗಳನ್ನು ನೋಡಬಹುದು. ಇಂತಹ ಪರಿವರ್ತನೆಗೆ ಶೂದ್ರವರ್ಗದ ಅವಿರತ ಹೋರಾಟವು ಕಾರಣವೇ ವಿನಾ ಉಚ್ಚ ವರ್ಣದವರ ಮನಃಪರಿವರ್ತನೆಯು ಕಾರಣವಲ್ಲ. ಮಾರ್ಕ್ಸ್ ಇಲ್ಲದೆಯೂ ದುಡಿಯುವ ವರ್ಗವು ನಿಚ್ಚಳವಾಗಿ ಹೋರಾಟ ನಡೆಸಿದ್ದಿತು. ಆಸ್ತಿಯನ್ನು ಹೊಂದಕೂಡದೆಂಬ ನಿರ್ಬಂಧಕ್ಕೆ ಒಳಗಾಗಿದ್ದ ಶೂದ್ರರು ಗುಪ್ತರ ಕಾಲದ ವೇಳೆಗೆ ಭೂಮಿಯ ಒಡೆತನ ಪಡೆಯಲು ಸಮರ್ಥರಾಗಿದ್ದರು. ನಂತರ ಅದನ್ನು ಕಳೆದುಕೊಂಡದ್ದು ಹೇಗೆ? ಅದೊಂದು ದೀರ್ಘ ಇತಿಹಾಸ. ವಿಶ್ವದ ಎಲ್ಲೆಡೆ ಇಂತಹ ಸಾವಿರಾರು ಪ್ರಸಂಗಗಳು ದಾಖಲಾಗಿವೆ.

ಹಾಗಿದ್ದರೆ, ಮಾರ್ಕ್ಸ್ ವರ್ಗಗಳನ್ನು ''ಕಂಡುಹಿಡಿಯಲಿಲ್ಲವೆ?'' ಇಲ್ಲ, ಅವನು ಮಾಡಿದ್ದು ಕೇವಲ ಗುರುತಿಸುವ ಕೆಲಸ. ಗುರುತಿಸುವುದು ಹೇಗೆ ಮತ್ತು ಬದಲಾವಣೆಯ ಹರಿಕಾರರಾದವರು ಹೇಗದನ್ನು ನಿರ್ವಹಿಸಿದರು, ಎಂಬುದನ್ನು ಕಾರ್ಯ-ಕಾರಣ ವಿಧಾನದಿಂದ, ವೈಜ್ಞಾನಿಕವಾಗಿ, ಸಾಧಾರವಾಗಿ ನಿರೂಪಿಸಿದವನು ಮಾರ್ಕ್ಸ್. ವಿಜ್ಞಾನವು ವಿಶ್ವದ ಭೌತಿಕ ವಸ್ತುಗಳನ್ನು ಪ್ರಯೋಗಶಾಲೆಯಲ್ಲಿ ಪರೀಕ್ಷಿಸುತ್ತದೆ, ಅದಕ್ಕೊಂದು ನಿರ್ದಿಷ್ಟ ಕ್ರಮವನ್ನು ರೂಪಿಸಿಕೊಂಡಿದೆ. ನಿರ್ಜೀವಿ ವಸ್ತುಗಳನ್ನು ವಿಶ್ಲೇಷಿಸಿ ಭೌತ ನಿಯಮಗಳನ್ನು ನಿರೂಪಿಸುವಷ್ಟು ನಿಖರವಾಗಿ ಸಮಾಜ ಜೀವಿಗಳನ್ನು ವಿಶ್ಲೇಷಿಸಿ ನಿಯಮವನ್ನು ಪ್ರತಿಪಾದಿಸುವುದು ಸರಳವಲ್ಲ, ಏಕೆಂದರೆ, ಈ ಜೀವಿಗಳಿಗೆ ಮನಸ್ಸಿದೆ, ಅಂತಸ್ಸಂಬಂಧಗಳಿವೆ, ಆಕಾಂಕ್ಷೆಗಳಿವೆ, ಸ್ಪರ್ಧೆ ಇದೆ. ಸಮಾಜದ ವಿಗಂಡಣೆಗೆ ನೂರಾರು ಪೂರಕಾಂಶಗಳಿವೆ, ವಿಧಾನಗಳಿವೆ. ಇಷ್ಟು ಸಂಕೀರ್ಣವಾದ ಮಾನವ ಸಮಾಜದ ಇತಿಹಾಸದ ಅವಲೋಕನದಿಂದ ಅದರ ಉಗಮ, ರಚನೆ, ಬೆಳವಣಿಗೆ, ಸಂಘರ್ಷ, ಪರಿಣಾಮ, ಮುಂತಾದುವನ್ನೆಲ್ಲಾ ಅಭೂತಪೂರ್ವವೆಂಬ ರೀತಿಯಲ್ಲಿ ಪ್ರತಿಪಾದಿಸಿದ್ದು ಕಾರ್ಲ್ ಮಾರ್ಕ್ಸ್. ವರ್ಗಗಳನ್ನಾಗಲಿ ವರ್ಗಹೋರಾಟವನ್ನಾಗಲಿ ಅವನು ಸೃಷ್ಟಿಸಲಿಲ್ಲ; ಅಸ್ತಿತ್ವದಲ್ಲಿ ಅನಾದಿಕಾಲದಿಂದಲೂ ಇದ್ದು, ಆಗಾಗ್ಗೆ ಬದಲಾವಣೆ ಹೊಂದಿದ್ದ ವರ್ಗಸಂಬಂಧಗಳನ್ನು ಅವನು ಪುರಾವೆಗಳ ಸಹಿತ ಮಂಡಿಸಿ ಅವನೊಬ್ಬ ಅಪೂರ್ವ ಸಮಾಜ ವಿಜ್ಞಾನಿಯಾದ.

''ಪ್ರಾಚೀನ ಸಮಾಜ'' ಎಂಬ ಉತ್ಕೃಷ್ಟ ಗ್ರಂಥವನ್ನು ಲೂಯಿ ಮೋರ್ಗನ್ ೧೮೭೭ರಲ್ಲಿ ಪ್ರಕಟಿಸಿದ. ಖಾಸಗಿ ಆಸ್ತಿ ಮತ್ತು ಪ್ರಭುತ್ವದ ಉಗಮವನ್ನು ಕುರಿತಂತೆ ಏಂಗಲ್ಸ್ ಬರೆದ ಪುಸ್ತಕಕ್ಕಿಂತಲೂ ಮುಂಚಿನದು ಅದು. ಆದಿಮ ಸಮಾಜದ ಲಕ್ಷಣ ಮತ್ತು ಅದರ ವಿಕಾಸವನ್ನು ಕ್ರಮಬದ್ಧವಾಗಿ ನಿರೂಪಿಸಲಿದ್ದ ಮಾರ್ಕ್ಸ್‌ಗೆ ಮೋರ್ಗನ್ ನೀಡಿದ್ದ ವಿವರಗಳು ಒಂದು ಆಕರದಂತಿದ್ದವು. ವಿಶ್ಲೇಷಣಾ ಪದ್ಧತಿಯು ವೈಜ್ಞಾನಿಕ ವಾಗಿದ್ದಾಗ ಸಾಮಾಜಿಕ ಬೆಳವಣಿಗೆಯ ಪ್ರತಿಪಾದನೆಯು ಸರಿಸುಮಾರು ಏಕಪ್ರಕಾರ ವಾಗಿರುತ್ತದೆಂಬುದಕ್ಕೆ ಇದೊಂದು ಸೂಚನೆ. ಮಾರ್ಕ್ಸ್‌ವಾದಿಯಲ್ಲದ ಇ. ಎಚ್. ಕಾರ್ ''ಇತಿಹಾಸವೆಂದರೇನು?'' ಎಂಬ ಪುಸ್ತಕದಲ್ಲಿ ಯಾವುದೇ ಮಾರ್ಕ್ಸ್‌ವಾದಿಯ ಪ್ರತಿಪಾದನೆಗಿಂತ ಭಿನ್ನವಲ್ಲದ ಪ್ರತಿಪಾದನೆ ನೀಡಲು ಇದೇ ಕಾರಣ. ಗಾರ್ಡನ್ ಚೈಲ್ಡ್ ಮೂಲತಃ ಉತ್ಖನನ ಶಾಸ್ತ್ರಜ್ಞ. ಪ್ರಾಚೀನ ಸಮಾಜಗಳ ಅಧ್ಯಯನ ಮಾಡುತ್ತಾ ಅವನು ಮಾರ್ಕ್ಸ್‌ನ ಚಿಂತನೆ ಮತ್ತು ವಿಧಾನಗಳತ್ತ ಕ್ರಮಿಸಲು ಕಾರಣ ಮಾರ್ಕ್ಸ್‌ವಾದದ ಆಳವಾದ ವೈಜ್ಞಾನಿಕ ಪದ್ಧತಿಯೇ ಆಗಿದ್ದಿತು. ಪಿ.ಎಂ.ಎಸ್. ಬ್ಲಾಕೆಟ್ ಒಬ್ಬ ಭೌತಶಾಸ್ತ್ರಜ್ಞ, ನೊಬೆಲ್ ಪ್ರಶಸ್ತಿ ಪಡೆದಿದ್ದವನು. ಸ್ವಾತಂತ್ರ್ಯದ ನಂತರದ ವರ್ಷಗಳಲ್ಲಿ ನೆಹರು ಆಹ್ವಾನದ ಮೇರೆಗೆ ಭಾರತಕ್ಕೆ ಬಂದು ನಮ್ಮ ವೈಜ್ಞಾನಿಕ ಮತ್ತು ಆರ್ಥಿಕ ಅಭಿವೃದ್ಧಿಯ ಹಾದಿಯೊಂದನ್ನು ಆತ ಸೂಚಿಸಿದ್ದ. ಭೌತಶಾಸ್ತ್ರದ ಸಂಶೋಧನಾ ವಿಧಾನವು ಅವನನ್ನು ಮಾರ್ಕ್ಸ್‌ವಾದಕ್ಕೆ ಕರೆತಂದಿದ್ದಿತು. ಐನ್‌ಸ್ಟೈನ್ ಯಾವತ್ತೂ ಮಾರ್ಕ್ಸ್‌ವಾದದ ಬೆನ್ನತ್ತಲಿಲ್ಲ, ಆದರೆ ಮಾರ್ಕ್ಸ್‌ವಾದಿ ತತ್ತ್ವಶಾಸ್ತ್ರಜ್ಞ ಬ್ಯಾರೋಸ್ ಡನ್‌ಹ್ಯಾಮ್‌ನ ಪುಸ್ತಕಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದ ವಿಜ್ಞಾನಿ ಆತ. ಮತ್ತೆ ಅದೇ ಕಾರಣ : ವಿಜ್ಞಾನ ಮತ್ತು ಮಾರ್ಕ್ಸ್‌ವಾದಗಳಲ್ಲಿ ಏಕರೂಪದ ಅವಲೋಕನ ಮತ್ತು ವಿಶ್ಲೇಷಣಾ ವಿಧಾನ ಇರುವುದು. ಇಂತಹ ಪ್ರತಿಭಾವಂತರೆಲ್ಲ ಮಾರ್ಕ್ಸ್‌ವಾದದ ಪ್ರಭಾವಕ್ಕೆ ಒಳಗಾಗಿದ್ದರೆಂಬುದು ಆ ವಾದದ ಹಿರಿಮೆಯಲ್ಲ; ಆ ವಾದದ ವಿವೇಚನಾ ಶೈಲಿಯು ವೈಜ್ಞಾನಿಕವಾಗಿರುವುದರಿಂದ ಅಂಥವರೆಲ್ಲ ಮಾರ್ಕ್ಸ್‌ವಾದಕ್ಕೆ ಆಕರ್ಷಿತರಾಗಿದ್ದರು.

೧೮೪೮ರಿಂದಲೂ ಮಾರ್ಕ್ಸ್ ಚಿಂತನೆಯ ತಥಾಕಥಿತ ನ್ಯೂನತೆಗಳನ್ನು ಎತ್ತಿ ಆಡುವುದು ಚಾಲ್ತಿಯಲ್ಲಿದೆ. ಅದರ ಕತೆ ಮುಗಿಯಿತೆಂದು ಹದಿನಾರು ದಶಕಗಳಿಂದ ಅನೇಕ ಪಂಡಿತಂಮನ್ಯರು (ಅಂದರೆ, ತಮ್ಮನ್ನು ತಾವು ಪಂಡಿತರೆಂದು ಭಾವಿಸಿ ಕೊಂಡಿರುವವರು) ಹೇಳಿಕೊಂಡು ಬಂದಿದ್ದಾರೆ, ಆಪಾದನೆಗಳ ದೊಡ್ಡಗಂಟನ್ನು ಹೊರಿಸುತ್ತಾ ಬಂದಿದ್ದಾರೆ. ಜೆ. ಡಿ. ಬರ್ನಾಲರಂತಹ ವಿಜ್ಞಾನಿಗಳು ಆಪಾದನೆಗಳನ್ನು ಪರೀಕ್ಷಿಸುತ್ತಲೂ ಬಂದಿದ್ದಾರೆ. ೨೦೧೧ರಲ್ಲಿ ಯೇಲ್ ಯೂನಿವರ್ಸಿಟಿ ಪ್ರೆಸ್ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ'' ಎಂಬ ಗ್ರಂಥವನ್ನು ಹೊರತಂದಿತು. ಅದರ ಕರ್ತೃ ಖ್ಯಾತ ಸಾಹಿತ್ಯ ವಿಮರ್ಶಕ ಮತ್ತು ತತ್ತ್ವಶಾಸ್ತ್ರಜ್ಞ ಟೆರಿ ಈಗಲ್‌ಟನ್. ಅದನ್ನು ಈಗಾಗಲೆ ಶ್ರೀ. ಎಸ್. ಆರ್. ವಿಜಯಶಂಕರ ಕನ್ನಡ ಓದುಗರಿಗೆ ಸ್ಥೂಲವಾಗಿ ಪರಿಚಯಿಸಿದ್ದಾರೆ. ಸಾಮಾನ್ಯವಾಗಿ ಮಾರ್ಕ್ಸ್‌ವಾದದ ಮೇಲೆ ಮಾಡಲಾಗಿರುವ ಆರೋಪಗಳನ್ನು ಚಾರಿತ್ರಿಕವಾಗಿ ವಿಮರ್ಶೆಗೆ ಗುರಿಮಾಡಿ ಅಂತಹ ಆರೋಪಗಳ ನಿಸ್ಸತ್ವವನ್ನು ಟೆರಿ ಬಯಲು ಮಾಡಿದ್ದಾನೆ. ಟೆರಿ ಇಂದು ಮಾಡಿರುವ ಕೆಲಸವನ್ನು ವಿಶ್ವದಾದ್ಯಂತ ನೂರಾರು ಬೇರೆ ಚಿಂತಕರು ಆಗಿಂದಾಗ್ಗೆ ಮಾಡುತ್ತಲೇ ಬಂದಿದ್ದಾರೆ. ಮಾರ್ಕ್ಸ್‌ವಾದವೆಂಬ ಕುದುರೆ ಸತ್ತುಹೋಗಿದೆ ಎಂದು ಖಾತ್ರಿಯಾಗಿ ಹೇಳುವ ಮಂದಿ ೧೬೦ ವರ್ಷಗಳಿಂದ 'ಸತ್ತ' ಕುದುರೆಯನ್ನೇಕೆ ಪ್ರಬಲವಾಗಿ ಚಚ್ಚುವ ಉದ್ಯಮದಲ್ಲಿ ತೊಡಗುತ್ತಲೇ ಬಂದಿದ್ದಾರೆ? ಅಂದರೆ, ಅದು ಸತ್ತಿದೆಯೆಂಬ ನಂಬಿಕೆ ಅವರಿಗೂ ಇಲ್ಲ, ಇದು ಸಾಯುವುದಿಲ್ಲವಲ್ಲ ಎಂದು ಪರಿತಪಿಸುತ್ತಾ ಇನ್ನೊಂದು - ಮತ್ತೊಂದು ಏಟು ಹಾಕುತ್ತಲೇ ಬಂದಿದ್ದಾರೆ ಅವರೆಲ್ಲಾ. ಅದಕ್ಕೇನು ಕಾರಣವಿರಬಹುದು? ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ನೆಲೆಗಳಲ್ಲಿ ಸಂಪತ್ತನ್ನು ತಮ್ಮದಾಗಿರಿಸಿಕೊಂಡಿರುವ ಅಲ್ಪಸಂಖ್ಯಾತ ಬಂಡವಳಿಗರು, ಭೂಮಾಲೀಕರು ಮತ್ತು ಅವರ ಬೆಂಬಲಕ್ಕೆ ನಿಂತಿರುವ ಚಿಂತಕರು ಪ್ರಸ್ತುತದ ವ್ಯವಸ್ಥೆಯು ಕುಸಿದುಬಿದ್ದು ವೈಜ್ಞಾನಿಕ ಸಮಾಜವಾದಿ ವ್ಯವಸ್ಥೆಯು ವಿಕಾಸವಾಗಿಬಿಡುತ್ತದಲ್ಲಾ ಎಂಬ ಭೀತಿಗೆ ಸಿಲುಕಿ ನಲುಗಿರುವುದು ಅದಕ್ಕೆ ಕಾರಣ. ಅಂತಹ ವಿಕಾಸವು ಮಾರ್ಕ್ಸ್ ಹೇಳಿದ್ದರಿಂದ ಜರುಗುವಂತಹ ಪ್ರಕ್ರಿಯೆಯಲ್ಲ; ಅಂತಹ ಪ್ರಕ್ರಿಯೆಯು ಮಾನವ ಇತಿಹಾಸದ ಮುಂದಿನ ಮಜಲೆಂಬುದು ವೈಜ್ಞಾನಿಕ ವಿಶ್ಲೇಷಣೆಯಿಂದ ಸ್ಥಿರವಾಗಿರುವುದರಿಂದ ಅದು ಜರುಗುತ್ತದೆ. ಅದನ್ನು ಮಾರ್ಕ್ಸ್ ಗುರುತಿಸಿ ವಿಸ್ತಾರವಾಗಿ ನಿರೂಪಿಸಿದ್ದಾನೆ.

ಮಾರ್ಕ್ಸ್ ಹುಟ್ಟಿದ್ದು ಮೇ ತಿಂಗಳಲ್ಲಿ. ವಿಶ್ವದ ದುಡಿಯುವ ಜನಕ್ಕೆ ಮೇ ದಿನ ಪ್ರಶಸ್ತವಾದ ದಿನ, ವಿಮೋಚನೆಗಾಗಿ ಸೆಣಸಲು ಪ್ರತಿಜ್ಞೆಯನ್ನು ಪುನರುಚ್ಚರಿಸುವ ದಿನ. ಮಾರ್ಕ್ಸ್‌ನ ದಿಗ್ದರ್ಶನವು ಮೇ ದಿನಾಚರಣೆಯ ಸಂದರ್ಭದಲ್ಲಿ ಪ್ರಸ್ತುತವಾದ, ಪ್ರಖರವಾದ ಆಯುಧ. ಅದನ್ನು ಹರಿತಗೊಳಿಸಿಕೊಳ್ಳುತ್ತಾ ಮುನ್ನಡೆಯುವುದು ನಾಗರಿಕತೆ ಮತ್ತು ಮಾನವೀಯ ಸಂಸ್ಕೃತಿಗೆ ಔನ್ನತ್ಯ ಗಳಿಸಿಕೊಡುವ ಹಾದಿಯಲ್ಲಿನ ದಿಟ್ಟ ಹೆಜ್ಜೆ. ಸದ್ಯದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸನ್ನಿವೇಶವು ಎಷ್ಟು ಭೀಕರವಾಗಿದೆಯೆಂದು ವಿವರಿಸುವ ಅಗತ್ಯವಿಲ್ಲ, ಎಲ್ಲೆಡೆ ಹಸಿವು, ದಮನ ಮತ್ತು ಅಶಾಂತಿಯ ಬೆಂಕಿ; ಅದಕ್ಕೆ ದಿಮ್ಮಿಗಳನ್ನು ಹೊಟ್ಟಿ ಬೆಂಕಿಯನ್ನು ಹೆಚ್ಚಿಸುವ ಅಲ್ಪಸಂಖ್ಯಾತ ಲೂಟಿಕೋರರ ತಂಡವಿದೆ. ಅದರ ಮಹಾಧ್ಯಕ್ಷ ಅಮೆರಿಕಾದ ಅಧ್ಯಕ್ಷ. ಭಾರತದ ಸಂಪತ್ತು ಅಪಾರ, ಆದರೆ ಅದು ಜನತೆಗೆ ಅಲಭ್ಯ. ವಿದೇಶಿ ಬಂಡವಾಳದ ಕಾಲಾಳುಗಳಂತೆ ನಡೆದುಕೊಳ್ಳುವ ನಮ್ಮ ಕೇಂದ್ರ ಮಂತ್ರಿಗಳು, ಅಧಿಕಾರಿಗಳು ಮತ್ತು ಬಂಡವಳಿಗರು ದೇಶಕ್ಕೆ ಹೊರೆ. ತೆರಿಗೆ ನೀಡದೆ, ವಿದೇಶಿ ಬ್ಯಾಂಕುಗಳಲ್ಲಿ ನಮ್ಮ ಸಂಪತ್ತನ್ನು ಮುಚ್ಚಿಟ್ಟಿರುವ ವರ್ಗ ಇದು. ಇಂಥವರ ನಾಶಕ್ಕೆ ದುಡಿಯುವ ಜನ ನಾಂದಿ ಹಾಡುತ್ತಾರೆಂದ ಮಾರ್ಕ್ಸ್ ಅಪರಾಧಿಯೇನಲ್ಲ.

ವಿರುದ್ಧ ಸಿಡಿದೆದ್ದು ಕಾಂಗ್ರೆಸ್ಸಿಗೆ ಆಪ್ತವಾದ ಈಕೆ ಮನಮೋಹನ ಸಿಂಗ್ ಸರಕಾರಕ್ಕೆ ಸಿಂಹಸ್ವಪ್ನ. ಈಗ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ. ಬಹುದಿನದ ಬಯಕೆ ಈಡೇರಿಸಿಕೊಂಡು ಮುಖ್ಯಮಂತ್ರಿ ಗಾದಿ ಹಿಡಿದ ಮೇಲೆ ಹಿಟ್ಲರ್ ಆಗಿಬಿಟ್ಟಿದ್ದಾಳೆ. ಈಕೆ ಮಾಡಿದ್ದೇ ಕಾನೂನು, ನಡೆದದ್ದೇ ದಾರಿಯಾಗಿಬಿಟ್ಟಿದೆ. ಯುಪಿಎ ಸರಕಾರಕ್ಕೆ ಈ ಮಹಾತಾಯಿ ಯಾವಾಗಲೂ ತಲೆನೋವು. ಪಶ್ಚಿಮ ಬಂಗಾಳದಲ್ಲಿ ಪಠ್ಯಪುಸ್ತಕಗಳನ್ನು ಪರಿಷ್ಕರಿಸಿ, ಮಾರ್ಕ್ಸ್ ಎಂಗೆಲ್ಸ್‌ರನ್ನು ಪಠ್ಯದಿಂದ ಹೊರ ಹಾಕಿರುವ ಈಕೆ ಟೀಕೆಗೆ ಮಾತ್ರ ಮಹಾಸಿಟ್ಟಿಗೇಳುತ್ತಾಳೆ. ಈಚೆಗೆ ಈಕೆಯ ವ್ಯಂಗ್ಯ ಚಿತ್ರವೊಂದನ್ನು ಇಂಟರ್‌ನೆಟ್ ಮೂಲಕ ಪ್ರಚಾರ ಮಾಡಿದ ಆಪಾದನೆ ಮೇಲೆ ಪ್ರಾಧ್ಯಾಪಕರೊಬ್ಬರನ್ನು ಕಾರಾಗೃಹಕ್ಕೆ ದೂಡಿದ್ದಾಳೆ. ತನ್ನ ಪಕ್ಷದವನೇ ಆಗಿದ್ದ ರೈಲ್ವೆ ಮಂತ್ರಿಯನ್ನು ಒಂದೇ ದಿನದಲ್ಲಿ, ಬಜೆಟ್ ಮಂಡಿಸಿದ ಮರುದಿನವೇ ಕೆಳಗಿಳಿಸಿದ ಮಹಿಳೆ. ತನಗೆ ಸರಿ ಎನಿಸಿದ್ದನ್ನು ಮಾಡಿಯೇ ತೀರುವ ಹಠಮಾರಿತನ. ಇದು ಇನ್ನೆಷ್ಟು ದಿನ ನಡೆದೀತೋ.

* * *

ಹಿಂದೆ ಸೋವಿಯೆತ್ ಒಕ್ಕೂಟದ ಅಧ್ಯಕ್ಷನಾಗಿದ್ದ ಬ್ರೆಜ್ನೇವ್ ಬಗ್ಗೆ ಒಂದು ಹಾಸ್ಯಚಟಾಕಿ ಪ್ರಚಲಿತವಾಗಿತ್ತು: ಪಾರ್ಲಿಮೆಂಟಿನಲ್ಲಿ ಭಾಷಣ ಮಾಡುವ ಸಂದರ್ಭ; ಯಾರೋ ಬರೆದುಕೊಟ್ಟಿದ್ದ ಭಾಷಣ. ಅದನ್ನು ಓದ ಬೇಕಿತ್ತು, ಭಾಷಣವನ್ನು ಅಚ್ಚುಮಾಡಿಕೊಡಲಾಗಿತ್ತು. ಸರಿ, ಈತ ಅದನ್ನು ಓದಲು ಆರಂಭಿಸಿದ. ಮೊದಲನೆ ಪುಟ ಮುಗಿದು ಎರಡನೆಯ ಪುಟಕ್ಕೆ ಬಂದಾಗ ಅದು ಮತ್ತೆ ಮೊದಲನೆಯ ಪುಟವೇ ಆಗಿತ್ತೆಂಬುದು ಸಹ ಈತನಿಗೆ ಭಾಸವಾಗಲಿಲ್ಲ, ಅದನ್ನೇ ಸಭೆಯು ಕೇಳಿಸಿಕೊಂಡಿತು. ಮೂರನೆಯ ಪುಟವೂ ಮೊದಲನೆಯ ಪುಟದ ಪ್ರತಿಯೇ! ಅದನ್ನೂ ಗಮನಿಸದೆ ಈತ ಓದುತ್ತಲೇ ಇದ್ದ. ಆಮೇಲೆ ಕಾರ್ಯದರ್ಶಿ ಬಂದು ಪುಟಗಳನ್ನು ಸರಿಯಾಗಿ ಜೋಡಿಸಿಕೊಟ್ಟ. ಅಚಾತುರ್ಯದಿಂದ ಮೊದಲನೆಯ ಪುಟದ ಮೂರು ಪ್ರತಿಗಳನ್ನಿರಿಸಲಾಗಿತ್ತು. ಓದಿದ ಮಹಾಶಯನಿಗೆ ತಾನು ಏನು ಓದುತ್ತಿದ್ದನೆಂಬ ಪರಿವೆಯೂ ಇಲ್ಲದೆ ಯಾಂತ್ರಿಕವಾಗಿ ಓದುತ್ತಿದ್ದ. ಸಭಾಸದರು ಮುಸಿಮುಸಿ ನಗುತ್ತ ತಮ್ಮ ಅಧ್ಯಕ್ಷನ ಅಪೂರ್ವ ಭಾಷಣವನ್ನು ಆಲಿಸುತ್ತಾ ಕುಳಿತಿದ್ದರು.

ಪ್ರಧಾನಿ ಮನಮೋಹನ ಸಿಂಗರು ಇತ್ತೀಚೆಗೆ ದಕ್ಷಿಣ ಕೊರಿಯಾಕ್ಕೆ ಭೇಟಿ ನೀಡಿ 'ಹಿಸ್ ಮಾಸ್ಟರ್ಸ್ ವಾಯ್ಸ್' ಗ್ರಾಮಫೋನ್ ರಿಕಾರ್ಡ್ ರೀತಿ ಮಾರ್ಚ್ ೨೬ರಂದು ಭಾಷಣ ಮಾಡಿದ ಹಿನ್ನೆಲೆಯಲ್ಲಿ ಬ್ರೆಜ್ನೇವ್ ನೆನಪು ಬಂದಿತು. ಆತನಂತೆ ಶ್ರೀ. ಸಿಂಗ್ ಸಹ 'ಕಾರ್ಬನ್ ಪ್ರತಿ' ಯನ್ನು ಲಕ್ಷಣವಾಗಿ ಓದಿದ್ದಾರೆ. ಯಜಮಾನನ ದನಿಯ ಪ್ರತಿಧ್ವನಿ ನಮ್ಮ ಪ್ರಧಾನಿಯದು. ಯಜಮಾನ ಯಾರೆಂದು ಹೇಳಬೇಕಾಗಿಲ್ಲವಷ್ಟೆ! ಯಥಾಪ್ರಕಾರ ಅವರು ಭಯೋತ್ಪಾದಕರ ವಿರುದ್ಧ ಸೆಣಸಬೇಕಾದ ಅಗತ್ಯವನ್ನು ಒತ್ತಿಹೇಳಿ, ಅಣ್ವಸ್ತ್ರಗಳು ಏನೇ ಆಗಲಿ ಅವರಿಗೆ ಸಿಗುವಂತಾಗ ಬಾರದೆಂಬ ಕಳಕಳಿಯ ಮಾತನ್ನಾಡಿದರು. ಅವರ ಅಭಿಪ್ರಾಯ ಸರ್ವಮಾನ್ಯ. ಆದರೆ ಪ್ರಶ್ನೆ ಇರುವುದು ಅಣ್ವಸ್ತ್ರಗಳನ್ನು ಭಾರತ, ಪಾಕಿಸ್ತಾನ, ಇಸ್ರೇಲ್, ಅಮೆರಿಕಾ, ಚೀಣಾ, ಮುಂತಾದ ದೇಶಗಳು ಹೊಂದಿರಬೇಕೆ ಎಂಬುದು. ಅಮೆರಿಕಾ ಸರ್ಕಾರವು ಭಯೋತ್ಪಾದಕರಿಗಿಂತ ಕಡಿಮೆ ಉಗ್ರವೇನಲ್ಲ; ಅದು ವಿಶ್ವದ ಅತ್ಯಂತ ಕರಾಳ ಭಯೋತ್ಪಾದಕ ರಾಷ್ಟ್ರ. ಕಳೆದ ಎಪ್ಪತ್ತು ವರ್ಷಗಳಲ್ಲಿ ಆ ದೇಶದ ಆಕ್ರಮಣ ನೀತಿ, ಜನಾಂಗ ಹತ್ಯೆ, ದುರಹಂಕಾರ, ಎಲ್ಲಾ ಚರಿತ್ರೆಯ ಪುಟಗಳಲ್ಲೂ ಸ್ಪಷ್ಟವಾಗಿದೆ. ಇಸ್ರೇಲ್ ಬಳಿ ಅಣ್ವಸ್ತ್ರ ಇರಲು ಅಡ್ಡಿಯಿಲ್ಲ, ಇರಾನ್ ಅದನ್ನು ಹೊಂದಬಾರದು! ಇದು ಮೋಸದ ತಂತ್ರವೆಂದು ಟರ್ಕಿಯ ಪ್ರಧಾನಿ ಎರ್ಡೋಗನ್ ಇತ್ತೀಚೆಗೆ ಉದ್ಗರಿಸಿದ್ದು ತರ್ಕಬದ್ಧವಾಗಿದೆ. ''ಭಾರತವೂ ಹೊಂದಬಾರದಿತ್ತು, ಆದರೆ ಹೊಂದಿದೆ; ಏನು ಮಾಡುವುದು, ಹೋಗಲಿ ಬಿಡಿ'' ಎಂಬುದು ಅಮೆರಿಕಾ ಧೋರಣೆ. ಹೇಗೂ ಪಾಕಿಸ್ತಾನವೂ ಹೊಂದಿದೆಯಲ್ಲ, ಎಂಬುದೇ ಸಮಾಧಾನ. ಅಣ್ವಸ್ತ್ರಗಳಿಂದ ಜಪಾನ್ ನಂತರ ಅಲ್ಲದಿದ್ದರೂ ಅಮೆರಿಕಾ ಲಕ್ಷಾಂತರ ಜನರನ್ನು ಕೊಲ್ಲುತ್ತಾ ಬಂದಿದೆ; ಆ ಮಟ್ಟದಲ್ಲಿ ಕೊಲ್ಲದಿರುವ ರಾಷ್ಟ್ರಗಳೆಂದರೆ ಭಾರತ, ಪಾಕಿಸ್ತಾನ, ಚೀಣಾ ಮತ್ತು ರಷ್ಯಾ ಮಾತ್ರ. ಅಮೆರಿಕಾ ಮತ್ತು ಅದರ ಮಿತ್ರರಾಷ್ಟ್ರಗಳಿಗೆ ಜಪಾನ್ ನಂತರ ಅಣ್ವಸ್ತ್ರಗಳು ಭಾವೀ ಶತ್ರುಪಾತಕಿಗಳನ್ನು ಬೆದರಿಸಲು ಅಗತ್ಯವೆಂಬ ವಾದವನ್ನು ಮುಂದಿಡಲಾಗಿದೆ. ಅದನ್ನು 'ಡಿಟರೆನ್ಸ್' ಎನ್ನುತ್ತಾರೆ. 'ಡಿಟರೆನ್ಸ್' ಎಂದರೆ ತಡೆಯೊಡ್ಡುವುದು, ಹಿಂಜರಿಸುವುದು, ಭಯ ಹುಟ್ಟಿಸುವುದು. ಆ ಕಾರಣವು ಸರಿಯಾದರೆ, ಅಣ್ವಸ್ತ್ರಗಳು ಎಲ್ಲ ದೇಶಗಳಿಗೂ ಬೇಕೆಂದು ಹೇಳಬೇಕಾದೀತು. ಇಸ್ರೇಲ್‌ಗೆ ಬೇಕು, ಇರಾನ್‌ಗೆ ಬೇಡ ಎಂಬುದು ಹೇಗೆ ಸಮಂಜಸ? ಅಣ್ವಸ್ತ್ರಗಳು ಯಾರ ಬಳಿಯೂ ಇರಕೂಡದೆಂಬುದು ಭಾರತದ ನೀತಿಯಾಗಿತ್ತು. ಅದನ್ನು ಕೊನೆಗಾಣಿಸಿ ಈಗ ಭಾರತವು ಯಜಮಾನ ದೇಶದ ಮಾತುಗಳನ್ನು ಪ್ರತಿಧ್ವನಿಸುತ್ತಿದೆ. ಮಾನವ ಜನಾಂಗದ ಹಿತಕ್ಕೆ ಈ ನೀತಿಯು ಮಾರಕವಾದ್ದು. ಎಲ್ಲರಿಗೂ ಅಣ್ವಸ್ತ್ರಗಳಿರಲಿ ಎಂಬ ಮೊಂಡು ವಾದದ ಬದಲು ಅವು ಯಾರಿಗೂ ಕೂಡದೆಂಬುದು ಮಾನವ ಪರವಾದ ನೀತಿ. ಅದನ್ನುಚ್ಚರಿಸುವ ಹಕ್ಕನ್ನು ಕಳೆದುಕೊಂಡ ಭಾರತವು ಕ್ರಮೇಣ ಅಮೆರಿಕಾದ ತೆಕ್ಕೆಗೆ ಸಿಲುಕುತ್ತಾ ಬಂದಿರುವುದು ನಮ್ಮ ದೇಶದ ಒಂದು ದುರಂತ.

''ಅಭಿವೃದ್ಧಿ'' ಎಂಬುದು ಪರಮಾಣು ಸ್ಥಾವರಗಳ ಮುಖಾಂತರ ಉತ್ಪಾದಿಸಲಾಗುವ ವಿದ್ಯುತ್ತು ಇಲ್ಲದಿದ್ದರೆ ಸಾಧ್ಯವಿಲ್ಲವೆಂಬ ಮಂತ್ರೋಚ್ಚಾರಣೆಯು ಹೆಚ್ಚು ಹೆಚ್ಚು ಕೇಳಿಬರುತ್ತಿದೆ. ಯಾವುದು ಅಭಿವೃದ್ಧಿ ಮತ್ತು ಅದರಿಂದ ಯಾರ ಅಭಿವೃದ್ಧಿಯಾಗಿದೆ ಎಂಬುದು ಪ್ರತ್ಯಕ್ಷ ಅನುಭವ. ನ್ಯೂಕ್ಲಿಯರ್ ರೀಯಾಕ್ಟರ್‌ಗಳನ್ನು ಮಾರುವವರ ದೃಷ್ಟಿಯು ನಮ್ಮ ದೇಶದ ನೀತಿಗೆ ಸಮರ್ಥನೆ ಯಾಗುವುದಿಲ್ಲ, ಮನಮೋಹನ ಸಿಂಗರು ಅಣ್ವಸ್ತ್ರ ಮತ್ತು ಪರಮಾಣು ಸ್ಥಾವರಗಳ ಬಗ್ಗೆ ಅತಿಯಾದ ಆಸಕ್ತಿ ತೋರದಿದ್ದರೆ ದೇಶಕ್ಕೆ ಕ್ಷೇಮ.

* * *

ನಮ್ಮ ರಾಜ್ಯದ ಆಕಾಶವಾಣಿ ಕೇಂದ್ರಗಳು ವ್ಯವಹರಿಸುವ ಕ್ರಮ ನೋಡಿದರೆ ಅವಕ್ಕೆ ಸ್ವಾತಂತ್ರ್ಯ ಮತ್ತು ಸ್ವಾಯತ್ತತೆ ಎಳ್ಳಷ್ಟೂ ಇಲ್ಲವೇನೋ ಎನಿಸುತ್ತದೆ. ಸ್ವಾಯತ್ತತೆ ಇಲ್ಲದಿದ್ದರೆ ಹೋಗಲಿ, ಅತಿಸಾಮಾನ್ಯ ತಿಳಿವಳಿಕೆಯಾದರೂ ಬೇಡವೆ? ಅವಕ್ಕೆ ಹಿಂದಿಯ ಪ್ರಚಾರ ಮಾಡುವುದಷ್ಟೇ ಮಹದುದ್ದೇಶ. ಇದರಿಂದಾಗಿ ಆಕಾಶವಾಣಿ ಬಿತ್ತರಿಸುವ ತುಣುಕುಗಳನ್ನು ಕೇಳುತ್ತಿದ್ದರೆ ರಕ್ತದೊತ್ತಡ ಹೆಚ್ಚುವ ಸಂಭವವಿದೆ. ಎರಡು-ಮೂರು ಉದಾಹರಣೆಗಳನ್ನು ಮಾತ್ರ ಕೊಟ್ಟರೆ ಸಾಕು: ಶಾಲೆಗಳಿಗೆ ಮಕ್ಕಳು ಹೋಗಬೇಕೆಂಬ ''ಸಂದೇಶ'' ಕೊಡುವ ಜಾಹಿರಾತೊಂದು ಪದೇ ಪದೇ ಬಿತ್ತರಿಸಲಾಗುತ್ತದೆ. ಸಂಭ್ರಮದಿಂದ ಶಾಲೆಗೆ ಹೋಗುವುದಾಗಿ ಮಕ್ಕಳೇ ಹೇಳಿಕೊಳ್ಳುವ ಹಿಂದಿ ಹಾಡು ಅದು. ಕರ್ನಾಟಕದ ಮಕ್ಕಳಿಗೆ ಅದನ್ನು ಯಾವ ಭಾಷೆಯಲ್ಲಿ ಹೇಳಬೇಕೆಂಬ ಅರಿವಿಲ್ಲದ ಆಕಾಶವಾಣಿಯ ಮುಖಕ್ಕೆ ಮಂಗಳಾರತಿ ಎತ್ತಬೇಕು. ಅಂತಹ ಒಂದು ಹಾಡನ್ನು ಕನ್ನಡದಲ್ಲಿ ಬರೆದು ಹಾಡುವ ಯೋಗ್ಯತೆ ಇಲ್ಲದ ರಾಜ್ಯವೇ ನಮ್ಮದು? ಒಕ್ಕೂಟ ವ್ಯವಸ್ಥೆ ಇದೆಯೆಂದು ಹೇಳಿಕೊಳ್ಳುವ ಪ್ರಜಾಪ್ರಭುತ್ವದಲ್ಲಿ ಇಂತಹ ಅಸಭ್ಯ ಮತ್ತು ಅಸಹ್ಯ ಹಿಂದಿ ಅಹಂಕಾರಕ್ಕೆ ಕಡಿವಾಣ ಹಾಕಬೇಕು. ಇನ್ನೊಂದು ಜಾಹಿರಾತು ಭಯೋತ್ಪಾದಕರ ವಿರುದ್ಧದ ಎಚ್ಚರಿಕೆ: ಹಾದಿಬೀದಿಗಳಲ್ಲಿ ಬಿದ್ದಿರುವ ವಸ್ತುಗಳು ಅಪಾಯಕರವೆಂದು ತೋರಿದರೆ ಕೂಡಲೆ ಪೊಲೀಸರಿಗೆ ಹೇಳಬೇಕೆಂಬ ಸೂಚನೆ ಅದರಲ್ಲಿದೆ. ಹಾದಿಯಲ್ಲಿ ಹೋಗುವಾಗ ಎಡಕ್ಕೆ-ಬಲಕ್ಕೆ-ಮೇಲಕ್ಕೆ-ಕೆಳಕ್ಕೆ ನೋಡುತ್ತಾ ಸಾಗಬೇಕಂತೆ. ಆ ಹಾಡಿನ ಸಾಲೊಂದು ''ಮೇಲಕ್ಕೂ ಅಲ್ಲ, ಕೆಳಕ್ಕೂ'' ಎಂದಿದೆ. ಅದು ಹಿಂದಿ ಘೋಷಣೆಯ ಕೆಟ್ಟ ಕನ್ನಡ ಭಾಷಾಂತರ. ಹಾಡಿರುವವನೂ ಯಾರೋ ಹಿಂದಿಯವನೇ. ''ಮೇಲಕ್ಕೆ ಮಾತ್ರವಲ್ಲ, ಕೆಳಕ್ಕೂ ನೋಡು''ಎಂದು ಹೇಳುವಾಗ ಕನ್ನಡದ ಕೊಲೆ ನಡೆದಿದೆ. ಅದೇನು ಮಹಾ, ನಮ್ಮ ದೃಶ್ಯ ಮಾಧ್ಯಮಗಳಲ್ಲಿ ಕನ್ನಡ ಕುವರರೇ ಕನ್ನಡವನ್ನು ಕೊಲ್ಲುತ್ತಿದ್ದಾರಲ್ಲ, ಆಕಾಶವಾಣಿ ಕೊಂದರೇನು ಎನ್ನುತ್ತಾರೇನೊ! ನವೆಂಬರ್ ಕನ್ನಡ ವೀರರಿಗೆ ಇದೆಲ್ಲಾ ನಗಣ್ಯ ಇರಬೇಕು. ಮೂರನೆಯ ನಿದರ್ಶನ: ಆಕಾಶವಾಣಿ ಅಮೃತವರ್ಷಿಣಿ ವಿಭಾಗವು ಶುದ್ಧಾಂಗ ಪುರೋಹಿತಶಾಹಿ ಭಕ್ತಿ ಮಾದರಿಯಲ್ಲಿ ಕೆಲಸ ಮಾಡುತ್ತದೆ. ಅದರಲ್ಲಿ ಸಂಗೀತವೆಲ್ಲಾ ದೈವಮಯ, ಭಕ್ತಿಮಯ. ಅಂತಹ ಅಚಾರಿತ್ರಿಕ ವ್ಯಾಖ್ಯಾನಕ್ಕೆ ಸರ್ಕಾರದ ಮಾಧ್ಯಮವು ಬಳಕೆಯಾಗುತ್ತಿದೆ. ಪ್ರಸ್ತುತ ಹೇಳ ಹೊರಟಿದ್ದು ಅದಲ್ಲ, ಹೇಗೆ ಆಕಾಶವಾಣಿಯು ಹಿಂದಿಮಯ ಎಂಬುದು ವಿಷಯ. ಅಮೃತವರ್ಷಿಣಿ ಯಲ್ಲಿ ಬೆಳಿಗ್ಗೆ 'ನಾದಯೋಗ' ಎಂಬ ಐದು ನಿಮಿಷಗಳ ವೇದಪಠಣವಿರುತ್ತದೆ. ಪಠಿಸುವವನು ಯಾವನೋ ಹಿಂದಿ ಬ್ರಾಹ್ಮಣನಿರಬೇಕು, ಪೀಠಿಕೆಯೂ ಅಂತಹ ವನದೇ. ವೇದದ ಮಂತ್ರಗಳನ್ನು ಲಕ್ಷಣವಾಗಿ ಉಚ್ಚರಿಸ ಬಲ್ಲ ಕನ್ನಡಿಗರಿಗೆ ಇಷ್ಟೊಂದು ಕೊರತೆಯೆ? ಅದಕ್ಕೂ ದೆಹಲಿಯ ಆಣತಿಯಂತೆ ಹಿಂದಿ ಉಚ್ಚಾರಣೆಯ ವೇದಮಂತ್ರ ಏಕೆ ಬೇಕು? ಇದು ನಾಚಿಕೆಗೇಡೆಂದು ಆಕಾಶವಾಣಿ ನಿರ್ದೇಶಕರಿಗೆ ಅನಿಸದಿರುವುದು

ಶೋಚನೀಯ. ಒಟ್ಟಿನಲ್ಲಿ ದೇಶಭಕ್ತಿಯು ಹಿಂದ ಭಕ್ತಿಯನ್ನು ಅನುಸರಿಸಿಯೇ ಬರಬೇಕು !! ಅದು ಆಕಾಶವಾಣಿಯ ಸಂಹಿತೆ.

✶ ✶ ✶

ಮತಧರ್ಮಗಳು ಕೇವಲ ಮೌಢ್ಯವನ್ನು ಹರಡುತ್ತವೆಯೋ ಅಥವಾ ಮಾನವೀಯ ಸಂಬಂಧಗಳನ್ನು ಸಹ ಪೋಷಿಸುತ್ತವೆಯೋ ಎಂಬುದು ನಿರಂತರವಾಗಿ ಚರ್ಚೆಗೆ ಬಂದಿರುವ ವಿಷಯ. ನಂಬಿಕೆ, ಶ್ರದ್ಧೆ, ಆಸರೆ, ಸತ್ಯ ದರ್ಶನ, ಮುಂತಾದ ಹೆಸರುಗಳಲ್ಲಿ ಅದು ಸಾಕಷ್ಟು ಕಲಹಗಳಿಗೆ ಪ್ರಚೋದನೆ ನೀಡಿರುವುದು ಇತಿಹಾಸ. ಪ್ರಾಚೀನ ಮತಧರ್ಮ ಗ್ರಂಥಗಳು ನಿಖರವಾಗಿ ಏನು ಹೇಳಿವೆ, ಅವೆಲ್ಲಾ ಸದಾಕಾಲಕ್ಕೂ ಹಾಗೆಯೇ ಮಾನ್ಯವೆನಿಸಬೇಕೆ, ಇತ್ಯಾದಿ ಪ್ರಶ್ನೆಗಳನ್ನು ಬಹುಕಾಲದಿಂದ ಹಲವರು ಎತ್ತುತ್ತಾ ಬಂದಿದ್ದಾರೆ. ಆ ಪ್ರಾಚೀನ ಧರ್ಮ ಗ್ರಂಥಗಳ ತಥಾಕಥಿತ ಸತ್ಯಬೋಧನೆಯು ಸಮಾಜದಲ್ಲಿ ಪದೇಪದೇ ಸಂಘರ್ಷಕ್ಕೆ ಕಾರಣವಾಗಿರುವಂತೆ ಅವುಗಳ ಅನೇಕ ನೀತಿಸೂತ್ರಗಳು ಕಿರುಕುಳಗಳಿಗೆ ಅಡಿಪಾಯವಾಗಿವೆ. ಹಾಗೆ ಹೇಳಿದಾಗೆಲ್ಲಾ ಒಂದು ಪ್ರತಿಕ್ರಿಯೆ ಸಿದ್ಧವಾಗಿರುತ್ತದೆ : ಧರ್ಮಗ್ರಂಥದ ನಿಜಾರ್ಥ ಹಾಗಿಲ್ಲ, ಕೆಲವರ ತಪ್ಪು ಅರ್ಥೈಸುವಿಕೆಯಿಂದಾಗಿ ಮುಗ್ಗಟ್ಟು ಉಂಟಾಗಿದೆ, ಎಂದು. ಅರ್ಥವೋ-ಅನರ್ಥವೋ, ಅಂತೂ ಸಮಾಜದ ಕೆಲವು ಬಣಗಳಿಗೆ ಅಪಾರ ಘಾಸಿಯಾಗಿರುವುದಂತೂ ನಿಜ. ಇಂದಿಗೂ ಅಂಥದೇ ಕಪಿಮುಷ್ಟಿ, ಅಂಥದೇ ಅನ್ಯಾಯ, ಅಂಥದೇ ಅಮಾನವೀಯತೆ. ಹಾಗೆಂದು ಹೇಳಿದರೆ ಕೆಲವರು ಎಷ್ಟೊಂದು ಮುನಿಸಿಕೊಳ್ಳುತ್ತಾರೆ ಎಂದರೆ ತೀರಾ ಅತಾರ್ಕಿಕವಾಗಿ ಮಡೆಸ್ನಾನವನ್ನೋ, ಮೂರು ಬಾರಿ ಹೇಳಲಾದ ತಲಾಕನ್ನೋ, ಜೀಸಸ್‌ನ ಮಾತೆಯ ಕನ್ಯಾತ್ವವನ್ನೋ ಸಮರ್ಥಿಸಲು ತವಕಿಸುತ್ತಾರೆ. ಇದೇ ಮಾರ್ಚ್ ೧೩ರಂದು ದರ್-ಉಲ್ ಉಲೂಮ್ ದೇವ್‌ಬಂದ್ ಎಂಬ ಇಸ್ಲಾಮಿ ಧರ್ಮಕೇಂದ್ರವು ಹೊರಡಿಸಿದ ಆಜ್ಞೆ ಅಥವಾ ತಿಳಿವು (ಫತ್ವಾ) ಇದಕ್ಕೊಂದು ನಿದರ್ಶನ. ಮೂರ್ಖತನಕ್ಕೆ ಪರಮಾವಧಿಯೇ ಇಲ್ಲವೆಂಬುದನ್ನು ಈ ಸಂಸ್ಥೆಯು ಆಗಾಗ್ಗೆ ತೋರ್ಪಡಿಸುತ್ತಿರುತ್ತದೆ. ಈಚೆಗೆ ಮತಧರ್ಮದ ಪರಮಾರ್ಥವೊಂದನ್ನು ಅದು ಶ್ರುತಪಡಿಸಿದೆ : ಪಾನಮತ್ತನಾಗಿರುವಾಗಲಾದರೂ ಸರಿಯೆ, ಒಬ್ಬ ಗಂಡಸು ತನ್ನ ಹೆಂಡತಿಗೆ ಮೂರು ಬಾರಿ 'ತಲಾಕ್' ಹೇಳಿದರೆ ಮುಗಿಯಿತು, ಅವರ ದಾಂಪತ್ಯ ಕೊನೆಗೊಂಡಂತೆಯೇ, ಎಂದು. ಅದನ್ನು ಆಧುನಿಕ ಕಾಲದಲ್ಲಿ ಸಂಚಾರಿ ದೂರವಾಣಿಯಲ್ಲಿ ಹೇಳಿದರೂ ಸಾಕಂತೆ, ಅದು ಧಾರ್ಮಿಕವಾಗಿ ಮಾನ್ಯ. ಈ ಭಾಷ್ಯವನ್ನು ಬರೆದ ಮೌಲ್ವಿ ಮಹಾಪಂಡಿತ. ಅವನು ಹೇಳಿದ, ಮದುವೆಯೆಂಬುದು ಒಂದು ಗಾಜು ಮತ್ತು ತಲಾಕ್ ಎಂಬುದು ಒಂದು ಕಲ್ಲು, ಹೆಂಡ ಕುಡಿದಾಗ ಕಲ್ಲಿನಿಂದ ಗಾಜಿಗೆ ಹೊಡೆದರೆ ಅದು ಪುಡಿಪುಡಿಯಾಗದಿದ್ದೀತೆ ! ಅದು ''ಧರ್ಮಸ್ವಭಾವ.'' ಕೌಟುಂಬಿಕ ಸಂಬಂಧ ಎಂಬುದು ಇಷ್ಟು ಅಗ್ಗ ಎಂದಾದರೆ ಸಂಸಾರದ ಸುಖಕ್ಕೆ ಪಾರವುಂಟೆ !! ಮಹಿಳೆಯ ಮೇಲಿನ ದೌರ್ಜನ್ಯವಷ್ಟೇ ಇಲ್ಲಿಯ ಪಾತಕವಲ್ಲ, ಮತಧರ್ಮವನ್ನು ಚಾರಿತ್ರಿಕ ಸಂಗತಿಗಳಿಂದ ಹೊರತುಪಡಿಸಿ ನೋಡುವ ಪರಿಯೇ ಒಂದು ಮಹಾಪಾತಕ. ಎಲ್ಲ ಮತಧರ್ಮಗಳ ಹುಳುಕೂ ಇದೇ, ಆದರೆ ಅದಕ್ಕೆ ಘನವಾದ ಪದಗಳನ್ನು ಬಳಸಿ ವಂಚಿಸಲಾಗುತ್ತದೆ. ಇತಿಹಾಸ ಪ್ರಜ್ಞೆ ಮತ್ತು ವೈಚಾರಿಕತೆ ಅದಕ್ಕೆ ಮದ್ದು.

✶ ✶ ✶

ಮಾರ್ಚ್‌ನ ಮಧ್ಯಭಾಗದಲ್ಲಿ ವೆಂಡಿ ಶೆರ್ಮನ್ ಎಂಬೊಬ್ಬಾಕೆ ಭಾರತಕ್ಕೆ ಬಂದಿದ್ದಳು. ಅಮೆರಿಕಾ ಸರ್ಕಾರದ ವಿದೇಶಾಂಗ ಸಚಿವಾಲಯದಲ್ಲಿ ಆಕೆ ಎಂಥದೋ ಅಧಿಕಾರಿಣಿ. ಆಕೆಯಂಥವರು ಪ್ರತಿದಿನ ದೆಹಲಿಗೆ ಬಂದಿಳಿಯುತ್ತಿರುತ್ತಾರೆ, ತೆರಳುತ್ತಿರುತ್ತಾರೆ. ಎಲ್ಲರೂ ಉಪದೇಶ ಸಹಸ್ರ ನೀಡುವ ನಿಷ್ಣಾತರೇ. ಅವರಿಗೆಲ್ಲಾ ಮಣೆ ಹಾಕುವ ನಮ್ಮ ಕೇಂದ್ರ ಸರ್ಕಾರಕ್ಕೆ ಸನ್ನಿ ಹಿಡಿದಿದೆ. ವೆಂಡಿ ಪ್ರಮುಖವಾಗಿ ಹೇಳಿದ್ದಿದು : ''ಭಾರತಕ್ಕೆ ತೈಲದ ಅವಶ್ಯಕತೆ ಇದೆ, ನಿಜ; ಆದರೆ ಅದಕ್ಕಾಗಿ ಅದು ಇರಾನನ್ನು ಆಶ್ರಯಿಸಕೂಡದು. ತೈಲ ಮಾರುವ ಹತ್ತಾರು ದೇಶಗಳು ಇವೆ, ಅಲ್ಲಿಂದ ತೈಲ ಪಡೆದುಕೊಳ್ಳಿರಿ. ಇರಾನ್ ಸಂಬಂಧವಾಗಿ ಭಾರತಕ್ಕೆ ಕೆಲವು ಅಂತರರಾಷ್ಟ್ರೀಯ ಜವಾಬ್ದಾರಿಗಳಿವೆ. ಅವನ್ನು ಪೂರೈಸಬೇಕಾದ್ದು ಆದ್ಯತೆಯ ವಿಷಯ.'' ಅಂದರೆ, ಅಮೆರಿಕಾ ಇರಾನಿಗೆ ಆರ್ಥಿಕ ದಿಗ್ಬಂಧನ ವಿಧಿಸಿದೆ, ದೊಡ್ಡಣ್ಣ ಮಾಡಿದಂತೆ ಭಾರತವೂ ಮಾಡಬೇಕು, ಎಂದರ್ಥ.

ಒಂದು ಕಡೆಯಿಂದ ಇಂತಹ ಭರ್ತ್ಸನೆ, ಇನ್ನೊಂದು ಕಡೆಯಿಂದ ಬಾಯಿಗೆ ಚಾಕೊಲೇಟ್ ತುರುಕುವ ಚಮತ್ಕಾರ. ಪಾಕಿಸ್ತಾನದಲ್ಲಿ ಹಫೀಜ್ ಮುಹಮ್ಮದ್ ಸಯ್ಯದ್ ಎಂಬ ಭಯೋತ್ಪಾದಕನಿದ್ದಾನೆ, ಅವನು ಮುಂಬೈನಲ್ಲಿ ಬಾಂಬುಗಳನ್ನು ಸುರಿಸುವ ಯೋಜನೆಯ ಸೂತ್ರಧಾರಿಯಾಗಿದ್ದ. ''ಅದಕ್ಕೆ ಪುರಾವೆ ಸಾಲದು, ಆದ್ದರಿಂದ ಅವನನ್ನು ನಾವು ದಸ್ತಗಿರಿ ಮಾಡುವುದಿಲ್ಲ'' ಎಂಬುದು ಪಾಕಿಸ್ತಾನ ಸರ್ಕಾರದ ನಿಲುವು. ಈ ಹಿನ್ನೆಲೆಯಲ್ಲಿ ಅಮೆರಿಕಾದ ಚಾಕೊಲೇಟ್ ಸೇವೆ : ಅವನನ್ನು ಯಾರಾದರೂ ಹಿಡಿದುಕೊಟ್ಟರೆ ಒಂದು ಕೋಟಿ ಡಾಲರ್ ಬಹುಮಾನ ನೀಡಲಾಗುವುದು, ಎಂದು. ಎಲ್ಲೆಲ್ಲೋ ಇರುವವರನ್ನೆಲ್ಲಾ ಕದ್ದು ಹಿಡಿದು ಸಾಗಿಸುವ ಅಮೆರಿಕಾಕ್ಕೆ ಹಫೀಜನನ್ನು ಹಿಡಿಯಲಾಗದೇಕೆ ? ಭಾರತದ ಸರ್ಕಾರಕ್ಕೆ ಹುಮ್ಮಸ್ಸು ತುಂಬಿ ''ಶಹಬ್ಬಾಸ್, ಅಮೆರಿಕಾ, ನಿನ್ನಂತಹ ಮಿತ್ರ ಬೇರಾರುಂಟು ?'' ಎನಿಸಿಕೊಳ್ಳುವ ಹುನ್ನಾರ ಇದು. ಅಮೆರಿಕಾ ನಿರೀಕ್ಷಿಸಿದಂತೆ ನಮ್ಮ ದೇಶದ ವಿದೇಶಾಂಗ ಸಚಿವ ಶ್ರೀ. ಎಸ್. ಎಂ. ಕೃಷ್ಣ ಅಮೆರಿಕಾದ ಬಹುಮಾನ ಘೋಷಣೆಯನ್ನು ಸಂತಸದಿಂದ ಸ್ವಾಗತಿಸಿದರು. ಅಮೆರಿಕಾದ ರಾಜಕೀಯ ಚೆಲ್ಲಾಟವು ಅವರಿಗೆ ತಿಳಿಯದೆ ? ಒಬ್ಬ ಹಫೀಜ್‌ನನ್ನು ಹಿಡಿದರೆ ಭಯೋತ್ಪಾದನೆಯು ಅಂತ್ಯಗೊಳ್ಳುತ್ತದೆಯೆ ? ಅಲ್ಲದೆ, ಅಮೆರಿಕಾದ ಚದುರಂಗ ದಾಟದಲ್ಲಿ ಈ ನಡೆಯ ಮೂಲಾರ್ಥವೇನು ?

✶ ✶ ✶

ಮೌಢ್ಯಕ್ಕೆ ಮೌಢ್ಯವೇ ಉತ್ತರ ಎಂಬ ಹೊಸ ಸೂತ್ರವನ್ನು 'ಕೃಷಿತಜ್ಞ' ಡಾ॥ ಪರಮೇಶ್ವರ ಅವರ ಕಾಂಗ್ರೆಸ್ ಪಕ್ಷ ರೂಪಿಸಿ ಕಾರ್ಯಗತಗೊಳಿಸಿದೆ. ತನ್ನ ಘೋಷಿತ ಯೋಜನೆಗಳನ್ನೆಂದೂ ಗಂಭೀರವಾಗಿ ತೆಗೆದುಕೊಂಡಿರದ ಕಾಂಗ್ರೆಸ್ ಹೊಸ ಸೂತ್ರವನ್ನು ಜಾಗ್ರತೆ ಅನುಷ್ಠಾನಕ್ಕೆ ತಂದಿದೆ. ಭಾರತೀಯ ಜನತಾ ಪಕ್ಷದ ಬೆನ್ನೆಲುಬು ಮಧ್ಯಮ ವರ್ಗದಲ್ಲಿ ಹೆಚ್ಚಿರುವ ಮತಧರ್ಮದ ಬಗೆಗಿನ ತೋರಿಕೆಯ ಆಸ್ಥೆ. ಆಸ್ಥೆಯು ನೈಜವೋ ಅಥವಾ ಲಾಭದ ಆಕಾಂಕ್ಷೆಯಿಂದ ಪ್ರೇರಿತ ವಾದುದೋ, ಅದು ಬೇರೆ ಪ್ರಶ್ನೆ. ಉದಾಹರಣೆಗೆ, ಸೌಂದರ್ಯ ಲಹರಿಯ ಪಠಣ. ಅದು ಮನೆಗಳಿಂದ ಸಭಾಗೃಹಗಳಿಗೆ ಬಂದು, ಕಡೆಗೆ ಬೆಂಗಳೂರು ಅರಮನೆ ಆವರಣವನ್ನು ಪ್ರವೇಶಿಸಿ ಲಾಲ ಕೃಷ್ಣ ಅಧ್ವಾನಿಯವರಿಗೆ ವೇದಿಕೆಯನ್ನು ನಿರ್ಮಿಸಿಕೊಟ್ಟಿತು. ಕಾಂಗ್ರೆಸ್ ಅದನ್ನು ಅನುಕರಿಸಿ ಲಲಿತಾ ಸಹಸ್ರನಾಮ ಪಠಣ ಮತ್ತು ಅರ್ಚನೆಯನ್ನು ಸಾರ್ವಜನಿಕಗೊಳಿಸುವ ಯತ್ನದಲ್ಲಿ ಮೊದಲಿಗೆ ಬೆಂಗಳೂರಿನ ಪದ್ಮನಾಭ ನಗರದಲ್ಲಿ ಅಲ್ಪ ಯಶಸ್ಸು ಗಳಿಸಿದೆ. ಸೋನಿಯಾ ಸಹಸ್ರನಾಮದಿಂದ ಫಲಿಸದಿದ್ದುದನ್ನು ಲಲಿತೆಯ ಅನುಗ್ರಹದಿಂದ ಪಡೆಯುವ ಭ್ರಮೆ ಆ ಪಕ್ಷಕ್ಕೆ. ●



ಪ್ರೊಫೆಸರ್ ಬರಗೂರು ರಾಮಚಂದ್ರಪ್ಪ ಅವರು 2009-10ರ ಅವಧಿಯಲ್ಲಿ 'ಭೂಮಿತಾಯಿ' ಚಲನಚಿತ್ರಕ್ಕಾಗಿ ಸಿದ್ಧಗೊಳಿಸಿದ ಸಂಭಾಷಣೆಯು ಆ ವರ್ಷದ ಅತ್ಯುತ್ತಮ ಸಂಭಾಷಣೆಯೆಂದು ಪರಿಗಣಿತವಾಗಿದೆ. ಈ ಪ್ರಶಸ್ತಿಗೆ ಪ್ರೊ॥ ಬರಗೂರರು ಭಾಜನರಾಗಿದ್ದಾರೆ. ಅವರಿಗೆ 'ಹೊಸತು' ಹಾರ್ದಿಕ ಅಭಿನಂದನೆ ಸಲ್ಲಿಸುತ್ತದೆ.




## ಮಾರ್ಚ್ ಸಂಚಿಕೆ

ಹಸಿರ ಆವಿಷ್ಕಾರಗಳಿಲ್ಲದೆ - ಬಿಸಿಲ ಬೇಗೆಗೆ ಬಸವಳಿದು ನಿಂತಂತಿರುವ ಕೊಂಬೆ-ರೆಂಬೆಗಳಿಲ್ಲದ ಒಂಟಿ ಮರವೊಂದರ ಹಿನ್ನೆಲೆಯಲ್ಲಿ ಹೊಂದಿಕೊಂಡಿರುವ ಬೋಳಾದ ಬಯಲ ಪ್ರದೇಶದಡಿಯಲ್ಲಿ - ರಾಜ್ಯದ ರಾಜಕೀಯದ ಆರ್ಥಿಕದ ಪ್ರತೀಕವೆ ಎಂಬ ಪ್ರಶ್ನೆಯನ್ನೆತ್ತಿಕೊಂಡ ಮುಖಚಿತ್ರ ಹೊಂದಿರುವ ಮಾರ್ಚಿ ತಿಂಗಳ 'ಹೊಸತು' ಮತ್ತಷ್ಟೂ ಹೊಚ್ಚ ಹೊಸತನ್ನು ನೀಡಲಿದೆ ಎಂಬ ಸುಳಿವಿಗೆಡೆ ನೀಡಿ ಕೈಗೆತ್ತಿಸಿಕೊಂಡಿತು.

ಅಶ್ಲೀಲ ಚಿತ್ರವೀಕ್ಷಣೆಯ ನೀತಿಪಾಠ ನೀಡಹೊರಟ ಸಂಪಾದಕ ಮಂಡಳಿಯ ಬದರೀನಾಥರಾವ್ ಅವರು ಬರೋಬರಿ ಪುಟವೆರಡುವರೆಯ ವಿವರಣಾ ನಿರೂಪಣೆಯಲ್ಲಿ - ತಮ್ಮ ಮಾತುಗಾರಿಕಾ ಚಳಕದಿಂದ ಶ್ಲೀಲ-ಅಶ್ಲೀಲವೆಂದು ವಿಂಗಡಿಸುತ್ತಾ ಶ್ರೀರಾಮಸೇನೆ, ನಿತ್ಯಾನಂದಸ್ವಾಮಿ ಎಂದು ನಮಗರಿವಿಲ್ಲದೆಯೇ ಡಿಲ್ಲಿಯವರೆಗೂ ಕೊಂಡೊಯ್ದು ನಮ್ಮಿಂದ ಸರಿ ಸರಿ ಎಂದು ಶಿರದೂಗಿಸಿ ಸೈಸೈ ಎನಿಸಿಕೊಂಡಿದ್ದಾರೆ.

ಈ ತಿಂಗಳ ಅಂಕಣದಲ್ಲಿ ಸಂಪಾದಕ ಮಂಡಳಿಯ ಹಲವರಿಂದ ಕೆಲವಾರು ವಿಚಾರ ವಿಮರ್ಶನೆಗಳು ಲಗು ಬಿಗು ಧೋರಣೆಯ ಸಮನ್ವಯ ರೀತಿಯಲ್ಲಿ ನಡೆದಿರುವುದು ಮಾರ್ಚಿ ತಿಂಗಳ ವಿಶಿಷ್ಟತೆಯಾಗಿರಲೂ ಸಾಕು. ಮತೀಯವಾದಿಗಳ ಅಟ್ಟಹಾಸವನ್ನು ಮಟ್ಟ ಹಾಕಬೇಕು ಎಂದೇ ಹೇಳಹೊರಟ ಸಿ. ಆರ್. ಕೃಷ್ಣರಾವ್ ತಮ್ಮ ಖಡಕ್ ಮಾತಿನ ನವಿರಾದ ಧಾಟಿಯಿಂದ ಉಭಯತರರ ಮೆಚ್ಚುಗೆ ಗಳಿಸುತ್ತಾರೆ.

ಜನಸಾಮಾನ್ಯರಿಗೆ ಏನೇನೂ ಅರ್ಥವಾಗದ ನ್ಯಾನೋ ವೈದ್ಯಕೀಯದ ಕುರಿತಾಗಿ ಏನು ನಿರೀಕ್ಷಿಸಬಹುದೆಂಬ ಬಗ್ಗೆ ವೈದ್ಯಕೀಯ ಭಾಷೆಯಲ್ಲಿ ಡಾ|| ನಾ. ಸೋಮೇಶ್ವರರು ದಾಖಲಿತ ರೀತಿಯಿಂದ ಆಧಾರಸಹಿತ ವಿವರಿಸಿ ವಿಷಯಾಸಕ್ತರ ಗಮನ ಸೆಳೆದಿದ್ದಾರೆ.

ಶಿರಸಿಯ ಪ್ರಾಧ್ಯಾಪಕ ಪಿ. ಬಿ. ಪ್ರಸನ್ನರಿಂದ ಸಂಪನ್ನಗೊಂಡ ಲಘು ಹಾಸ್ಯ ಮಿಶ್ರಿತ ಧಾಟಿಯ 'ನೆಲೆ' ಎಂಬ ಸಣ್ಣಕಥೆ ವಾಸ್ತವಿಕ ಚಿತ್ರಣಕ್ಕೆ ಒತ್ತುಕೊಟ್ಟು ನಕ್ಕು ನಗಿಸಿ ಸಾಗಿಸಿಕೊಂಡು ಪರವಾ ಇಲ್ಲವೇ ಅನ್ನಿಸಿದುದೂ ಹೌದು. ಹಾಗೆಯೇ ಎಲ್ಲವನ್ನೂ ಗೆಲ್ಲುವಂತೆ ಎದ್ದುಬಿದ್ದು ನಿಲ್ಲದ ನಗೆಯಲೆ ಎಬ್ಬಿಸಿದ ಭಾಲಚಂದ್ರ ಜಯಶೆಟ್ಟಿಯವರ 'ಸಂತಾಪ ಸೂಚಿಕ' ಸಭೆ ಎಲ್ಲರನ್ನೂ ಖುಷಿಗೊಳಿಸಿದ ಸಂದರ್ಭವನ್ನು ಮರೆಯುವುದಾದರೂ ಅದೆಂತೆನ್ನಿಸಿದುದೂ ನಿಜ.

ಕಾಸರಗೋಡು **ಕೀರಿಕ್ಕಾಡು ವನಮಾಲ ಕೇಶವಭಟ್ಟ**

## ಏಪ್ರಿಲ್ ಸಂಚಿಕೆ

ಡಾ|| ಎಚ್. ಚಂದ್ರಶೇಖರ ಅವರು, ಹಾಲಿ ಮತ್ತು ಮಾಜಿ ಮುಖ್ಯಮಂತ್ರಿಗಳು ನಡೆಸಿದ ಹೋಮ-ಹವನಗಳನ್ನು ಮಾತ್ರ ಪ್ರಸ್ತಾಪಿಸಿದ್ದಾರೆ.

ಆದರೆ, ಪಕ್ಷಾತೀತವಾಗಿ ಅನೇಕ ಮುಖ್ಯಮಂತ್ರಿಗಳು ಎಡವಿದ ಮತ್ತೊಂದು ನಿದರ್ಶನವನ್ನು ಕೈಬಿಡಲಾಗಿದೆ. ಅದೆಂದರೆ, ಅಧಿಕಾರ ಕಳೆದುಹೋಗುತ್ತದೆ ಎಂಬ ಮೂಢನಂಬಿಕೆಯಿಂದ ಚಾಮರಾಜನಗರಕ್ಕೆ ಭೇಟಿ ನೀಡದೆ ಇರುವುದು. ಯಡಿಯೂರಪ್ಪನವರಂತೂ, ಜಿಲ್ಲಾ ಪ್ರಗತಿ ಪರಿಶೀಲನೆ ಸಭೆಯನ್ನು ಆಯೋಜಿಸಿದ್ದರೂ




ಅದನ್ನು ಜಿಲ್ಲಾ ಕೇಂದ್ರವಾದ ಚಾಮರಾಜನಗರದಲ್ಲಿ ನಡೆಸದೆ, ಪಕ್ಕದ ಗುಂಡ್ಲುಪೇಟೆಯಲ್ಲಿ ನಡೆಸಿ, ಭಾಗಿಯಾದರು. ಧರ್ಮಸಿಂಗರೂ ಸಹ, ಚಾಮರಾಜನಗರಕ್ಕೆ ಭೇಟಿ ನೀಡಬೇಕಾದ ಸಂದರ್ಭ ಬಂದರೂ, ಕಣ್ಣುಬೇನೆ ಎಂಬ ನೆಪಹೇಳಿ, ಅದನ್ನು ಜಾಣ್ಮೆಯಿಂದ ತಪ್ಪಿಸಿಕೊಂಡರು.

ಚಾಮರಾಜನಗರದಂಥ ಹಿಂದುಳಿದ, ಗಡಿ ಜಿಲ್ಲೆಗೆ ಭೇಟಿ ನೀಡದೆ ಅಲ್ಲಿಯ ಜನರ ಸಮಸ್ಯೆಗಳನ್ನು ಆಲಿಸದೆ ಇರುವುದು, ಜನವಿರೋಧಿ ನೀತಿಯಲ್ಲವೆ ? ಮೂಢನಂಬಿಕೆಯಿಂದಾಗಿ, ಆ ಪ್ರದೇಶವನ್ನೇ ನಿರ್ಲಕ್ಷಿಸುವುದು ಎಷ್ಟರಮಟ್ಟಿಗೆ ಸರಿ ?

ಬೆಂಗಳೂರು **ಎಂ. ಎಸ್. ರಘುನಾಥ್**

ಅಪರೂಪದ ಅಂಬೇಡ್ಕರ್ ಚಿತ್ರವನ್ನು ನೋಡಿದ್ದಾಯ್ತು, ಏಪ್ರಿಲ್ ೨೦೧೨ರ ಸಂಚಿಕೆಯಲ್ಲಿ.

ಮಾಮೂಲಿ ಲೇಖನಗಳಿಗಿಂತ ವಿಭಿನ್ನವಾಗಿದ್ದುದು 'ಗರ್ದಿಗಮ್ಮತ್ ನೋಡಾ' - ಡಾ|| ಮಲ್ಲಿಕಾರ್ಜುನ ಕುಂಬಾರ ಹಾಗೂ ಬಿ. ವಿ. ಸುಬ್ಬರಾವ್ ಅವರ 'ಪ್ರಪಂಚದ ಅತಿ ಚಿಕ್ಕ ಹಕ್ಕಿ ಮೆಲ್ಲಿಸುಗ ಹೆಲೆನೆ'. ಅಪರೂಪದ ಪಕ್ಷಿಯೊಂದರ ಬಗ್ಗೆ ಹೆಚ್ಚಿನ ವಿವರ ಲಭಿಸಿತು. ಇಬ್ಬರೂ ಲೇಖಕರಿಗೆ ಅಭಿನಂದನೆಗಳು. ಗಂಭೀರ ಲೇಖನಗಳ ಮಧ್ಯೆ ಇಂತಹ ಚಿತ್ರಲೇಖನಗಳು ಮುದ ನೀಡುತ್ತವೆ.

ನಿರಂಜನ ವಾನಳ್ಳಿಯವರ ಕನ್ನಡ ದಿನಪತ್ರಿಕೆಗಳಲ್ಲಿ ಪ್ರತಿಶತ ಬರುವ ಕೃಷಿ ಸುದ್ದಿಯ ಬಗ್ಗೆ ಲೇಖನ ಕೂಡ ಪತ್ರಿಕೆಗಳು ಇಂದು ಏನಾಗುತ್ತಿವೆ ಎನ್ನುವ ವಿಚಾರವನ್ನು ವಿಶ್ಲೇಷಿಸಲು ಸಹಾಯವಾಗುತ್ತಿದೆ. ವಿಚಾರ ಮಂಡನೆಯೇ ಪ್ರಧಾನವಾಗಿದ್ದ ಕಾಲವೊಂದಿತ್ತು. ಇಂದು ಧನ ಸಂಪಾದನೆಯೇ ಪತ್ರಿಕೆಗಳ ಗುರಿಯಾಗಿದೆ. ಹಾಗಾಗಿ ನಾವು ಓದಿದ ಸುದ್ದಿ ಜಾಹೀರಾತಿನ ಪ್ರಮಾಣ ೬೦ ಎನ್ನುವುದು ಮರೆತೇಹೋಗಿದೆ ! ಜಾಹೀರಾತನ್ನು ನೀಡಿದವರನ್ನು ಹಾಡಿ, ಹೊಗಳಿ, ಅವರಲ್ಲಿಲ್ಲದ ವಿಶೇಷ ಗುಣಗಳನ್ನು ವೈಭವೀಕರಿಸುವುದೇ ಇಂದಿನ ಪತ್ರಿಕೆಗಳ ಗುರಿಯಾಗಿದೆ ! ಇದ್ದುದರಲ್ಲಿ ಕನ್ನಡ ಪತ್ರಿಕೆಗಳೇ ವಾಸಿ ಎನ್ನುವುದಕ್ಕೆ ನಮ್ಮ ಜನಗಳ ಆಂಗ್ಲ ವ್ಯಾಮೋಹವೇ ಕಾರಣ.

ಯುವ ಕಲಾವಿದೆ ಮಾಧುರಿರಾವ್ ಅವರ ಚಿತ್ರಗಳು ಗಮನ ಸೆಳೆಯಿತು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

## ಉಸ್ತಾದ್ ಬಿಸ್ಮಿಲ್ಲಾ ಖಾನ್ ಮತ್ತು ಭಾರತೀಯ ಸಂಗೀತ

ಮಾರ್ಚ್ ೨೧ : ಭಾರತರತ್ನ ಉಸ್ತಾದ್ ಬಿಸ್ಮಿಲ್ಲಾ ಖಾನರ ೯೬ನೇ ಜಯಂತಿ. ಶಹನಾಯ್ ಗಾರುಡಿಗನೆಂದೇ ಪ್ರಸಿದ್ಧರಾಗಿದ್ದ ಬಿಸ್ಮಿಲ್ಲಾ ಖಾನರು ತೊಂಭತ್ತು ವರ್ಷದ ತುಂಬು ಜೀವನವನ್ನು ಬದುಕಿ ೨೦೦೬ರಲ್ಲಿ ಇಲ್ಲವಾದರು. ಶಹನಾಯ್‌ಗೆ ಭಾರತದ ಸಂಗೀತ-ಸಾಂಸ್ಕೃತಿಕ ಚರಿತ್ರೆಯಲ್ಲಿ ಅದರದ್ದೇ ಆದ ಒಂದು ಸ್ಥಾನಮಾನವನ್ನು ತಂದುಕೊಟ್ಟವರು ಬಿಸ್ಮಿಲ್ಲಾ ಖಾನ್. ಶಹನಾಯ್ ಮತ್ತು ಬಿಸ್ಮಿಲ್ಲಾ ಖಾನ್ ಸಮಾನಾರ್ಥಕ ಪದಗಳೋ ಅನ್ನುವಷ್ಟು ಆ ಎರಡು ಪದಗಳು ಅನ್ಯೋನ್ಯ.

ಬಿಸ್ಮಿಲ್ಲಾ ಖಾನರ ಪೂರ್ವಜರು ಬಿಹಾರದ ದುಮ್ರಾವ್ ಎಂಬ ಪುಟ್ಟ ರಾಜಸಂಸ್ಥಾನದಲ್ಲಿ ಸಂಗೀತಗಾರರಾಗಿದ್ದರು. ಈ ಕುಟುಂಬದ ಅಲಿ ಬಕ್ಷ್ ಲಾಯತ್ ಎಂಬುವರು ವಾರಣಾಸಿಯ ವಿಶ್ವನಾಥ ಮಂದಿರದಲ್ಲಿ ಶಹನಾಯ್ ನುಡಿಸುತ್ತಿದ್ದರು. ಅವರಲ್ಲೇ ಬಿಸ್ಮಿಲ್ಲಾ ಖಾನ್ ಮಾರ್ಗದರ್ಶನ ಪಡೆದರು. ಧಾರ್ಮಿಕ ಪ್ರವೃತ್ತಿಯ ಶಿಯಾ ಮುಸ್ಲಿಮನಾಗಿಯೂ ವಿಶ್ವನಾಥನ ದೇವಾಲಯಕ್ಕಾಗಿ ಶಹನಾಯ್ ನುಡಿಸುವಂಥ, ಮತ್ತು ಸರಸ್ವತಿಯನ್ನು ನಂಬುವಂಥವರಾಗಿದ್ದು, ಸಾಮರಸ್ಯದ ಸಂಕೀರ್ಣ ಪರಂಪರೆಯೊಂದನ್ನು ಪ್ರತಿಬಿಂಬಿಸುವಂತಿದ್ದರು.

ಬಿಸ್ಮಿಲ್ಲಾ ಖಾನರು ಪ್ರಥಮ ಬಾರಿಗೆ ಶಹನಾಯ್

ನುಡಿಸಿ ಶಹಬ್ಬಾಸ್‌ಗಿರಿ ಪಡೆದದ್ದು ೧೯೩೭ರಲ್ಲಿ, ಕಲಕತ್ತೆಯ ಅಖಿಲ ಭಾರತ ಸಂಗೀತ ಸಮ್ಮೇಳನದಲ್ಲಿ. ೧೯೪೭ರ ಸ್ವಾತಂತ್ರ್ಯದಿನದ ಮುನ್ನಾದಿನದಂದು ದೆಹಲಿಯ ಕೆಂಪು ಕೋಟೆಯಲ್ಲಿ ಶಹನಾಯ್ ನುಡಿಸುವ ಅವಕಾಶ ಅವರಿಗೆ ಲಭಿಸಿತ್ತು. ಹಾಗೆಯೇ ಭಾರತವು ಗಣರಾಜ್ಯವಾಗುವ ಮುನ್ನಾದಿನದಂದೂ ಕೂಡ ಕೆಂಪು ಕೋಟೆಯಲ್ಲಿ ಅವರ ಶಹನಾಯ್ ಸಂಭ್ರಮಿಸಿತ್ತು. ಪ್ರತೀವರ್ಷದ ಸ್ವಾತಂತ್ರ್ಯದಿನದಂದು ಪ್ರಧಾನಮಂತ್ರಿಯ ಭಾಷಣದ ನಂತರ ಬಿಸ್ಮಿಲ್ಲಾ ಖಾನರ ಶಹನಾಯ್ ನೇರ ಕಾರ್ಯಕ್ರಮವನ್ನು ದೂರದರ್ಶನ ಪ್ರಸಾರ ಮಾಡುತ್ತಿತ್ತು. ಮುಂದಿನ ಸ್ವಾತಂತ್ರ್ಯದಿನಗಳ ಸಂಭ್ರಮ ಅವರ ಇಲ್ಲದಿರುವಿಕೆಯಿಂದ ಬಡವಾದವು !

ಹಾಗೆ ನೋಡಿದರೆ, ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಜನಮನ್ನಣೆ ಗಳಿಸಿದ ಕೆಲವೇ ಜನ ಮುಸ್ಲಿಮ್ ಸಂಗೀತಗಾರರಲ್ಲಿ ಬಿಸ್ಮಿಲ್ಲಾಖಾನ್ ಒಬ್ಬರು. ಉಸ್ತಾದ್ ಅಲಿ ಅಕ್ಬರ್ ಖಾನ್, ಉಸ್ತಾದ್ ವಿಲಾಯತ್ ಖಾನ್, ಉಸ್ತಾದ್ ಅಲ್ಲಾ ರಖಾ, ಉಸ್ತಾದ್ ಬಡೇ ಗುಲಾಮ್ ಅಲಿ ಖಾನ್, ಉಸ್ತಾದ್ ಅಮೀರ್ ಖಾನ್ ಇತ್ಯಾದಿ ಮುಸ್ಲಿಮ್ ಸಂಗೀತಗಾರರಿದ್ದರೂ, ಇವರ ಸಂಖ್ಯೆ ಸ್ವಾತಂತ್ರ್ಯಪೂರ್ವದ ಅಥವಾ ಹತ್ತೊಂಬತ್ತನೇ ಶತಮಾನದ ಮುಸ್ಲಿಮ್ ಸಂಗೀತಗಾರರ ಸಂಖ್ಯೆಗೆ ಹೋಲಿಸಿದರೆ ಬಹಳ ಅಲ್ಪ. ಸ್ವಾತಂತ್ರ್ಯಪೂರ್ವದಲ್ಲಿ ಕೆಲವು ದೊಡ್ಡ ಹಾಗೂ ಹಲವು ಚಿಕ್ಕ ರಾಜಸಂಸ್ಥಾನಗಳು ಬಹಳಷ್ಟು ಜನ ಮುಸ್ಲಿಂ ಸಂಗೀತಗಾರರನ್ನು ಪೋಷಿಸಿದ್ದವು. ಗ್ವಾಲಿಯರ್, ರಾಮ್‌ಪುರ್, ಇಂದೋರ್, ಬರೋಡಾ, ಹೈದರಾಬಾದ್, ಇಚಲಕರಂಜಿ, ಕೊಲ್ಹಾಪುರ್ ಇತ್ಯಾದಿ ಸಂಸ್ಥಾನಗಳು ಇದರಲ್ಲಿ ಮುಖ್ಯವಾದವು. ಇಷ್ಟೇ ಅಲ್ಲದೆ, ಅಬ್ದುಲ್ ಕರೀಂ ಖಾನ್‌ರಂತಹ ಸಂಗೀತಗಾರರು ಆಗಾಗ್ಯೆ ಮೈಸೂರಿನ ಆಸ್ಥಾನದಲ್ಲೂ ಕಛೇರಿ ಕೊಡುತ್ತಿದ್ದರು.

ಈ ಸಂಖ್ಯೆ ಕಡಿಮೆಯಾಗಲು ಸಾಮಾಜಿಕ ಹಾಗೂ ರಾಜಕೀಯ ಕಾರಣಗಳಿವೆ. ಮೊದಲನೆಯದಾಗಿ, ಹತ್ತೊಂಬತ್ತನೇ ಶತಮಾನದ ಕೊನೆಯ ಹಾಗೂ ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಹಿಂದೂಸ್ತಾನಿ ಸಂಗೀತ ಕಲಿಯಲು ಬಹಳಷ್ಟು ಜನ ಉಚ್ಚ ಜಾತಿಯ ಹಿಂದೂಗಳು ಮುಂದೆ ಬಂದರು. ಸಂಗೀತ ಮಾತ್ರವಲ್ಲದೆ ಇತರ ಶಾಸ್ತ್ರಗಳನ್ನೂ ಒಂದು ವಿಶಿಷ್ಟ ರೀತಿಯಲ್ಲಿ ಅಧ್ಯಯಿಸಿ, ಸಂಸ್ಕೃತ ಗ್ರಂಥಗಳಿಗೂ ಉತ್ತರ ಭಾರತದ ಸಂಗೀತಕ್ಕೂ ಸಂಬಂಧ ಸ್ಥಾಪಿಸಿದವರಾದ ವಿ. ಎನ್. ಭಾತ್ಖಂಡೆ, ವಿಷ್ಣು ದಿಗಂಬರ ಪಲುಸ್ಕರ್, ಎಸ್. ಎನ್. ರತಂಜನ್‌ಕರ್ ಅಂಥವರು ಸಂಗೀತ ಕ್ಷೇತ್ರದಲ್ಲಿ ಕಾಣಿಸಿಕೊಂಡರು. ಇದರೆಲ್ಲದರ ಪರಿಣಾಮವಾಗಿ ಉತ್ತರ ಭಾರತದಲ್ಲಿ ಸಂಗೀತವೆಂಬುದು ಇಸ್ಲಾಮಿನ ಕೈಯಲ್ಲಿ ಬಿದ್ದು ನರಳಿದ ಒಂದು ಭಾರತೀಯ ಕಲಾಪ್ರಕಾರವೆಂಬ ಮನೋಭಾವ ಬೆಳೆದುಬಂತು. (ಈಗಲೂ ಸಂಗೀತದ ವಿದ್ಯಾರ್ಥಿಗಳು ಪರೀಕ್ಷೆ ಬರೆಯುವಾಗ ಇಡೀ ಭಾರತದಲ್ಲಿ ಮುಂಚೆ ಒಂದೇ ರೀತಿಯ ಸಂಗೀತವಿತ್ತೆಂದೂ, ಇಸ್ಲಾಮಿಕ್ ದಾಳಿಯಿಂದಾಗಿ ಅದು ಉತ್ತರಾದಿ ಸಂಗೀತವಾಯಿತೆಂದೂ ಹಾಗೂ ದಕ್ಷಿಣದ ಕರ್ನಾಟಕ ಸಂಗೀತವೆಂಬುದು ಒಂದು ರೀತಿಯಲ್ಲಿ ಪರಿಶುದ್ಧವಾದ ಭಾರತೀಯ ಸಂಗೀತವಾಗಿಯೇ ಉಳಿದಿದೆಯೆಂದೂ ಕಲಿಯುತ್ತಾರೆ). ಈ ಅಭಿಪ್ರಾಯದ ಪ್ರಕಾರ ಭಾರತೀಯ ಸಂಗೀತವೆಂಬುದು ಆಧ್ಯಾತ್ಮಿಕ ಸಂಗೀತವಾಗಿದ್ದುದು ಐಹಿಕ ಸಂಗೀತವಾಗಿ ಮಾರ್ಪಟ್ಟಿತೆಂದೂ, ಮುಸ್ಲಿಮ್ ನಾಟ್ಯಗಾರ್ತಿಯರ ಹಾಗೂ ವೇಶ್ಯೆಯರ ಪಾಲಾಯಿತೆಂದೂ ಭಾವಿಸಲಾಯಿತು.

ಎರಡನೆಯದಾಗಿ, ಸ್ವಾತಂತ್ರ್ಯಾನಂತರ ಭಾರತದ ಸಂಗೀತ ಕ್ಷೇತ್ರದಲ್ಲಿ ಆಕಾಶವಾಣಿ ವಹಿಸಿದ ಪಾತ್ರ ಬಹಳ ಮುಖ್ಯ. ೧೯೫೦ರ ದಶಕದಲ್ಲಿ ಆಕಾಶವಾಣಿಯ ಡೈರೆಕ್ಟರ್ ಜನರಲ್ ಆಗಿದ್ದ ಜೆ. ಸಿ. ಮಾಥುರ್ ಎನ್ನುವವರ ಪ್ರಕಾರ ಆ ಸಮಯದಲ್ಲಿ ಸುಮಾರು ಹತ್ತು ಸಾವಿರ ಜನ ಸಂಗೀತಗಾರರು ಆಕಾಶವಾಣಿಯಿಂದ ಪೂರ್ಣಕಾಲಿಕ ಅಥವಾ ಅರೆಕಾಲಿಕ ನೌಕರಿಯನ್ನು ಪಡೆದಿದ್ದರು. ಡೇವಿಡ್ ಲೆಲಿವೆಲ್ಡ್ ಎನ್ನುವವನೊಬ್ಬನ ಸಂಶೋಧನೆಯ ಪ್ರಕಾರ ಅವರಲ್ಲಿ ಹೆಚ್ಚಿನವರು ಹಿಂದುಗಳಾಗಿದ್ದರು ಹಾಗೂ ಉತ್ತಮ ಸಂಗೀತಗಾರ್ತಿಯರಾಗಿದ್ದ ನಾಟ್ಯಗಾರ್ತಿಯರು ಹಾಗೂ ವೇಶ್ಯೆಯರು ಇದ್ದಿಲ್ಲವೆಂದೇ ಹೇಳಬಹುದಾಗಿತ್ತು. ೧೯೫೦ರಿಂದ ೧೯೬೨ರವರೆಗೆ ಬಿ. ವಿ. ಕೇಸ್ಕರ್ ಎನ್ನುವವರು ಭಾರತದ ಮಾಹಿತಿ ಮತ್ತು ಪ್ರಸಾರ ಮಂತ್ರಿಯಾಗಿದ್ದರು. ಅವರ ನೇತೃತ್ವದಲ್ಲಿ ನಡೆದ ಪ್ರಕ್ರಿಯೆ ಇದಾಗಿತ್ತು. ನೆಹರೂ ಕ್ಯಾಬಿನೆಟ್‌ನಲ್ಲಿ ಮಂತ್ರಿಯಾಗಿದ್ದಾಗ್ಯೂ ತುಂಬ ಸ್ಪಷ್ಟವಾಗಿ ಮುಸ್ಲಿಮ್ ಸಂಗೀತಗಾರರನ್ನು ಆಧುನಿಕ ಸಂಸ್ಥೆಗಳಿಂದ ಹೊರಗಿಟ್ಟ ಪ್ರಯತ್ನವನ್ನು ನಾವು ಕೇಸ್ಕರ್ ಅವರಲ್ಲಿ ಕಾಣಬಹುದು. ಮತ್ತು ಸಾಕಷ್ಟು ಮರಾಠೀ ಬ್ರಾಹ್ಮಣರು ಆ ಜಾಗಗಳಲ್ಲಿ ಭರ್ತಿಗೊಂಡರು.

ಹೀಗೆ ಬಹಳಷ್ಟು ರಾಜಕೀಯವನ್ನು ಮೀರಿ ತಮ್ಮ ಕೌಶಲ್ಯ ಹಾಗೂ ಶ್ರದ್ಧೆಯಿಂದ ಮೇಲೆ ಬಂದ ಕೆಲವೇ ಸಂಗೀತಗಾರರಲ್ಲಿ ಉಸ್ತಾದ್ ಬಿಸ್ಮಿಲ್ಲಾ ಖಾನ್ ಒಬ್ಬರು. ಅವರ ಸ್ವರ್ಗೀಯ ಸಂಗೀತ ನಮ್ಮಲ್ಲಿ ಚಿರಾಯುವಾಗಿ ಉಳಿದಿದೆ. ಅವರಿಗೆ ನಮ್ಮ ಈ ನುಡಿನಮನ.

ಸುರತ್ಕಲ್ **ಡಾ।। ಶಶಿಕಾಂತ ಕೌಡೂರು**

**ಕವನ ಮತ್ತು ಕಥೆಗಳ ಆಹ್ವಾನ**

ಜನಪ್ರಿಯ ಪ್ರಕಾಶನವು ರಾಜ್ಯ ಮಟ್ಟದ ಕವನ ಮತ್ತು ಕಥಾ ಸಂಕಲನವನ್ನು ಹೊರತರಲು ಸ್ಪರ್ಧೆ ಏರ್ಪಡಿಸಿದ್ದು, ರಾಜ್ಯದ ಬರಹಗಾರರಿಂದ ಸ್ವರಚಿತ ಕವನ ಮತ್ತು ಕಥೆಗಳನ್ನು ಆಹ್ವಾನಿಸಿದೆ. ಕವನ ಹಾಗೂ ಕಥೆಗಳು ಹಾಳೆಯ ಒಂದೇ ಮಗ್ಗುಲಿಗೆ ಸ್ಪಷ್ಟವಾಗಿ ಬರೆದಿರಬೇಕು. ಅಥವಾ ಅಚ್ಚುಕಟ್ಟಾಗಿ ಡಿಟಿಪಿ ಮಾಡಿರಬೇಕು. ಆಯ್ಕೆಯಾದ ಎಲ್ಲ ಕವನ ಮತ್ತು ಕಥೆಗಳನ್ನು ಸೇರಿಸಿ ಅವರವರ ಭಾವಚಿತ್ರ ಮತ್ತು ಸಂಪೂರ್ಣ ವಿಳಾಸದೊಂದಿಗೆ ಸಂಕಲನ ಪ್ರಕಟ ಮಾಡಲಾಗುವುದು.

ಕವನ ಮತ್ತು ಕಥೆಗಳ ಜೊತೆಗೆ ಇತ್ತೀಚಿನ ಭಾವಚಿತ್ರ ಲಗತ್ತಿಸಿ ತಮ್ಮ ಪೂರ್ಣ ವಿಳಾಸದೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳಿಸಬಹುದು :

**ಜನಪ್ರಿಯ ಪ್ರಕಾಶನ**
**ಅಂಚೆ ಪೆಟ್ಟಿಗೆ ಸಂಖ್ಯೆ ೬೪, # ೬–೪–೩೪**
**ತೇಲಿ ಗಲ್ಲಿ ಗವಾನ ಚೌಕ್**
**ಬೀದರ್ – ೫೮೫ ೪೦೧**

**‘ಹೊಸತು’ ಸಂಪಾದಕರಿಗೆ ಪತ್ರ**

ಕೆ. ಎಸ್. ಪಾರ್ಥಸಾರಥಿಯವರ ‘ನಾನು ಕಯ್ಯೂರಿಗೆ ಹೋಗಿದ್ದೆ!’ (ಏಪ್ರಿಲ್ ೨೦೧೭) ಎಂಬ ಲೇಖನ ಓದಿದರೆ ಯಾರೇ ಆಗಲಿ ಕ್ಷಣಕಾಲ ನಿಂತು ಗಲಿಬಿಲಿಗೊಳ್ಳದೆ ಇರಲಾರರು. ಅಷ್ಟೇ ಅಲ್ಲ, ನಾವೂ ಒಮ್ಮೆ ನೆರೆಯ ಕಾಸರಗೋಡಿನ ಕಯ್ಯೂರಿಗೆ ಹೋಗಿಬರಬೇಕೆನಿಸುತ್ತದೆ. ಅದು ದಮನಿತರ ಪರವಾದ ಹೋರಾಟಕ್ಕೆ ಒಂದು ಸ್ಫೂರ್ತಿದಾಯಕ ಜನ್ಮಭೂಮಿ. ಚಿರಸ್ಮರಣೆಗೆ ಅರ್ಹವಾಗಿದೆ. ಎಡಸಿದ್ಧಾಂತವನ್ನು ಬದಿಗೊತ್ತಿ, ದೇಶ ಕಾಲ ವಿಶೇಷವೆಂದು ಹರಕೆಯ ಹರಾಜನ್ನು, ಮಡೆಸ್ನಾನವನ್ನು, ಬೆತ್ತಲೆಸೇವೆ, ದೇವದಾಸಿ ಪದ್ಧತಿಗಳನ್ನು ಕುರಿತು ಅದು ಭಕ್ತಾದಿಗಳ ಮರ್ಜಿ ಎಂದು ಹೇಳುತ್ತ, ಶತಮಾನಗಳ ಮತ, ಮೌಢ್ಯ, ಅಂಧಶ್ರದ್ಧೆಗಳನ್ನು ತಿರಸ್ಕರಿಸದೆ ಅಡ್ಡಗೋಡೆ ಮೇಲೆ ದೀಪ ಇಟ್ಟಂತೆ ಮಾತಾಡುವ, ಜನರ ಸಂಕಟಗಳನ್ನು ಕಂಡು ಕವಿತೆಗೆ ಇದು ಸಕಾಲವೆಂದು ಸಂಭ್ರಮಿಸುವ ಮಂದಿ ‘ತೇಜಸ್ವಿನಿ ತೀರದಲ್ಲಿ’ (ಕೆ. ಮಾಧವನ್) ‘ತೇಜಸ್ವಿನಿ ನೀನೆ ಸಾಕ್ಷಿ’ (ಸಿ. ಕೃಷ್ಣನ್ ಕುರಿತ ಪುಸ್ತಕ) ಹಾಗೂ ನಿರಂಜನರ ‘ಚಿರಸ್ಮರಣೆ’ಯಂಥ ಮಾನವ ಘನತೆಯ ಗ್ರಂಥಗಳನ್ನು ಪಠಿಸಬೇಕು; ಮಾರ್ಚ್ ೨೯, ೧೯೪೬ರಂದು ಕಣ್ಣಾನೂರಿನ ಜೈಲಿನಲ್ಲಿ ಗಲ್ಲಿಗೇರಿದ ಕಯ್ಯೂರಿನ ಕ್ರಾಂತಿಕಾರಿ ಹುತಾತ್ಮರಾದ ಮಡತ್ತಿಲ್ ಅಪ್ಪು, ಪೊಡವರ ಕುಂಞಂಬು ನಾಯರ್, ಚಿರಕುಂಡನ್, ಅಬುಬಕ್ಕರ್ ಪಳಕ್ಕಲ್ ಈ ನಾಲ್ವರ ತ್ಯಾಗ ಬಲಿದಾನವನ್ನು ನೆನೆಯಬೇಕು; ಹಾಗೂ ಇದೇ ಕಯ್ಯೂರಿನ ರೈತ ಕ್ರಾಂತಿಯನ್ನು ಕುರಿತು ಕಟ್ಪಾಡಿಯವರು ರಚಿಸಿರುವ ‘ಕಯ್ಯೂರಿನ ರೈತವೀರರು’ ಎಂಬ ಐತಿಹಾಸಿಕ ಪುಸ್ತಕವನ್ನು ತಪ್ಪದೆ ಓದಬೇಕು.

‘‘ಕ್ರಾಂತಿಯ ಸಂಘಟನೆ ಒಂದು ಕಲೆ’’ ಎಂದ ಲೆನಿನ್ ಅವರ ಮಾತಿಗೆ ಅಕ್ಷರಶಃ ಪುಟ್ಟ ನಿದರ್ಶನ ಕಯ್ಯೂರಿನ ರೈತ ಹೋರಾಟ. ಈ ಬಗ್ಗೆ ಇಂದು ಸಂಘಟನೆ ಕಟ್ಟುವ, ಚಳುವಳಿ ಹೂಡುವ ಮಂದಿ ಖಂಡಿತ ಗಮನಿಸಬೇಕು; ಅಲ್ಲಿಂದ ಜೀವ ದ್ರವ್ಯವನ್ನು ಪಡೆಯಬೇಕು. ಪ್ರಸ್ತುತ ವಿವಿಧ ಸಂಘಟನೆಗಳ ಮುಂಚೂಣಿ ನಾಯಕರು ಕಂಫರ್ಟ್ ಝೋನಿನಲ್ಲಿ ನಿಂತು ಗಂಟೆಗಟ್ಟಲೆ ಭಾಷಣ ಬಿಗಿಯುವುದನ್ನು ಬಿಟ್ಟು ಚಿರಸ್ಮರಣೆಯ ಸಂಯಮಿ ಕ್ರಾಂತಿದರ್ಶಿ ಮಾಸ್ತರನ ಮೇಲ್ಪಂಕ್ತಿಯನ್ನು ಅನುಸರಿಸಿದರೆ ಇಂದಿನ ಕ್ರೂರ ವ್ಯವಸ್ಥೆಯನ್ನು, ಪ್ರಭುತ್ವವನ್ನು ಸ್ವಲ್ಪವಾದರೂ ಕದಲಿಸಲು ಸಾಧ್ಯ. ಇಂಥ ಹೊಸ ದಿಗಂತದೆಡೆಗೆ ಹೋಗಬಯಸುವವರಿಗೆ ‘ನಾನು ಕಯ್ಯೂರಿಗೆ ಹೋಗಿದ್ದೆ’ ಲೇಖನ ಒಂದು ಮೇಲ್ಪಂಕ್ತಿ ಎಂಬಂತಿದೆ.

ಬೆಂಗಳೂರು **ಪ್ರೊ।। ಶಿವರಾಮಯ್ಯ**

ಸೀಯಾರ್ಕೆ

# ಮೇ ದಿನದ ಸಂಭ್ರಮ




ನಾನು ಮೇ ದಿನದ ಸಂಭ್ರಮದಲ್ಲಿ ಭಾಗವಹಿಸಿದ್ದು ೧೯೪೮ರಲ್ಲಿ. ಆಗ ಕಮ್ಯುನಿಸ್ಟರಲ್ಲಿ ಹೆಚ್ಚಿನವರು ಜೈಲಿನಲ್ಲಿದ್ದರು ಇಲ್ಲವೆ ಭೂಗತರಾಗಿದ್ದರು. ಎಐಟಿಯುಸಿಗೆ ಸೇರಿದ ಕಾರ್ಮಿಕ ಸಂಘಟನೆಗಳು ಬೆಂಗಳೂರಿನಲ್ಲಿದ್ದುದು ಎರಡೋ ಮೂರೋ. ಮೇ ದಿನಾಚರಣೆಗೆ ಸಿದ್ಧತೆಗಳು ವಾರಗಳ ಹಿಂದೆಯೇ ಶುರುವಾಗುತ್ತಿತ್ತು. ಆಗ ಮೇ ದಿನಕ್ಕೆ ರಜೆ ಇರಲಿಲ್ಲ. ಆ ದಿನವನ್ನು ರಜೆಯಾಗಿ ಘೋಷಿಸ ಬೇಕೆಂಬುದು ಕಾರ್ಮಿಕರ ಬೇಡಿಕೆಯಾಗಿತ್ತು. ಎಲ್ಲ ಕಾರ್ಮಿಕ ಸಂಘಗಳೂ ಸಭೆ, ಮೆರವಣಿಗೆಗಳ ಮೂಲಕ ಮೇ ದಿನವನ್ನು ಆಚರಿಸುತ್ತಿದ್ದುವು: ತಮ್ಮದೇ ಆದ ರೀತಿಯಲ್ಲಿ. ಮೇ ದಿನಾಚರಣೆಗೆ ಅಗತ್ಯವಾದ ಪೋಸ್ಟರುಗಳನ್ನು, ಪ್ಲಕಾರ್ಡ್‌ಗಳನ್ನು ತಯಾರಿಸಲಾಗುತ್ತಿತ್ತು. ಮೇ ದಿನದ ಪೂರ್ವಸಿದ್ಧತೆಗಾಗಿ ಕಾರ್ಖಾನೆಯ ಗೇಟಿನಲ್ಲಿ ಸಭೆ ನಡೆಸಿ ಆ ದಿನದ ಮಹತ್ವವನ್ನು ಟ್ರೇಡ್ ಯೂನಿಯನ್ ನಾಯಕರು ವಿವರಿಸುತ್ತಿದ್ದರು, 'ಜಗತ್ತಿನ ಕಾರ್ಮಿಕರೇ ಒಂದಾಗಿರಿ' 'ಇಂಕ್ವಿಲಾಲ್ ಜಿಂದಾಬಾದ್' ಮುಂತಾದ ಘೋಷಣೆಗಳೊಂದಿಗೆ ಕಾರ್ಮಿಕರು ಮೆರವಣಿಗೆಯಲ್ಲಿ ಸಭೆಯಲ್ಲಿ ಭಾಗವಹಿಸಲು ಬರುತ್ತಿದ್ದರು. ನಾನು ಭಾಗವಹಿಸಿದ್ದ ಮೇ ದಿನದ ಸಭೆ ಜರುಗಿದ್ದು ಬೆಂಗಳೂರು ನಗರದ ಚಿಕ್ಕ ಲಾಲ್‌ಬಾಗಿನಲ್ಲಿ. ಆ ದಿನಗಳಲ್ಲಿ ಇದು ರಾಜಕೀಯ ಸಭೆಗಳಿಗೆ ಪ್ರಶಸ್ತವಾದ ಸ್ಥಳವಾಗಿತ್ತು. ಸಿದ್ಧವಾಗಿದ್ದ ವೇದಿಕೆ ಇತ್ತು ಅಲ್ಲಿ. ಹಳೆ ಮೈಸೂರಿನ ಪಾರ್ಕ್‌ಗಳಲ್ಲಿದ್ದ ಬ್ಯಾಂಡ್‌ಸ್ಟಾಂಡ್ ವೇದಿಕೆ. ಮೇಜು, ಕುರ್ಚಿ, ಮೈಕ್ ತಂದರೆ ಸಭೆಗೆ ಎಲ್ಲ ಸಿದ್ಧವಾದಂತೆ. ಸಾಕಷ್ಟು ಕರಪತ್ರಗಳನ್ನು ಹಂಚಲಾಗುತ್ತಿತ್ತು. ವಸಂತಪುರದ ಕೃಷ್ಣ ವೀವಿಂಗ್ ಮಿಲ್ ಕಾರ್ಮಿಕರು ಮತ್ತು ದೇವರ ಜೀವನಹಳ್ಳಿಯ ಟ್ಯಾನರಿ ಕೆಲಸಗಾರರು, ಮುನಿಸಿಪಲ್ ಕೆಲಸಗಾರರು ನಗರದ ಮುಖ್ಯರಸ್ತೆಗಳಲ್ಲಿ ಮೆರವಣಿಗೆಯಲ್ಲಿ ಬಂದು ನಗರದ ಮಧ್ಯದಲ್ಲಿದ್ದ ಚಿಕ್ಕ ಲಾಲ್‌ಬಾಗಿನಲ್ಲಿ ಸೇರುತ್ತಿದ್ದರು. ಮೇ ದಿನದ ಸಭೆಯಲ್ಲಿ ಕಡಿಮೆ ಎಂದರೆ ಎರಡು ಸಾವಿರ ಜನ ಇರುತ್ತಿದ್ದರು. ನೂರಾರು ಕಾರ್ಮಿಕರು ಕೆಂಬಾವುಟ ಹಿಡಿದು ಘೋಷಣೆಗಳನ್ನು ಕೂಗುತ್ತ ಸಭೆಗೆ ಬರುತ್ತಿದ್ದುದನ್ನು ನೋಡುವುದೇ ಸ್ಫೂರ್ತಿದಾಯಕವಾಗಿರುತ್ತಿತ್ತು.

೧೯೫೦ರ ನಂತರ ಕಮ್ಯುನಿಸ್ಟ್ ಪಾರ್ಟಿ ಕಾರ್ಯಕರ್ತರು, ನಾಯಕರು ಬಹಿರಂಗ ಚಟುವಟಿಕೆಯಲ್ಲಿ ತೊಡಗಿಕೊಂಡಮೇಲೆ ಮೇ ದಿನದ ಸಭೆಗಳಿಗೆ ಮೆರುಗು ಬಂದಿತು. ಕೇಂದ್ರ ಸರಕಾರದ ಉದ್ಯಮಗಳ ಕೆಲಸಗಾರರು, ಟೆಕ್ಸ್‌ಟೈಲ್ ಕಾರ್ಮಿಕರು, ಇಂಜಿನಿಯರಿಂಗ್ ಕಾರ್ಮಿಕರು, ಬೆಂಗಳೂರಿನ ಸಿಲ್ಕ್ ಕಾರ್ಮಿಕರು, ಹೋಟೆಲ್ ಕೆಲಸಗಾರರು, ಮುನಿಸಿಪಲ್ ಕೆಲಸಗಾರರು ಎಲ್ಲ ಒಟ್ಟಾಗಿ ಸೇರುತ್ತಿದ್ದುದರಿಂದ ಮೇ ದಿನದ ಸಭೆ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿತ್ತು. ಎಲ್ಲೆಲ್ಲೂ ಕಾರ್ಮಿಕರು ಬಾವುಟ ಹಿಡಿದು ಮೆರವಣಿಗೆಯಲ್ಲಿ ಬರುತ್ತಿದ್ದುದನ್ನು ಕಾಣಬಹುದಾಗಿತ್ತು. ಸಾಮಾನ್ಯವಾಗಿ ಬಹಿರಂಗ ಸಭೆಗಳು ಚಿಕ್ಕ ಲಾಲ್‌ಬಾಗ್, ಬನಪ್ಪ ಪಾರ್ಕ್, ಮಲ್ಲೇಶ್ವರದ ಸಿರೂರು ಪಾರ್ಕ್ ಇವುಗಳಲ್ಲಿ ಜರುಗುತ್ತಿದ್ದುವು. ಕೆಲವು ಸಭೆಗಳಲ್ಲಿ ಅಖಿಲ ಭಾರತದ ನಾಯಕರುಗಳು ಭಾಗವಹಿಸುತ್ತಿದ್ದರು. ೧೯೬೦ರ ನಂತರ ಎಲ್ಲ ಟ್ರೇಡ್ ಯೂನಿಯನ್‌ಗಳೂ ಒಂದಾಗಿ ಮೇ ದಿನವನ್ನು ಆಚರಿಸುವ ಪದ್ಧತಿ ರೂಢಿಗೆ ಬಂದಿತು. ಇಂಥ ಐಕ್ಯ ಕಾರ್ಯಾಚರಣೆಗಳಲ್ಲಿ ಕಾಂಗ್ರೆಸ್ ನೇತೃತ್ವದ ಐಎನ್‌ಟಿಯುಸಿ ಸೇರುತ್ತಿರಲಿಲ್ಲ, ಎಐಟಿಯುಸಿ, ಎಚ್‌ಎಂಎಸ್ ಮತ್ತಿತರ ಸಂಘಟನೆಗಳಿಗೆ ಸೇರಿದ ಕಾರ್ಮಿಕ ಸಂಘಗಳು ಪಾಲ್ಗೊಳ್ಳುತ್ತಿದ್ದುವು. ಈಗಿನಂತೆ ಕಾರ್ಮಿಕರ ಮೆರವಣಿಗೆಗಳಿಗೆ, ಸಭೆಗಳಿಗೆ ನಿರ್ಬಂಧಗಳಿರಲಿಲ್ಲ, ಸಭೆ ನಡೆಸಲು ಅನುಮತಿ ದೊರಕುವುದು ತುಂಬ ಸುಲಭವಾಗಿತ್ತು. ಎಲ್ಲ ಕಾರ್ಮಿಕ ಸಂಘಗಳೂ ಒಟ್ಟಾಗಿ ಮೇ ದಿನದ ಸಭೆ ನಡೆಸಿದಾಗ ಹತ್ತು ಸಾವಿರಕ್ಕೂ ಹೆಚ್ಚು ಕಾರ್ಮಿಕರು ಭಾಗವಹಿಸುತ್ತಿದ್ದರು. ಕ್ರಮೇಣ ಈ ವಿಜೃಂಭಣೆಯ ಆಚರಣೆ ಕಳೆಗುಂದುತ್ತಾ ಹೋಯಿತು.

ಅದಕ್ಕೆ ಕಾರಣಗಳೇನೇ ಇರಲಿ. ಮೇ ದಿನವನ್ನು ಸರಕಾರ ಅಧಿಕೃತ ರಜಾ ದಿನವನ್ನಾಗಿ ಘೋಷಿಸಿತು. ಆದರೂ ಹಿಂದಿನ ಆ ಉತ್ಸಾಹ ಕಾಣುವುದು ವರ್ಷದಿಂದ ವರ್ಷಕ್ಕೆ ಕಡಿಮೆಯಾಗತೊಡಗಿತು. ಈಗ ಬೆಂಗಳೂರು ನಗರ ಬೆಳೆದಿದೆ ಬೃಹತ್ತಾಗಿ. ಕಾರ್ಮಿಕರ ಸಂಖ್ಯೆ ಕೂಡ ಸಾಕಷ್ಟು ಹೆಚ್ಚಾಗಿದೆ. ಹಿಂದಿನ ಬಿನ್ನಿ, ಮೈಸೂರು, ಮಿನರ್ವಾ ಮಿಲ್ಸ್‌ನಂಥ ದೊಡ್ಡ ಜವಳಿ ಕಾರ್ಖಾನೆಗಳಿಲ್ಲದಿದ್ದರೂ, ಅದರ ಸ್ಥಾನದಲ್ಲಿ ಗಾರ್ಮೆಂಟ್ ಕೆಲಸಗಾರರಿದ್ದಾರೆ. ನಗರದ ನಾನಾ ಭಾಗಗಳಲ್ಲಿ ಹರಡಿಕೊಂಡಿರುವ ನೂರಾರು ಕಾರ್ಖಾನೆಗಳಲ್ಲಿ ದುಡಿಯುತ್ತಿರುವವರು ಹೆಚ್ಚಾಗಿ ಮಹಿಳೆಯರೇ. ಇವರಿಗೆ ಅಸಂಘಟಿತ ಕಾರ್ಮಿಕರು ಎಂಬ ಹಣೆಪಟ್ಟಿ ಇದೆ. ತೀವ್ರವಾದ ಶೋಷಣೆಗೆ, ದಬ್ಬಾಳಿಕೆಗಳಿಗೆ ಈಡಾಗಿರುವ ಕಾರ್ಮಿಕ ವಿಭಾಗ ಇವರು. ಕೆಲವು ವಿಭಾಗಗಳಲ್ಲಿ ಸಂಘಟನೆ ಇದ್ದರೂ ಇನ್ನೂ ದುರ್ಬಲ. ಇನ್ನು ಸಂಘಟಿತ ಕಾರ್ಮಿಕರು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಕೇಂದ್ರ ಸರಕಾರದ ಉದ್ಯಮಗಳ ನೌಕರರು, ಬ್ಯಾಂಕ್, ಇನ್ಶೂರೆನ್ಸ್, ಸಾರಿಗೆ ಮೊದಲಾದವುಗಳಲ್ಲಿ ದುಡಿಯುವವರೂ ಇದ್ದಾರೆ. ಇಷ್ಟೆಲ್ಲ ಇದ್ದರೂ ಹಿಂದಿನಂತೆ ಕಾರ್ಮಿಕರ ಐಕ್ಯ ಕಾರ್ಯಾಚರಣೆಗಳು ಕಾಣಬರುವುದು ಅಪರೂಪ. ಟ್ರೇಡ್ ಯೂನಿಯನ್ ಚಳವಳಿಯ ಸ್ವರೂಪವೇ ಬದಲಾಗಿದೆ. ಹೋರಾಟಗಳಿಗಿಂತ ಹೆಚ್ಚಾಗಿ ಸಂಧಾನಗಳಿಗೆ ಹೆಚ್ಚು ಒತ್ತು ಇದೆ. ಇದರ ಜೊತೆಗೆ ಕಾರ್ಮಿಕರ ನ್ಯಾಯಾಲಯಗಳ ಕಟ್ಟೆ ಇದ್ದೇ ಇದೆ. ಈಚಿನ ದಿನಗಳಲ್ಲಿ, ಅಂದರೆ ಕಳೆದ ಎರಡು ಮೂರು ದಶಕಗಳಲ್ಲಿ ಕಂಟ್ರಾಕ್ಟ್ ಪದ್ಧತಿಯ ಮೇಲೆ ನೇಮಕಗಳಾಗುತ್ತಿರುವುದರಿಂದ, ಸರಕಾರದ ಕಾರ್ಮಿಕ ವಿರೋಧಿ ನೀತಿಗಳಿಂದ, ಟ್ರೇಡ್ ಯೂನಿಯನ್ ಚಳವಳಿ ಶಿಥಿಲಗೊಳ್ಳುತ್ತಿದೆ. ಆರ್ಥಿಕ ಬೇಡಿಕೆಗಳಿಗೆ ಮಾತ್ರವೇ ಸೀಮಿತಗೊಂಡಿರುವುದರಿಂದ ಕಾರ್ಮಿಕ ಸಂಘಟನೆಗಳು ರಾಜಕೀಯ ಕಾರ್ಯಾಚರಣೆಯಲ್ಲಿ ಭಾಗವಹಿಸುವುದು ಇಲ್ಲವೇ ಇಲ್ಲವಾಗಿದೆ. ಎಲ್ಲ ಬಗೆಯ ನಿರ್ಬಂಧಗಳೂ ಜಾರಿಯಲ್ಲಿರುವುದರಿಂದ ಬಹಿರಂಗ ಸಭೆಗಳು ಅಪರೂಪವಾಗಿವೆ. ಅದರ ಸ್ಥಾನದಲ್ಲಿ ಕಾಂಗ್ರೆಸ್, ಭಾಜಪಗಳ ಸಮಾವೇಶಗಳು ಬಂದಿವೆ. ಊರ ಹೊರವಲಯದಲ್ಲಿ, ಈ ಸಮಾವೇಶಗಳಿಗೆ ಜನರನ್ನು ಬಸ್ಸುಗಳಲ್ಲಿ ಲಾರಿಗಳಲ್ಲಿ ಕರೆತಂದು, ಅವರಿಗೆ ಮಧ್ಯಾಹ್ನದ ಊಟ ನೀಡಿ, ಹಣ ನೀಡಿ ಕೋಟಿಗಟ್ಟಲೆ ಹಣ ಖರ್ಚು ಮಾಡುವ ಪರಿಪಾಠ ಬಂದಿದೆ. ಹಿಂದಿನ ಮೇ ದಿನಗಳ

ಸಂಭ್ರಮ ಈಗ ಕಾಣುತ್ತಿಲ್ಲ. ಮೇ ದಿನದ ಸಭೆಗಳು ಬಿಡಿಸಾಗಿ ನಡೆಯುತ್ತವೆ. ಐಕ್ಯತೆಯಿಂದಲ್ಲ. ಐಟೆಕ್ ಸಿ.ಐ.ಟಿ.ಯು.ಗಳು ಕೂಡ ಜೊತೆಯಾಗುವುದಿಲ್ಲ. ರಜೆ ಇರುವುದರಿಂದ ಸಭೆಗೆ ಬರುವವರ ಸಂಖ್ಯೆ ಕಮ್ಮಿ. ಭಾಷಣಗಳಲ್ಲಿ ಇವತ್ತಿನ ರಾಜಕೀಯ ಪರಿಸ್ಥಿತಿ, ಭ್ರಷ್ಟಾಚಾರದ ವಿಚಾರ ತುಂಬಿರುತ್ತದೆಯೇ ಹೊರತು, ಕಾರ್ಮಿಕರ ಐಕ್ಯ ಹೋರಾಟ, ಸಮಾಜವಾದಿ ಸಮಾಜದ ಸ್ಥಾಪನೆಗಾಗಿ ಹೋರಾಟದ ಅಗತ್ಯದ ಬಗ್ಗೆ ಸೊಲ್ಲೇ ಇರದು. ಹೀಗೇ ಮುಂದುವರಿದರೆ ಮುಂದೊಂದು ದಿನ ಮೇ ದಿನದ ಆಚರಣೆಯೇ ಅದೃಶ್ಯವಾದೀತು. ಈಗಲೂ ಕಾಲ ಮಿಂಚಿಲ್ಲ. ವರ್ಷಕ್ಕೆ ಒಮ್ಮೆಯಾದರೂ ಎಲ್ಲ ಕಾರ್ಮಿಕರೂ ಜೊತೆಗೂಡಿ ಮೇ ದಿನ ಆಚರಿಸುವಂತಾಗಬೇಕು. ಟ್ರೇಡ್ ಯೂನಿಯನ್ ನಾಯಕರುಗಳು ಸಂಘಗಳಲ್ಲಿ ಆರ್ಥಿಕ ಬೇಡಿಕೆಗಳು, ದಿನನಿತ್ಯದ ಸಮಸ್ಯೆಗಳಿಗೇ ಸೀಮಿತವಾಗುವುದರ ಬದಲು ಕಾರ್ಮಿಕರನ್ನು ರಾಜಕೀಯ ಕಾರ್ಯಾಚರಣೆಯಲ್ಲಿ ತೊಡಗುವಂತೆ ಮಾಡಬೇಕು. ಇದು ಅತ್ಯಂತ ಜರೂರು ಕಾರ್ಯ. ಮೇ ದಿನವನ್ನು ಕಲೆತು ಆಚರಿಸುವುದರೊಂದಿಗೆ ಅದು ಆರಂಭವಾಗಲಿ.

೧೯೮೫ರಲ್ಲಿ ಮಂಗಳೂರಿಗೆ ಹೋಗಿದ್ದಾಗಿನ ಒಂದು ನೆನಪಿನೊಂದಿಗೆ ಈ ಬರಹ ಮುಗಿಸುತ್ತೇನೆ. ಬಹಳ ವರ್ಷಗಳ ನಂತರ ಹಿರಿಯ ಕಾಮ್ರೇಡ್ ಸಿಂಪ್ಸನ್ ಸೋನ್ಸ್‌ರನ್ನು ಭೇಟಿಯಾಗ ಬಯಸಿದೆ. ಹಿರಿಯ ಕಾಮ್ರೇಡ್ ಬಿ. ವಿ. ಕಕ್ಕಿಲ್ಲಾಯರು ಅದನ್ನು ಏರ್ಪಾಟು ಮಾಡಿದರು. ನಾನು ಉಳಿದುಕೊಂಡಿದ್ದ ಹೊಟೇಲ್ ಕೋಣೆಯಲ್ಲೇ ಈ ಭೇಟಿ. ಸೋನ್ಸರು ನನ್ನ ಕೈಹಿಡಿದು ಮಾತನಾಡತೊಡಗಿದರು. ಹಿಂದಿನ ನೆನಪುಗಳನ್ನು ಸ್ಮರಿಸಿದರು. ಇದ್ದಕ್ಕಿದ್ದಂತೆ ಭಾವುಕರಾಗಿ, ಕಣ್ಣೀರು ಸುರಿಸುತ್ತ ಅಂದಿನ ಟ್ರೇಡ್ ಯೂನಿಯನ್ ಚಳವಳಿಯ ಪರಿಸ್ಥಿತಿ ವಿವರಿಸಿದರು. ಕಾರ್ಖಾನೆಯ ಗೇಟ್ ಮೀಟಿಂಗ್‌ಗಳು ಈಗಿಲ್ಲವೇ ಇಲ್ಲ, ಸಮಾಜವಾದದ ಕುರಿತು ಮಾತಾಡುವವರೇ ಇಲ್ಲ, ಮೇ ದಿನದ ಸಭೆಯಲ್ಲಿ ಮಾತನಾಡ ಬೇಕಿದ್ದ ನನಗೆ ಕಮ್ಯುನಿಸ್ಟ್ ಪಾರ್ಟಿ ಮತ್ತು ಸಮಾಜವಾದದ ಕುರಿತು ಪ್ರಸ್ತಾಪ ಮಾಡಕೂಡದೆಂದು ಮುನ್ನೆಚ್ಚರಿಕೆ ನೀಡಲಾಯಿತು. ಅದೂ ಎಐಟಿಯುಸಿ ಸಂಘಟನೆಯ ಸಭೆಯಲ್ಲಿ. ಹೀಗೆ ಪೇಚಾಡಿಕೊಂಡ ಸೋನ್ಸ್ ಆ ಸಭೆಯಲ್ಲಿ ಭಾಗವಹಿಸಲೇ ಇಲ್ಲ.




**ಸೀಯಾರ್ಕೆ**
‘ಚೌಬೀನ’, ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ ೩ನೇ ಬ್ಲಾಕ್,
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



# ಗಜಲ್

ಒಲವಿನ ಬಾಣದ ಮೊನೆಯು ಇನ್ನೂ ಚುಚ್ಚುತಿದೆ ಹೇಗೆ ಹೇಳಲಿ ನಿನಗೆ
ತಣ್ಣಗೆ ಉರಿವ ದೀಪವೂ ಬಿಕ್ಕುತ ಕೇಳುತಿದೆ ಹೇಗೆ ಹೇಳಲಿ ನಿನಗೆ

ಕತ್ತಲು ಮುತ್ತುವ ಮುನ್ನ ಪ್ರೀತಿಯ ಬೆಳಕನ್ನಾದರೂ ಸುರಿಸೆಂದು
ಹಿಂಬದಿಯ ನೆರಳೂ ಭೂತವಾಗಿ ಕಾಡುತಿದೆ ಹೇಗೆ ಹೇಳಲಿ ನಿನಗೆ

ಚೈತ್ರದ ಚಿಗುರಿನ, ದಣಿಯದ ಕೋಗಿಲೆಯ ದನಿಯ, ಸುರಿವ ಬೆಳದಿಂಗಳಿನ
ನಲುಮೆಯ ಭಾವನೆಯೆಲ್ಲ ತಿವಿದು ಹೇಳುತಿದೆ ಹೇಗೆ ಹೇಳಲಿ ನಿನಗೆ

ತೆಕ್ಕೆಗೊಗ್ಗದ ಚುಕ್ಕೆಯೊಂದು ಕಣ್ಣಾಚೆಗಿದ್ದರೂ ಕಣ್ಮಿಟುಕಿಸಿ
ಎದೆಯರಾಗ ಹಾಡಿ ತೇಲುತ ಪಿಸುಗುಡುತಿದೆ ಹೇಗೆ ಹೇಳಲಿ ನಿನಗೆ

ಬಾಂದಳದ ಆಚೆಗೆಲ್ಲ ಅಲೆ ಅಲೆಯಾಗಿ ತೇಲುತ ದೂರಕೆ ಸಾಗಿರುವ
ಪ್ರೇಮಗಾನದ ಹೊನಲು ಅನುರಣನಗೊಳುತಿದೆ ಹೇಗೆ ಹೇಳಲಿ ನಿನಗೆ

**ಸಿದ್ಧರಾಮ ಹಿರೇಮಠ**
ಕೂಡ್ಲಿಗಿ

# ಚಂದ್ರಶೇಖರ ಕಂಬಾರರ ಶಿಖರಸೂರ್ಯನ ಬಗ್ಗೆ ಒಂದಿಷ್ಟು ಹೇಳತೇನ ಕೇಳ

## ಪ್ರೊ॥ ಶಿವರಾಮಯ್ಯ

**ಕಂಬಾರರ ಸಾಹಿತ್ಯವನ್ನು ಕುರಿತು ಕನ್ನಡ ವಿಮರ್ಶೆ ಹೊಗಳಲು ಮುಖ್ಯ ಕಾರಣ, ಕಂಬಾರರು ಸಾಹಿತ್ಯ ರಚನೆಯ ಸಂದರ್ಭದಲ್ಲಿ ಅತ್ತಿತ್ತ ನೋಡದೆ ಪ್ರಜ್ಞಾಪೂರ್ವಕವಾಗಿ, ಅವರು ಮೂಲ ದ್ರಾವಿಡ ಹಾಗೂ ಕನ್ನಡ ದೇಸಿಗೆ ಒಲಿದದ್ದು ಎಂದೆನಿಸುತ್ತದೆ. ವಸ್ತು, ಭಾಷೆ, ಶೈಲಿ, ತಂತ್ರ ಇತ್ಯಾದಿ ಪ್ರತಿಯೊಂದರಲ್ಲೂ ಅವರು ಕನ್ನಡ ದೇಸಿಯನ್ನು ಪುನರ್ ಪ್ರತಿಷ್ಠಾಪಿಸಲು ತೊಡಗಿದ್ದು. ನವೋದಯದವರು ಪಶ್ಚಿಮದ ವಿದ್ಯೆಯಿಂದ ಪೂರ್ವಪರಂಪರೆಯನ್ನು ಶೋಧಿಸಲು ಹೊರಟರೆ; ನವ್ಯದವರು ಕೂಡ ಪಶ್ಚಿಮ ವಿದ್ಯೆಯಿಂದಲೇ ಪೂರ್ವ ಮೀಮಾಂಸಾ ಕಾಂಡವನ್ನು ಬಗೆಯಲು ತೊಡಗಿದರೆ; ಪ್ರಗತಿಶೀಲರು ಎಡಪಂಥೀಯ ಧೋರಣೆಯಿಂದ ಸಾಮಾಜಿಕ ವಿಪ್ಲವವನ್ನು ಸಾಧಿಸಲು ಹೆಣಗಿದರೆ, ದಲಿತ-ಬಂಡಾಯದವರು ಸಾಮಾಜಿಕ ಬದ್ಧತೆಯ ಮೂಲಕ ನವ ಸಮಾಜವನ್ನು ಕಟ್ಟಲು ಉಪಕ್ರಮಿಸಿದರೆ; ಕಂಬಾರರು ಮಾತ್ರ ಕನ್ನಡ ಜಾನಪದ ಸತ್ವವನ್ನು 'ಹೇಳತೇನ ಕೇಳ' ಎಂದು ಹಾಡುತ್ತಾ ಹೊರಟರು. ಅವರ ಮೊದಲ ಕಾವ್ಯ ಸಂಕಲನ ಮುಗುಳು (೧೯೫೮) ಮೊದಲುಗೊಂಡು ಇತ್ತೀಚಿನ ಶಿವರಾತ್ರಿ (೨೦೧೧) ನಾಟಕದವರೆಗೆ ಸುಮಾರು ಅರ್ಧ ಶತಮಾನ ಕಾಲ ಇವರು 'ಮರೆತೇನಂದರ ಮರೆಯಲಿ ಹ್ಯಾಂಗ' ಎಂದು ಕನ್ನಡ ಜನಪದ ಜಗತ್ತಿಗೆ ಮಾರುಹೋಗಿ ಅದರ ಹಾಡುಪಾಡನ್ನು ಶೋಧಿಸಿ, ವಿಸ್ತರಿಸಿ, ಪುನರ್ ಸೃಷ್ಟಿಗೊಳಿಸುತ್ತಾ ಬಂದರು.**

ಉತ್ತರ ಕರ್ನಾಟಕದ ಬೆಳಗಾವಿ ಜಿಲ್ಲೆ ಘೋಡಗೇರಿ ಎಂಬ ಚಿಕ್ಕ ಹಳ್ಳಿಯ ಬಡ ಕುಟುಂಬದಲ್ಲಿ ಹುಟ್ಟಿಬಂದ ಚಂದ್ರಶೇಖರ ಕಂಬಾರರು ಕವಿ, ನಾಟಕಕಾರ, ಕಾದಂಬರಿಕಾರ, ಸಂಸ್ಕೃತಿ ಚಿಂತಕ, ಜಾನಪದ ವಿದ್ವಾಂಸ, ಚಲನಚಿತ್ರ ನಿರ್ದೇಶಕ ಮುಂತಾಗಿ ಕನ್ನಡ ನಾಡಿನ ಮನೆ ಮಾತಾಗಿರುವ ಲೇಖಕ. ಇವರು ಇಲ್ಲಿಯವರೆಗೆ ೮ ಕವನ ಸಂಕಲನಗಳು, ೨೨ ನಾಟಕಗಳು, ೫ ಕಥೆ, ಕಾದಂಬರಿಗಳು ಹಾಗೂ ಹಲವಾರು ಜಾನಪದ ಸಂಸ್ಕೃತಿ ಸಂಶೋಧನೆ ಮತ್ತು ರಂಗಭೂಮಿಗೆ ಸಂಬಂಧಿಸಿದ ಗ್ರಂಥಗಳೂ ಸೇರಿದಂತೆ ಸುಮಾರು ೫೦ ಕೃತಿಗಳನ್ನು ಪ್ರಕಟಿಸಿದ್ದಾರೆ. ಇತ್ತೀಚೆಗೆ ಭಾರತ ಸಾಹಿತ್ಯ ಲೋಕದ ಅತ್ಯುಚ್ಚ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರೂ ಆಗಿದ್ದಾರೆ. ಚಕೋರಿ (ಕಾವ್ಯ) ಹಾಗೂ ಶಿಖರಸೂರ್ಯ (ಕಾದಂಬರಿ)ಗಳನ್ನು ಕಂಬಾರರ ಅತಿ ಮುಖ್ಯ ಕೃತಿಗಳೆಂದು ಹೇಳಲಾಗುತ್ತಿದೆ.

ಕನಕಪುರಿಯ ಕೊನೆಯ ದೊರೆ ಶಿಖರಸೂರ್ಯ. ಇವನ ಇತಿಹಾಸ ಶಿವಾಪುರದಿಂದ ಸುರುವಾಗುತ್ತದೆ. ಆದರೆ ಅವನ ಕುಲಮೂಲಗಳಿಗೆ ಸಂಬಂಧಿಸಿದಂತೆ, ಕಂಬಾರರ ಇನ್ನೊಂದು ಕಾವ್ಯ 'ಚಕೋರಿ'ಯಲ್ಲಿ ಕೆಲವು ಮಾಹಿತಿಗಳು ದೊರೆಯುತ್ತವೆ. ಆ ಪ್ರಕಾರ 'ಚಕೋರಿ'ಯ ನಾಯಕ ಚಂದಮುತ್ತ ಮತ್ತು ಚಿನ್ನಮುತ್ತ (ಇವನೇ ಆಮೇಲೆ ಜಯಸೂರ್ಯ, ಶಿಖರಸೂರ್ಯ ಎಂದು ತನ್ನ ಹೆಸರನ್ನು ಬದಲಾಯಿಸಿಕೊಳ್ಳುತ್ತಾನೆ) ಇವರು ಸೋದರ ಸಂಬಂಧಿಗಳು. ಇವರ ವಂಶದ ಚರಿತ್ರೆ ಇಂತಿದೆ :

ಶಿವದೇವರ ಹಣೆಯ ಬೆವರ ಹನಿ ಭೂಲೋಕದ ಮೇಲೆ ಬಿದ್ದಾಗ ಒಬ್ಬ ನರಮಾನವ ಹುಟ್ಟಿಕೊಂಡ. ''ಅಧೋಲೋಕದಲ್ಲಿರುವ ಮಾಯಕಾರ್ತಿಯನ್ನು ವರಿಸಿ ಸುಖವಾಗಿರು'' ಎಂದು ಶಿವದೇವರು ಅವನಿಗೆ ಅಪ್ಪಣೆ ಮಾಡಿದರು. ಆ ನರಮಾನವನು ಅಧೋಲೋಕಕ್ಕೆ ಹೋಗಿ ಮಾಯಕಾರ್ತಿಯನ್ನು ಕರೆದುಕೊಂಡು ಮೇಲೆ ಬರುವಾಗ ಸರ್ಪ ಸೈತಾನನು ಅವನ ಎಡಗಾಲು ಹಿಡಿದು ಜಗ್ಗಲಾರಂಭಿಸಿದ, ಬಲಭಾಗವನ್ನು ಮಾಯಕಾರ್ತಿ ಮೇಲೆ ಎಳೆಯ ತೊಡಗಿದಳು. ನರಮಾನವ ಸೀಳಿ ಎರಡಾದ. ಶಿವ ದೇವರ ಅಪೇಕ್ಷೆಯಂತೆ ಸೂರ್ಯನ ಬೆಳಕಿನಿಂದ ಬಲಭಾಗ ಪೂರ್ಣಗೊಂಡಿತು. ಚಂದ್ರನ ಬೆಳಕಿನಿಂದ ಎಡಭಾಗ ಪೂರ್ಣ ಗೊಂಡಿತು. ಹೀಗೆ ಒಬ್ಬ ನರಮಾನವ ಎರಡಾಗಿ ಅಣ್ಣತಮ್ಮ ಆದರು. ಅವರನ್ನು ಶಿವದೇವರು 'ಮಾನವರಿಗೆ ದೊಡ್ಡವರಾಗಿ ದೇವರಿಗೆ ಸಣ್ಣವರಾಗಿ ಬಾಳಿರಯ್ಯ' ಎಂದು ಆಶೀರ್ವದಿಸಿದನು. ಅಲ್ಲಿಂದ ಸಂಸಾರದ ದಂದುಗ ಪ್ರಾರಂಭವಾಯಿತು. ಶಿವಾಪುರವೆಂಬ ಹಟ್ಟಿ ಕಟ್ಟಿದರು.



ದಿನಕರುಗಳನ್ನು ಜೋಪಾನ ಮಾಡುವ ಗೊಲ್ಲಕುಲ ಉದಯಿಸಿತು. ಅಣ್ಣನದು ಸೂರ್ಯನ ಬೆಡಗು. ತಮ್ಮನದು ಚಂದ್ರನ ಬೆಡಗು. ಶಿವದೇವರು ಅವರಿಗೆ ಪುಣ್ಯಕೋಟಿಯ ಒಂದೊಂದು ಕೊಂಬು ನೀಡಿದರು. ಅಣ್ಣ ಕೊಂಬೂದಿದಾಗ ೬೪ ವಿದ್ಯೆಗಳು, ತಮ್ಮ ಕೊಂಬೂದಿದಾಗ ಸಂಗೀತ ಸಾಹಿತ್ಯ ಮುಂತಾದ ಕಲೆಗಳು ಹುಟ್ಟಿಕೊಂಡವು. ಶಿವಾಪುರದ ಹಟ್ಟಿಯಲ್ಲಿ ಯಕ್ಷಿಯ ವರದಿಂದ ಸೂರ್ಯನ ಬೆಡಗಿನ ದಂಪತಿಗಳಿಗೆ ಚಿನ್ನಮುತ್ತನೂ, ಚಂದ್ರ ಬೆಡಗಿನ ದಂಪತಿಗಳಿಗೆ ಚಂದಮುತ್ತನೂ ಹುಟ್ಟಿದರು.

*(ಆಧಾರ: ಡಾ॥ ಬಸವರಾಜ ಮಲಶೆಟ್ಟಿಯವರ ಪುಸ್ತಕ: ಚಂದ್ರಶೇಖರ ಕಂಬಾರ, ಪು. ೪೫-೪೬)*

ಹೀಗೆ ಕವಲೊಡೆದ ಸೂರ್ಯ ಬೆಡಗಿನ ಚಿನ್ನಮುತ್ತನ ಕಥೆ ಕಂಬಾರರ 'ಶಿಖರಸೂರ್ಯ' ಕಾದಂಬರಿಗೂ; ಚಂದ್ರ ಬೆಡಗಿನ ಚಂದಮುತ್ತನ ಕಥೆ ಅವರ 'ಚಕೋರಿ' ಕಾವ್ಯಕ್ಕೂ ವಸ್ತು ಆದವು. ಈ ಕೃತಿಗಳು ಒಂದು ರೀತಿಯಲ್ಲಿ ಸೂರ್ಯವಂಶದ ರಾಮಾಯಣ ಕಥೆಯನ್ನೂ, ಚಂದ್ರವಂಶದ ಮಹಾಭಾರತ ಕಥೆಯನ್ನೂ ನೆನಪಿಗೆ ತಂದರೂ ಆ ಕಥಾವಸ್ತುವಿನೊಂದಿಗೆ ಯಾವುದೇ ಸಂಬಂಧವಿಲ್ಲ. ಆರ್ಯೇತರ ಸಂಸ್ಕೃತಿಯ ಅಚ್ಚ ದ್ರಾವಿಡ ಸಂಸ್ಕೃತಿಯ ಆದಿಮ ಕೃತಿಗಳಂತಿರುವ, ಸಂಗಮ್ ಯುಗದ ಪ್ರಾಚೀನ ತಮಿಳಿನ ಯಮಳ ಕಾವ್ಯಗಳಾದ ಶಿಲಪ್ಪದಿಕಾರಮ್ (ಇಳಂಗೋ ಅಡಿಗಳ್) ಹಾಗೂ ಮಣಿಮೇಕಲಯ್ (ಚಾತ್ತನಾರ್) ಮಹಾಕಾವ್ಯಗಳಂತೆ ಕಂಬಾರರ ಚಕೋರಿ ಮತ್ತು ಶಿಖರಸೂರ್ಯ ಕೃತಿಗಳು ಸಹ ಅಚ್ಚ ದ್ರಾವಿಡ ಕಥಾ ರಚನೆಗಳೇ. ಮೇಲೆ ಹೇಳಿದ ಮೂಲ ಕಥೆ ಕರ್ನಾಟಕ ಗೊಲ್ಲರ ಒಂದು ಬಣದ ಸೃಷ್ಟಿ ಕಥನ. ಸ್ಥಳೀಯವಾದ ಆ ಕಥಾ ಕಣಜಕ್ಕೆ ಕಂಬಾರರು ಋಣಿಯಾಗಿದ್ದಾರೆ. ಕೇವಲ ಸಂಗೀತ ನಾಟ್ಯ ಸಾಧನೆಯಲ್ಲಿ ತನ್ನನ್ನು ತೊಡಗಿಸಿಕೊಂಡ ಚಂದಮುತ್ತ 'ಚಕೋರಿ'ಯಲ್ಲಿ ದುರಂತಮಯ ಪಾತ್ರ ವಾದರೆ, ವಿದ್ಯೆಯ ಬೆನ್ನು ಹತ್ತಿ ಹೊರಟ ಚಿನ್ನಮುತ್ತ ಆತ್ಮನಾಶದಲ್ಲಿ ಪರ್ಯವಸಾನವಾಗುತ್ತಾನೆ. 'ಶಿಖರಸೂರ್ಯ' ದಲ್ಲಿ, ನೆಲಮುಟ್ಟುವ ಪ್ರೀತಿಯ ಚಂದಮುತ್ತ ಯಕ್ಷಿ-ಚಕೋರಿಯ ಉತ್ಥಾನಕ್ಕಾಗಿ ತನ್ನನ್ನೇ ತೆತ್ತುಕೊಂಡು ಅಂತರಶಿಲೆ ಯಾಗಿ ರಾಮಾಯಣದ ಅಹಲ್ಯೆಯ ಪ್ರಸಂಗವನ್ನು ನೆನಪಿಗೆ ತರುತ್ತಾನೆ. ಪ್ರೇಮದ ವಿಜಯದ ಕಥೆಯಾದ ನಾಗವರ್ಮನ ಕಾದಂಬರಿಯನ್ನು ಹೋಲುವ, ಈ ಜಾನಪದ ವಚನ ಕಥನ 'ಚಕೋರಿ' ಭಾವಗೀತಾತ್ಮಕ ವಾದ ರಚನೆಯಾಗಿ ನಮ್ಮನ್ನು ಬಹುಕಾಲ ಕಾಡುತ್ತದೆ. ಅದಕ್ಕೆ ಕಾರಣ ಇದು ಬುಡಕಟ್ಟು ಜನರ ಮುಗ್ಧ ಪ್ರಣಯ ಕಥೆಯ ಜೀವದ್ರವ್ಯವನ್ನು ಹೀರಿ ಬೆಳೆದಿರುವುದು.

ಮೇಲು ಸಂಸ್ಕೃತಿಯ ಮಹಾಕಾವ್ಯ ರಾಮಾಯಣದಲ್ಲಿ ಸೂರ್ಯವಂಶಿ ರಾಜಕುವರ, ಶಿಲೆಯಾಗಿದ್ದ ಗೌತಮ ಸತಿ ಅಹಲ್ಯೆಯನ್ನು ಸಜೀವಗೊಳಿಸಿ ಉದ್ಧರಿಸಿದರೆ, ಈ ಬುಡಕಟ್ಟು ಕಾವ್ಯ ಕಥೆ ಚಕೋರಿಯಲ್ಲಿ ಚಂದ್ರಕುಲದ ಚಂದಮುತ್ತನು ಶಿಲೆಯಾಗಿದ್ದ ಯಕ್ಷಿಯನ್ನು ಉದ್ಧರಿಸಿ ತಾನೇ ಅಂತರಶಿಲೆ ಯಾಗಿ ಪರಿಣಮಿಸಿದ್ದು ನಮ್ಮ ಬದುಕಿನ ವ್ಯಂಗ್ಯ.

ಇನ್ನು ಕಂಬಾರರೇ ಹೇಳುವಂತೆ 'ಶಿಖರಸೂರ್ಯ' ಕಾದಂಬರಿಯನ್ನು ಒಂದು ಸ್ವತಂತ್ರ ಕೃತಿ ಎಂದಾದರೂ ನೋಡಬಹುದು ಅಥವಾ ಚಕೋರಿಯ ಎರಡನೆಯ ಭಾಗವೆಂದಾದರೂ ನೋಡಬಹುದು. ಚಕೋರಿ ಒಬ್ಬ ಕಲಾವಿದನ ಪರಿಪೂರ್ಣತೆಯ ಅನ್ವೇಷಣೆಯನ್ನು ಹೇಳುವ ಕೃತಿಯಾದರೆ, 'ಶಿಖರಸೂರ್ಯ' ವಿದ್ಯೆಯ ಮೂಲಕ ಹಣ ಅಧಿಕಾರದ ಅನ್ವೇಷಣೆ ಮಾಡುವಾತನ ಕಥೆ. ಆದರೆ ಇಲ್ಲಿಗೆ ಚಕೋರಿಯಲ್ಲಿ ಬರುವ ಕಲೆ ಮತ್ತು ವಿದ್ಯೆಗಳಿಗೆ ಸಂಬಂಧಪಟ್ಟ ಪುರಾಣದ ವಿವರಣೆ ಸಂಪೂರ್ಣವಾಗುತ್ತದೆ (ಲೇಖಕರ ಮಾತು).

ಕಾದಂಬರಿ ಎಂಬುದು ಇತಿಹಾಸದ ಅಗತ್ಯಗಳನ್ನು ಪೂರೈಸಲು ಮಹಾಕಾವ್ಯದ ಬದಲು ಹುಟ್ಟಿಕೊಂಡಿರುವ ಸಾಹಿತ್ಯ ಪ್ರಕಾರ ಎನ್ನುವ ಕಂಬಾರರು ಚಕೋರಿಯನ್ನು ವಚನ ಕಥಾನಕವೆಂದೂ, 'ಶಿಖರಸೂರ್ಯ' ಕೃತಿಯನ್ನು ಕಾದಂಬರಿ ಎಂದೂ ಕರೆದಿದ್ದಾರೆ. ಚಕೋರಿಯನ್ನು ಕನಸು ಗಳು ಹೇಳಿದರೆ, ಕಾದಂಬರಿಯನ್ನು ಇತಿಹಾಸಕಾರರೆಂಬ ಹೆಳವರು ಹೇಳುತ್ತಾರೆ. ಕಂಬಾರರ ಈ ಅವಳಿ ಕೃತಿಗಳು ರೂಪ, ರಚನೆ, ಶೈಲಿ, ತಂತ್ರ ಎಲ್ಲದರಲ್ಲೂ ವಿಭಿನ್ನ. ಕನಸುಗಳು ಬಿತ್ತರಿಸುವ ಚಕೋರಿಯ ಕಥನತಂತ್ರ ಜನಪದ ಸಾಹಿತ್ಯದ ಭಾವಗೀತಾತ್ಮಕ ಗುಣವನ್ನು ಪಡೆದ ರಚನೆಯಾದರೆ, 'ಶಿಖರಸೂರ್ಯ' ಕಾದಂಬರಿಯ ತಂತ್ರ ವಿಭಿನ್ನವಾಗಿದ್ದು, ಇತ್ತೀಚಿನ ಜಾಗತಿಕ ಖ್ಯಾತಿಯ ಜೆ. ಕೆ. ರೌಲಿಂಗ್‌ಳ 'ಹ್ಯಾರಿ ಪಾಟರ್' ಕೃತಿಯನ್ನು ನೆನಪಿಸುತ್ತ ಭೂ-ಭುವನವನ್ನೆಲ್ಲ ಸುತ್ತುಹಾಕುವ ಗದ್ಯ ಶೈಲಿಯದ್ದಾಗಿದೆ. ಅದು ಚಕೋರಿಯ ಗೊಲ್ಲರ ಹಟ್ಟಿಯಿಂದ ಹೊರಟು ಶಿವಾಪುರ ಗುಡ್ಡದ ಕೊರಕಲಿಗೆ ಬಿದ್ದು, ಅಲ್ಲಿಂದೆದ್ದು, ಕನಕಪುರಿಗೆ ಓಡಿ, ಛಪ್ಪನ್ನೈವತ್ತಾರು ದೇಶಂಗಳ ಸುತ್ತಿ, ಬಿಳಿಗಿರಿಗೆ ಹತ್ತಿ, ಕಂಚಿಗೆ ಮುಟ್ಟಿ, ಹದ್ದಿನ ಕೊಳ್ಳಕ್ಕೆ ಜಿಗಿದು, ಗರುಡನ ಬೆಟ್ಟಕ್ಕೆ ಹತ್ತಿ, ಶಿವಾಪುರ ಹಾಗೂ ಕನಕಪುರಿಗಳಿಗೆ ಬಂದು ಕಡೆಗೆ ಹದ್ದಿನ ಬೆಟ್ಟಕ್ಕೆ ಹಾರುತ್ತದೆ.

ಚಕೋರಿಯ ನಾಯಕ ಚಂದಮುತ್ತ ಸಕಲ ಜೀವಿಗಳಿಗೆ ಲೇಸ ಬಯಸುವ ಪ್ರೇಮಲ ಜೀವಿಯಾದರೆ, 'ಶಿಖರ ಸೂರ್ಯ' (ಚಿನ್ನಮುತ್ತ)ನ ಖಳನಾಯಕತ್ವದ ಗುಣಗಳು 'ಚಕೋರಿ'ಯಲ್ಲಿಯೇ ವ್ಯಕ್ತವಾಗುತ್ತವೆ. ಅವನ ಪರಿಸರ ನಾಶದ ಅಣುವಿಕಿರಣ ಬೀಜಗಳು ಇಲ್ಲಿಯೆ ಮೊಳಕೆ




ಒಡೆಯುತ್ತವೆ. ಆ ಒಂದೆರಡು ಸನ್ನಿವೇಶಗಳು ಹೀಗಿವೆ :

ಚಕೋರಿಯ ಜಾತ್ರೆಯಲ್ಲಿ ಚಿತ್ರಿತವಾಗಿರುವಂತೆ ದಾಯಾದಿಗಳಾದ ಚಿನ್ನಮುತ್ತನಿಗೂ ಚಂದಮುತ್ತನಿಗೂ ಕೊಳಲೂದುವುದರಲ್ಲಿ ಪಂದ್ಯ ಬೀಳುತ್ತದೆ. ಆದರೆ ಚಿನ್ನಮುತ್ತ ಚಂದಮುತ್ತನೊಂದಿಗೆ ಸ್ಪರ್ಧಿಸಲಾರದೆ ಅವಮಾನಿತನಾಗುತ್ತಾನೆ. ಜನಪದರ ಬದುಕಿನ ಜೀವ ಜೀವಾಳವೇ ಕನಸು, ಕಾಯುವಿಕೆ. ಇಲ್ಲವಾದರೆ ಎದೆ ಒಡೆದು ಸಾಯಬೇಕಾಗುತ್ತದೆ; ಎಂದರೆ, ವಾಸ್ತವ ಅಷ್ಟು ಭಯಾನಕ - ಅನೇಕ ವೇಳೆ. ಅವರು ಕನಸು ಕೈಗೂಡುವ ವರೆಗೆ ಕಾಯಲೇಬೇಕಲ್ಲ? ಚಿನ್ನಮುತ್ತನಿಗೆ ಅಂಥ ವ್ಯವಧಾನವೇ ಇಲ್ಲ. ಚಂದಮುತ್ತನೊಂದಿಗೆ ಸ್ಪರ್ಧಿಸಿ ಸೋತುದಕ್ಕೆ ಮುನಿದುಕೊಳ್ಳುತ್ತಾನೆ. ಇನ್ನೊಂದು ಪ್ರಸಂಗ ದಲ್ಲಿ ಸರೋವರದಲ್ಲಿ ತನ್ನ ಪಾಡಿಗೆ ತಾನು ವಿಹರಿಸುತ್ತಿದ್ದ ಒಂದು ಹಂಸವನ್ನು ಕೊಂದುಬಿಡುತ್ತಾನೆ. ಆಗ ಹೆಣ್ಣು ಹಕ್ಕಿ (ಹಂಸಿ) ಬಿಟ್ಟ ಬಾಣದಂತೆ ಇವನತ್ತ ದೃಷ್ಟಿ ನೆಟ್ಟು ಆಕ್ರಮಣಕ್ಕೆ ಹಾರಿಬರುತ್ತದೆ. ಭಯಗೊಂಡ ಚಿನ್ನಮುತ್ತ ಅದರ ದೃಷ್ಟಿಯಿಂದ ಮರೆಯಾಗುತ್ತಾನೆ. ಹೀಗೆ ಒಂದು ಪಕ್ಷಿಯನ್ನು ಎದುರಿಸಲಾರದ ನೈತಿಕವಾಗಿ ಹೇಡಿಯಾದ ಅವನನ್ನೇ ಆ ಹಂಸಿ ನೆಟ್ಟನೋಟದಿಂದ ನೋಡಲು, ಅನಿವಾರ್ಯವಾಗಿ ಅದರ ಭೇಟಿಗೆ ಹೋಗುತ್ತಾನೆ. ಆದರೆ ಆ ಮೋಸಗಾರ ನಡುವಿಗೆ ಚಿಕ್ಕ ಚೂರಿಯನ್ನೂ, ಕೈಯಲ್ಲಿ ದೊಣ್ಣೆಯನ್ನೂ ಹಿಡಿದುಕೊಂಡು ಹೋಗಿ ಚಂದಮುತ್ತನ ಮೇಲಿನ ಅಸೂಯೆಯಿಂದ ಆ ಹಂಸಿಯನ್ನು ಕೊಂದು, ಅನಂತರ ಪಾಪಪ್ರಜ್ಞೆಯಿಂದ ತೊಳಲುತ್ತಾನೆ. ಹೀಗೆ ಮುಂದೆ ಶಿಖರಸೂರ್ಯನಾದಾಗಿನ ಚಿನ್ನಮುತ್ತನ ಭಂಡತನ, ಹೇಡಿತನ ಹಾಗೂ ಕ್ರೌರ್ಯದ ಲಕ್ಷಣಗಳು ಚಕೋರಿ ಯಲ್ಲಿಯೆ ಸೂಚಿತವಾಗಿವೆ. ಬದುಕಿದ್ದಾಗಲೇ ಕಥೆಯಾಗಿ, ಲಾವಣಿಯಾಗಿ, ದೇವತೆಯಾಗಿ ಪವಾಡಗಳ ಮೆರೆದ ಚಂದಮುತ್ತನ ಭಾಗಾದಿ ಚಿನ್ನಮುತ್ತ ಶಿಖರಸೂರ್ಯ ಕಾದಂಬರಿಯ ನಾಯಕ ಪುರುಷ. ಇವನೂ ಕಲಾವಿದ ನಾಗಲು ಪ್ರಯತ್ನಿಸಿ, ಸಾಧ್ಯವಾಗದೆ ಮಲೆಯಾಳಿ ಮಂತ್ರ ತಂತ್ರಾದಿ ವಾಮಾಚಾರ ಅನುಸರಿಸಿ, ಆಗಲೂ ಸಾಧ್ಯ ವಾಗದೆ ಗುರುಶಾಪಕ್ಕೆ ಗುರಿಯಾಗಿ ಎರಡು ಮೂರು ವರ್ಷ ಅಲ್ಲಲ್ಲಿ ಅಲೆದಾಡಿ, ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳಲೆಂದು ಕಾಡಿನ ಕಮರಿಗೆ ಜಿಗಿದು ಸ್ಮೃತಿತಪ್ಪಿ ಬಿದ್ದವನು. ಅಂಥವನನ್ನು ಶಿವಾಪುರದ ಜಟ್ಟಿಗ ಎತ್ತಿ ತಂದು ಉಪಚರಿಸಿ ಕನಕಪುರಿಯ ಇತಿಹಾಸಕ್ಕೆ ಕಾಣಿಕೆಯಾಗಿ ಕೊಟ್ಟ. ಕಾಡಿನ ಕಮರಿಯಲ್ಲಿ ಬೇಹುಷಾರಾಗಿ (ಪ್ರಜ್ಞೆತಪ್ಪಿ) ಬಿದ್ದಿದ್ದ ಚಿನ್ನಮುತ್ತನನ್ನು ಜಟ್ಟಿಗ ದಯಮಾಡಿ ಶಿವಾಪುರಕ್ಕೆ ಎತ್ತಿ ಕೊಂಡು ಬಂದನಲ್ಲ, ಅಲ್ಲಿಂದ ಮುಂದೆ ಶಿಖರಸೂರ್ಯನ ಇತಿಹಾಸ ಕಥನ ಆರಂಭವಾಗುತ್ತದೆ (ಪ್ರಸ್ತಾವನೆ).

ಇನ್ನು ಶಿಖರಸೂರ್ಯನ ಚರಿತ್ರೆ ಎಂದರೆ ಅದು ಅವನ ಲೈಂಗಿಕತೆ ಹಾಗೂ ಅಪರಾಧಗಳ ಚರಿತ್ರೆಯೇ ಆಗಿದೆ. ಈ ಚಾರಿತ್ರ್ಯಹೀನನ ಚರಿತ್ರೆಯನ್ನು ಸ್ವಲ್ಪ ಅವಧರಿಸಬಹುದು :

ಶಿವಾಪುರ ಗುಡ್ಡದ ಕೊರಕಲಿನಲ್ಲಿ ಬಿದ್ದು ಹೆಣ ವಾಗುತ್ತಿದ್ದ ಚಿನ್ನಮುತ್ತನನ್ನು ಜಟ್ಟಿಗ ಎತ್ತಿ ತಂದು ಅವನ ಗೆಳತಿ ಬೆಳ್ಳಿಯ ಆರೈಕೆಗೆ ಬಿಡುತ್ತಾನೆ. ಬೆಳ್ಳಿ ಅವನಿಗೆ ಮದ್ದು ಮಾಡಿ ಪುನಃ ಜೀವ ಕೊಡುತ್ತಾಳೆ. ಚಿನ್ನಮುತ್ತ ಅವರಿಗೆ ತನ್ನ ಹೆಸರು ಮರೆಯಿಸಿ ಜಯಸೂರ್ಯನೆಂದು ಹೇಳಿ



**ಶ್ರೀ. ಗಿರೀಶ್ ಕಾಸರವಳ್ಳಿ ಅವರ 'ಕೂರ್ಮಾವತಾರ' ಎಂಬ ಚಲನಚಿತ್ರಕ್ಕೆ ಅತ್ಯುತ್ತಮ ಪ್ರಾದೇಶಿಕ ಚಿತ್ರವೆಂದು ರಾಷ್ಟ್ರೀಯ ಪ್ರಶಸ್ತಿ ನೀಡಲಾಗಿದೆ (2010-11). ಮಾನ್ಯ ಶ್ರೀ. ಗಿರೀಶ್ ಅವರನ್ನು 'ಹೊಸತು' ಹಾರ್ದಿಕವಾಗಿ ಅಭಿನಂದಿಸುತ್ತದೆ.**

ಕೊಳ್ಳುತ್ತಾನೆ. ಗುರು ಶಿವಪಾದರು ಅವನನ್ನು ವಜ್ರಕಾಯ ನನ್ನಾಗಿ ಮಾಡಿ ರಸವಿದ್ಯೆಯನ್ನು ಉಪದೇಶಿಸುತ್ತಾರೆ.

ಆದರೇನು ? ಕಾಮಕ್ಕೆ ಕಣ್ಣಿಲ್ಲ; ಆಸೆಗೆ ಕೊನೆಯಿಲ್ಲ. ಚಂದುಳ್ಳಿ ಹೆಣ್ಣು ಬೆಳ್ಳಿಯ ಮೇಲೆ ಕಣ್ಣಿಟ್ಟ ಜಯಸೂರ್ಯ. ಅವಳ ಮತ್ತು ಜಟ್ಟಿಗರ ಮದುವೆಯಾಗುತ್ತದೆ. ಪ್ರಸ್ಥದ ದಿನ ಸಂಜೆ ಜಟ್ಟಿಗ ಮಡುವಿಗೆ ಮುಳುಗಿ ಬರಲು ಹೋದಾಗ ಹಿಂಬಾಲಿಸಿ ಹೋದ ಜಯಸೂರ್ಯ ಅವನ ತಲೆಯ ಮೇಲೆ ಬಂಡೆಗಲ್ಲು ಹಾಕಿ ಮಡುವಿನಲ್ಲೇ ಮರಣ ಹೊಂದುವಂತೆ ಮಾಡಿ, ಅವನ ಮನೆಗೆ ಬಂದು, ಅಷ್ಟರಲ್ಲಿ ಇನಿಯನ ಬರುವನ್ನೇ ಹಾರೈಸಿ ಅರೆನಿದ್ರೆಗೆ ಸಂದಿದ್ದ ಬೆಳ್ಳಿಯ ಮೇಲೆ ಅತ್ಯಾಚಾರಕ್ಕೆಳಸುತ್ತಾನೆ. ಆದರೆ ದಿಜ್ಞೂಢಳಾದ ಬೆಳ್ಳಿ ಕಿವಿಯ ಮೇಲೆ ರೋಮವಿದ್ದ ಜಯಸೂರ್ಯನನ್ನು ಸ್ಪರ್ಶ ಮಾತ್ರದಿಂದಲೇ ಗುರ್ತಿಸಿ, ಸಿಟ್ಟಿನಿಂದ ಝಾಡಿಸಿ ಒದೆಯುತ್ತಾಳೆ. ಅವನು ಬಿದ್ದೆದ್ದು ಓಡುತ್ತಾನೆ.

ಹೀಗೆ ಬೆಳ್ಳಿಯಿಂದ ಒದೆ ತಿಂದು, ಕುರುಮುನಿ (ಸಹಪಾಠಿ)ಯಿಂದ ಏಟುತಿಂದು ಓಡಿಬರುವಾಗ ಜಯಸೂರ್ಯ ಯೋಚನೆ ಮಾಡಿದ್ದು, ದೂರದೂರಕ್ಕೆ ಶಿವಾಪುರದ ಯಾರೂ, ಅಂದರೆ ಗಾಳಿ ಕೂಡ ಸುಳಿಯದ ಕಡೆ ಬದುಕಬೇಕೆಂದು; ಬದುಕಿ ಸೇಡು ತೀರಿಸಿಕೊಳ್ಳ ಬೇಕೆಂದು ನಿರ್ಧರಿಸಿದ್ದ. ನಾಲ್ಕು ರಾತ್ರಿ ಮೂರು ಹಗಲು ಓಡಿಬಂದು ಕಾಡಿನಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದ ಸಮಯದಲ್ಲಿ ಪ್ರಧಾನಿ ಅರ್ಥಕೌಶಲನ ಸೇವಕ ಹೊಲೆಯನನ್ನು ಸಂಧಿಸಿದ. ಕನಕಪುರಿಯ ವಿಷಯ, ಅರ್ಥಕೌಶಲ ಮತ್ತು ರಾಜನ ವಿಚಾರ ಗೊತ್ತಾಯಿತು. ಈತ ಹೊಲೆಯನನ್ನು ಕೊಂದು ಅವನದೇ ಕುದುರೆಯೇರಿ ಕನಕಪುರಿಗೆ ಬಂದು ಅರ್ಥಕೌಶಲನ ಮೂಲಕ ಅರಮನೆಗೆ ಪ್ರವೇಶ ಪಡೆದುಕೊಳ್ಳುತ್ತಾನೆ.

ಇಲ್ಲಿಂದ ಮುಂದೆ ಶಿಖರಸೂರ್ಯನೆಂದು ಹೆಸರು ಬದಲಿಸಿಕೊಂಡನು. ತಾನು ಕಲಿತಿದ್ದ ವೈದ್ಯ ಜ್ಞಾನದಿಂದ ಹಲವು ಕಾಲದಿಂದ ಮಲಗಿದ್ದ ರೋಗಿ ಗುಣಾಧಿಕ್ಯ ಮಹಾರಾಜನನ್ನು ಅಡ್ಡಾಡುವಂತೆ ಮಾಡಿದ. ಇದರಿಂದ ಪ್ರಸನ್ನಳಾದ ಹಿರಿಯ ರಾಣಿ ಇವನನ್ನು ತನ್ನ ಆಪ್ತ ವಲಯಕ್ಕೆ ಸೇರಿಸಿಕೊಂಡಳು. ರಾಜ ವೈದ್ಯ ಚಂಡೀದಾಸ ಹಿರಿಯ ರಾಣಿಯ ಪ್ರಿಯಕರನಾಗಿದ್ದ. ಅವನ ಮಗಳು ವಿದ್ಯುಲ್ಲತೆ ಎಂಬುವವಳು ವಿಷಕನ್ಯೆ. ಶಿಖರಸೂರ್ಯ ಅವಳನ್ನು ತನ್ನ ಪ್ರಯೋಗಪಶುವನ್ನಾಗಿ ಬಳಸಿಕೊಂಡು ತಾನು ವಿಷವೈದ್ಯ ನೆಂಬುದನ್ನು ಖಚಿತಪಡಿಸಿಕೊಳ್ಳುವನು.

ಕನಕಪುರಿಯ ಮಹಾರಾಜನಿಗೆ ಇಬ್ಬರು ರಾಣಿಯರು. ಹಿರಿಯ ರಾಣಿಗೆ ಆದಿತ್ಯಪ್ರಭನೆಂಬ ಮಗ. ಆದರೆ ಅವನು ಚಂಡೀದಾಸನನ್ನೇ ಹೋಲುತ್ತಿದ್ದ. ಕಿರಿಯರಾಣಿ ಚಿಕ್ಕಮ್ಮಣ್ಣಿಗೆ ಇಬ್ಬರು ಮಕ್ಕಳು. ತರುಣಚಂದ್ರ ಎಂಬ ಹುಡುಗನ ಕಥೆ ಚಂದ್ರಹಾಸನ ಕಥೆಯಾಯಿತು. ಅವನನ್ನು ಹಿರಿಯರಾಣಿ ಕೊಲೆಗೈಯ್ಯಲು ಸಂಚು ಹೂಡಿದಳಾದರೂ ಆ ಮಗುವನ್ನು ಕೊಲೆಗಾರರು ಶಿವಾಪುರಕ್ಕೆ ತಲುಪಿಸಿದರು. ಅಲ್ಲಿ ಅವನು ಬೆಳ್ಳಿಯ ಮಗನಾಗಿ ಗುರು ಶಿವಪಾದರ ಶಿಷ್ಯನಾಗಿ 'ನಿನ್ನಡಿ' ಎಂಬ ಹೆಸರಿನಿಂದ ಬೆಳೆದು ದೊಡ್ಡವನಾದ.

ಕಿರಿಯ ರಾಣಿಯ ಮಗಳು ಛಾಯಾದೇವಿಯನ್ನು ಶಿಖರಸೂರ್ಯ ಮದುವೆಯಾಗಿ ಅರಮನೆಯ ರಕ್ತ ಸಂಬಂಧ ಬೆಳೆಸಿದ. ಛಾಯಾದೇವಿ, ಶಿಖರಸೂರ್ಯರಿಗೆ ರವಿಕೀರ್ತಿ ಮತ್ತು ಮುದ್ದುಗೌರಿ ಎಂಬ ಇಬ್ಬರು ಮಕ್ಕಳು. ಮಗ ರವಿಕೀರ್ತಿ ಕಂಚಿಯ ವಿದ್ಯಾಪೀಠದಲ್ಲಿ ಸ್ನಾತಕ ವಿದ್ಯೆ ಕಲಿಯುತ್ತಿದ್ದಾಗ ಅಲ್ಲಿನ ಓರ್ವ ಶಿಲ್ಪಿಯ ಮಗಳು ವಾಸಂತಿ ಎಂಬ ಹೆಣ್ಣಿನಲ್ಲಿ ಅನುರಕ್ತನಾದ. ಇತ್ತ ಕಾರಣಾಂತರದಿಂದ ತಾಯಿಯ ತವರೂರು ಬಿಳಿಗಿರಿಯಲ್ಲಿದ್ದ ಮಗಳು ಮುದ್ದುಗೌರಿ ಕನ್ಯಾನ್ವೇಷಣೆಯಲ್ಲಿ ಬಂದಿದ್ದ, ನಿನ್ನಡಿ ಒಡ್ಡಿದ ಪರೀಕ್ಷೆಯಲ್ಲಿ ಗೆದ್ದು ಅವನನ್ನು ವರಿಸುತ್ತಾಳೆ. ಆದರೆ ಕನಕಪುರಿಯ ಮಹಾರಾಜನ ಮರಣಾನಂತರ, ಚಂಡಿದಾಸ ನಗರವನ್ನು ತೊರೆದ ಮೇಲೆ, ಹಿರಿಯ ರಾಣಿಗೆ ಬೆಂಬಲವಾಗಿ ನಿಂತಿದ್ದ ಸರ್ವಾಧಿಕಾರಿ ಶಿಖರಸೂರ್ಯನಿಗೆ ತನ್ನ ಮಕ್ಕಳು, ಇಂಥ ಸಾಮಾನ್ಯರನ್ನು ಮದುವೆಯಾಗುವುದು ಅವನ ಅಂತಸ್ತಿಗೆ ಸರಿಬರಲಿಲ್ಲ, ಆದ್ದರಿಂದ ಆ ಸಂಬಂಧಗಳನ್ನು ತುಂಡರಿಸಲು ಸಮಯ ಕಾಯುತ್ತಿದ್ದ. ಇತ್ತ ಯುವರಾಜ ಆದಿತ್ಯಪ್ರಭನ ಪಟ್ಟಬಂಧ ಮಹೋತ್ಸವಕ್ಕೆಂದು ರವಿಕೀರ್ತಿಯನ್ನು ಕರೆಸಿಕೊಂಡ ಶಿಖರಸೂರ್ಯ ಅತ್ತ ಕಂಚಿಯಲ್ಲಿದ್ದ ಶಿಲ್ಪಿಯನ್ನೂ ಅವನ ಮಗಳು ವಾಸಂತಿಯನ್ನೂ ಮತ್ತು ಮಗುವನ್ನೂ ಸಹ ಕೊಲೆ ಮಾಡಿಸಿದ. ಆ ವಿಚಾರ ಕೇಳಿ ರವಿಕೀರ್ತಿಗೆ ಬುದ್ಧಿ ಭ್ರಮಣೆಯಾಯಿತು. ಇತ್ತ ನಿನ್ನಡಿಗೆ ಬಸುರಿಯಾಗಿದ್ದ ಮುದ್ದು ಗೌರಿಯದು ಇನ್ನೊಂದು ಕಥೆ. ಅವಳು ಅರಮನೆ ತೊರೆದು ಶಿವಾಪುರಗುಡ್ಡಕ್ಕೆ ಹೋಗುತ್ತಿದ್ದ ಜೋಗತಿಯರ ತಂಡ ಸೇರಿ ಪ್ರಯಾಣಿಸುತ್ತಾಳೆ. ರಾಜಭಟರು ಹಿಂಬಾಲಿಸು ತ್ತಾರಾದರೂ ಸೆರೆ ಸಿಕ್ಕಲಿಲ್ಲ. ಶಿಖರಸೂರ್ಯನಿಗೆ ಇದು ಸೈರಣೆಯಾಗಲಿಲ್ಲ.

ಧಾನ್ಯದಿಂದ ಚಿನ್ನ ಮಾಡುವ, ಪೊರಕೆಕಡ್ಡಿಗಳಿಂದ ಸೈನಿಕರನ್ನು ಮಾಡುವ ಶಿಖರಸೂರ್ಯ ಕನಕಪುರಿಯ ಸುತ್ತಣ ಸೀಮೆಗಳನ್ನು ಆಕ್ರಮಿಸಿಕೊಂಡ. ವ್ಯಾಪಾರ-ವಹಿವಾಟಿನಿಂದ ನಗರ ಅಭಿವೃದ್ಧಿ ಪಥದಲ್ಲಿ ನಾಗಾಲೋಟ ಕಂಡಿತು. ಲಾಭಕೋರ ವರ್ತಕ ಸಂಘಗಳು ಬಲಿಷ್ಠವಾಗಿ ಬೆಳೆದು ನಗರದಲ್ಲಿ ಬೀಡುಬಿಟ್ಟವು. ಮಹಾರಾಣಿ ತನ್ನ ಭೋಗಜೀವನದಲ್ಲಿ ಮಗ್ನಳಾದಳು. ಯುವರಾಜ ಆದಿತ್ಯಪ್ರಭ ತಂದೆಯಂತೆಯೇ ರೋಗಿಷ್ಠನಾಗಿ ಹಾಸಿಗೆ ಹಿಡಿದ. ಶಿಖರಸೂರ್ಯ ಇಂಥ ಅನುಕೂಲವನ್ನು ಬಿಟ್ಟು ಕೊಡುವನೇ ? ಮಹಾರಾಣಿಯನ್ನು ಕೈವಶ ಮಾಡಿಕೊಳ್ಳಲು ಹಿಂಜರಿಯಲಿಲ್ಲ. ಚಂಡೀದಾಸನ ನಿರ್ಗಮನದಿಂದ ಅಸಹಾಯಕಳಾದ ಮಹಾರಾಣಿಯನ್ನು ಮೂಲೆಗೊತ್ತಿ ತಾನೇ ಮಹಾರಾಜನಾದ. ಆದರೂ ಅವನ ಕಾಮ ತಣಿಯಲಿಲ್ಲ, ತಾನು ವಿಷಪುರುಷನೆಂಬುದು ತಿಳಿದೂ ಸಹ ರಾಣಿಯನ್ನು ಸಂಭೋಗಿಸಿದ. ಅದರ ಪರಿಣಾಮವಾಗಿ ಅವಳು ಮಡಿದರೂ ನಿಟ್ಟಿಲ್ಲದೆ ಅವಳ ಶವದೊಂದಿಗೂ ಕೂಡಿದ. ಆದರೆ ತನ್ನ ಮಕ್ಕಳು ಹಿಡಿದ ದಾರಿ ಮಾತ್ರ ಅವನ ಅಧಿಕಾರ ಅಂತಸ್ತಿಗೆ ಒಪ್ಪಿಗೆ ಇಲ್ಲ, ತನ್ನ ಮಗಳು ಗೌರಿಯನ್ನು ಕೈ ಹಿಡಿದ ನಿನ್ನಡಿ ಮತ್ತು ತನ್ನನ್ನು ಒದ್ದು ಅವಮಾನಗೊಳಿಸಿದ ಬೆಳ್ಳಿ ಹಾಗೂ ಗುರು ಶಿವಪಾದರ ಮೇಲೆ ಸೇಡು ತೀರಿಸಿಕೊಳ್ಳಲು ಹೊಂಚಿ ಹೊರಟ. ಆದರೂ ನಿಃಶಸ್ತ್ರಿಕರಾದ ಶಿವಾಪುರದ ಜನರ ಮುಂದೆ ಇವನ 'ರೊಬೊಟ್' ಸೈನಿಕರಾಗಲೀ, ಅವರ ಸಿಡಿತಲೆ ಫಿರಂಗಿ ಗಾಡಿಗಳಾಗಲೀ ನಿಲ್ಲಲಾಗಲಿಲ್ಲ. ಅವನ ಯುದ್ಧ ಸಾಮಗ್ರಿ ಹಾಗೂ ಸೈನಿಕರನ್ನು ಶಿವಾಪುರದ ಗುಡ್ಡದಿಂದ ಕೊರಕಲಿಗೆ ತಳ್ಳಿಬಿಡುತ್ತಾರೆ. (ವಾಸ್ತವವಾಗಿ ಇದು ಸಾಧ್ಯವೇ, ಎನ್ನುವ ಮಾತು ಬೇರೆ). ಶಿಖರಸೂರ್ಯನಿಗೆ ನಿನ್ನಡಿಯನ್ನು ಮುಟ್ಟಲಾಗಲಿಲ್ಲ, ಬೆಳ್ಳಿಯ ಬಳಿ ಸುಳಿಯಲಾಗಲಿಲ್ಲ, ಗೌರಿಯನ್ನು ಎದುರಿಸಲಾಗಲಿಲ್ಲ. ಆದರೂ ಅವನ ದುರ್ಬುದ್ಧಿ ಮಣಿಯಲಿಲ್ಲ.

ಅಷ್ಟರಲ್ಲಿ ಬುದ್ಧಿಭ್ರಮಣೆಗೊಂಡ ಮಗ ರವಿಕೀರ್ತಿ, ವಿದ್ಯುಲ್ಲತೆಯಿದ್ದ ಉಪವನಕ್ಕೆ ಹೋಗಿ, ಅವಳನ್ನು ವಾಸಂತಿ ಎಂದೇ ಭ್ರಮಿಸಿ ಆಲಂಗಿಸಲು ಹೋಗಿ ಸಾವನ್ನಪ್ಪುತ್ತಾನೆ. ಆ ಆಘಾತದಿಂದ ಅವಳು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಶಿವಾಪುರದಿಂದ ಹೊರಟ ಶಿಖರಸೂರ್ಯ ತನ್ನ ಪ್ರೇಯಸಿ ಮತ್ತು ಮಗನಿಗೆ 'ಮಣ್ಣುಕೊಟ್ಟು' ಕನಕಪುರಿಗೆ ಹಿಂದಿರುಗುತ್ತಾನೆ. ಆ ವೇಳೆಗೆ ನಗರಕ್ಕೆ ದೊಡ್ಡ ರೋಗ ಬಡಿದು ಊರು ಸ್ಮಶಾನ ಸದೃಶವಾಗಿರುತ್ತದೆ.

ಇಂಥ ಆಪತ್ತಿನಲ್ಲಿ ನಿನ್ನಡಿ ಮತ್ತು ಚಂಡಿದಾಸರು ಪುರಪ್ರವೇಶ ಮಾಡುತ್ತಾರೆ. ಅವರು ಜೀವ ಇದ್ದವರಿಗೆ ಮೊದಲು ಮದ್ದು ಕೊಡುತ್ತ, ಶವಗಳಿಗೆ ಸಂಸ್ಕಾರ ಮಾಡಿ, ಗಂಜಿ ಕೇಂದ್ರಗಳನ್ನು ತೆರೆದು ಜೀವರಕ್ಷಕರಾಗುತ್ತಾರೆ. ಆದರೆ ಗಂಜಿಗೂ ಗತಿ ಇಲ್ಲದ ಭೀಕರ ಕ್ಷಾಮ ಆವರಿಸುತ್ತದೆ. ಅರಮನೆಯ ಕಣಜಗಳಲ್ಲಿ ದವಸಧಾನ್ಯ ಭರ್ತಿ ಇದ್ದರೂ ಮಹಾರಾಜ ಶಿಖರಸೂರ್ಯ ಬಿಡಿ ಕಾಳೂ ಕೊಡುವುದಿಲ್ಲ. ಜನರು ದಂಗೆ ಏಳುತ್ತಾರೆ. ಅವರ ದಂಗೆಗೆ ನಿನ್ನಡಿಯೇ ಪ್ರಚೋದನೆ ನೀಡುತ್ತಿದ್ದಾನೆಂದು ಆಪಾದಿಸಿ ಅವನನ್ನು ಸೆರೆಹಿಡಿಯಲು ಹೇಳುತ್ತಾನೆ. ಆದರೆ ಜನರು ಇವನ ಕಾಪಟ್ಯಕ್ಕೆ ಸೊಪ್ಪು ಹಾಕದೆ, ಅರಮನೆ ಬಾಗಿಲನ್ನು ಮುರಿದು ಒಳಗೆ ನುಗ್ಗಿಹೋಗಲು ಪ್ರಯತ್ನಿಸುತ್ತಾರೆ. ಅಷ್ಟರಲ್ಲಿ ಶಿಖರಸೂರ್ಯನು ಅರಮನೆಯ ಕಳಸ ಗೋಪುರದ ಶಿಖರವೇರಿ, ಒಳನುಗ್ಗಿದ ಜನ ಹಾಹಾಕಾರ ಮಾಡುತ್ತ ನೋಡುನೋಡುತ್ತಿದ್ದಂತೆಯೇ ರೆಕ್ಕೆ ಬಂದ ರಣಹದ್ದಿನಂತೆ ಕೈಗಳನ್ನು ಬೀಸುತ್ತಾ ಹದ್ದಿನ ಬೆಟ್ಟಕ್ಕೆ ಹಾರಿಹೋಗುತ್ತಾನೆ. ಇದಿಷ್ಟೂ 'ಶಿಖರಸೂರ್ಯ' ಕಾದಂಬರಿಯ ಸಿಂಹಾವಲೋಕನ ಮಾದರಿ ಸಂಕ್ಷಿಪ್ತ ಕಥೆ.

ಕನ್ನಡ ವಿಮರ್ಶೆ ಕಂಬಾರರ ಸಾಹಿತ್ಯವನ್ನು ಕುರಿತು ಬಿಡುಬೀಸಾಗಿಯೇ ಕೊಂಡಾಡಿದೆ. ಸಿ. ಎನ್. ರಾಮಚಂದ್ರನ್ ಅವರು 'ಅಮ್ಮ'ನ ಕಥನವಾಗಿ ಈ ಕಾದಂಬರಿ ಯಶಸ್ವಿ

ಯಾಗುತ್ತದೆ ಎನ್ನುತ್ತಾರೆ (ಪ್ರಜಾವಾಣಿ ಸಾಪ್ತಾಹಿಕ ೨೫-೯-೧೦). ಇನ್ನೂ ಹಲವಾರು ಜನ ವಿಮರ್ಶಕರು ಕಂಬಾರರ ಸಾಹಿತ್ಯವನ್ನು ಕುರಿತು ಅದರಲ್ಲೂ ಶಿಖರ ಸೂರ್ಯ ಕಾದಂಬರಿಯನ್ನು ಕುರಿತು ಮೆಚ್ಚಿಗೆಯ ಮಾತನ್ನಾಡಿದ್ದಾರೆ.

'ರಾಷ್ಟ್ರಗಳು ಅಳಿದರೂ ಶಿವಾಪುರ ಅಳಿಯುವುದಿಲ್ಲ'

(ಯು. ಆರ್. ಅನಂತಮೂರ್ತಿ, *ಎಲ್ಲಿದೆ ಶಿವಾಪುರ ?* ಕವನ ಸಂಕಲನದ ಮುನ್ನುಡಿ)

'ಶಿಖರಸೂರ್ಯ ಕಂಬಾರರ ಕಾವ್ಯ ತಪಸ್ಸಿನ ಫಲ'

(ಎಚ್. ಎಸ್. ಶಿವಪ್ರಕಾಶ್, *ಶಿಖರಸೂರ್ಯ* ಮುನ್ನುಡಿಯಿಂದ)

'ದಾರ್ಶನಿಕ ನಿಲುವು ಎಂದರೇನೆಂಬುದನ್ನು ಅರಿಯಲು ಉತ್ಸುಕರಾಗಿರುವವರು ಈ ಕಾದಂಬರಿಯನ್ನು ಒಮ್ಮೆ ಓದಬೇಕು' (ಮಾಧವ ಕುಲಕರ್ಣಿ, *ಶಿಖರಸೂರ್ಯ*, ಬೆನ್ನುಡಿ)

'ಕನ್ನಡದಲ್ಲಿ 'ಮಲೆಗಳಲ್ಲಿ ಮದುಮಗಳು' ಆದ ಮೇಲೆ ಮನಸ್ಸಿನಲ್ಲಿ ಊರಿ ನಿಲ್ಲುವ ಕೃತಿ ಶಿಖರಸೂರ್ಯ'

*(ಎನ್. ಎಸ್. ಶಂಕರ, ಶಿಖರಸೂರ್ಯ, ಬೆನ್ನುಡಿ)*

ಹೀಗೆ ಏಕ ಪ್ರಕಾರವಾಗಿ ಕಂಬಾರರ ಸಾಹಿತ್ಯವನ್ನು ಕುರಿತು ಕನ್ನಡ ವಿಮರ್ಶೆ ಹೊಗಳಲು ಮುಖ್ಯ ಕಾರಣ, ಕಂಬಾರರು ಸಾಹಿತ್ಯ ರಚನೆಯ ಸಂದರ್ಭದಲ್ಲಿ ಅತ್ತಿತ್ತ ನೋಡದೆ ಪ್ರಜ್ಞಾಪೂರ್ವಕವಾಗಿ, ಅವರು ಮೂಲ ದ್ರಾವಿಡ ಹಾಗೂ ಕನ್ನಡ ದೇಸಿಗೆ ಒಲಿದದ್ದು ಎಂದೆನಿಸುತ್ತದೆ. ವಸ್ತು, ಭಾಷೆ, ಶೈಲಿ, ತಂತ್ರ ಇತ್ಯಾದಿ ಪ್ರತಿಯೊಂದರಲ್ಲೂ ಅವರು ಕನ್ನಡ ದೇಸಿಯನ್ನು ಪುನರ್ ಪ್ರತಿಷ್ಠಾಪಿಸಲು ತೊಡಗಿದ್ದು. ನವೋದಯದವರು ಪಶ್ಚಿಮದ ವಿದ್ಯೆಯಿಂದ ಪೂರ್ವಪರಂಪರೆಯನ್ನು ಶೋಧಿಸಲು ಹೊರಟರೆ; ನವ್ಯದವರು ಕೂಡ ಪಶ್ಚಿಮ ವಿದ್ಯೆಯಿಂದಲೇ ಪೂರ್ವ ಮೀಮಾಂಸಾ ಕಾಂಡವನ್ನು ಬಗೆಯಲು ತೊಡಗಿದರೆ; ಪ್ರಗತಿಶೀಲರು ಎಡಪಂಥೀಯ ಧೋರಣೆಯಿಂದ ಸಾಮಾಜಿಕ ವಿಪ್ಲವವನ್ನು ಸಾಧಿಸಲು ಹೆಣಗಿದರೆ, ದಲಿತ-ಬಂಡಾಯದವರು ಸಾಮಾಜಿಕ ಬದ್ಧತೆಯ ಮೂಲಕ ನವ ಸಮಾಜವನ್ನು ಕಟ್ಟಲು ಉಪಕ್ರಮಿಸಿದರೆ; ಕಂಬಾರರು ಮಾತ್ರ ಕನ್ನಡ ಜಾನಪದ ಸತ್ವವನ್ನು 'ಹೇಳತೇನ ಕೇಳ' ಎಂದು ಹಾಡುತ್ತಾ ಹೊರಟರು. ಅವರ ಮೊದಲ ಕಾವ್ಯ ಸಂಕಲನ ಮುಗುಳು (೧೯೫೮) ಮೊದಲುಗೊಂಡು ಇತ್ತೀಚಿನ ಶಿವರಾತ್ರಿ (೨೦೧೧) ನಾಟಕದವರೆಗೆ ಸುಮಾರು ಅರ್ಧ ಶತಮಾನ ಕಾಲ ಇವರು 'ಮರೆತೇನಂದರ ಮರೆಯಲಿ ಹ್ಯಾಂಗ' ಎಂದು ಕನ್ನಡ ಜನಪದ ಜಗತ್ತಿಗೆ ಮಾರುಹೋಗಿ ಅದರ ಹಾಡುಪಾಡನ್ನು ಶೋಧಿಸಿ, ವಿಸ್ತರಿಸಿ, ಪುನರ್ ಸೃಷ್ಟಿಗೊಳಿಸುತ್ತಾ ಬಂದರು.

ಆದರೆ, ಚಂದ್ರಶೇಖರ ಕಂಬಾರರ ಉಳಿದ ಕೃತಿಗಳ ಮಾತಂತಿರಲಿ; ಪ್ರಸ್ತುತ, ವಿಮರ್ಶಕರಿಂದ ಬಹುವಾಗಿ ಹೊಗಳಿಕೆಗೆ ಪಾತ್ರವಾಗಿರುವ 'ಶಿಖರಸೂರ್ಯ' ಕೃತಿ ಈ ಎಲ್ಲ ಹೊಗಳಿಕೆಗೆ ಅರ್ಹವೇ ಎಂಬ ಪ್ರಶ್ನೆ ನನ್ನದು. ಆದ್ದರಿಂದ ಈ ಪ್ರತಿಕ್ರಿಯೆ.

''ಈ ಜೀವ್ವೇ ಆ ಜೀವಕ ನಡೀ'' (ಕುಸುಮಬಾಲೆ) ಎಂಬಂಥ ಜೀವ ಸಂಸ್ಕೃತಿಗೆ ಹೊರತಾಗಿ 'ಒಂದು ಜೀವಿಗೆ ಮೈಯಲ್ಲ ವಿಷವು' ಎಂಬಂತೆ 'ಶಿಖರಸೂರ್ಯ' ಕಾದಂಬರಿಯ ಈ ಖಳನಾಯಕ ಉಂಡ ಮನೆಗೆ ಎರಡು ಬಗೆವ ತಾಯ್ಗಂಡನೂ, ಕಟುಕನೂ, ಕಾಮಾತುರನೂ, ಜೀವವಿರೋಧಿಯೂ, ಪರಿಸರ ವಿರೋಧಿಯೂ, ಲೋಕಕಂಟಕನೂ, ನಿರ್ದಯನೂ, ಕ್ರೂರಿಯೂ, ಕೊಲೆಪಾತಕನೂ, ಪಲಾಯನವಾದಿಯೂ, ಹೇಡಿಯೂ, ಅಂಜುಬುರುಕನೂ ಆಗಿರುತ್ತಾನೆ. ಇಂಥವನ ಕಥೆಯನ್ನು ಲೇಖಕರು ಇಷ್ಟು ವಿಜೃಂಭಿಸಿ, ಕಾದಂಬರಿಗೆ ಅವನದೇ ಹೆಸರಿಟ್ಟು ಹೇಳಿರುವ ಕಾರಣವಾದರೂ ಏನು ? ಇಂಥ ಒಂದು ಕಾದಂಬರಿಯನ್ನು ಕುರಿತು ನಮ್ಮ ನಡುವಿನ ಕವಿಯೂ, ವಿಮರ್ಶಕರೂ ಹಾಗೂ ಸಂಸ್ಕೃತಿ ಚಿಂತಕರೂ ಆದ ಎಚ್. ಎಸ್. ಶಿವಪ್ರಕಾಶ್ *ಶಿಖರಸೂರ್ಯ* 'ಶ್ರೇಷ್ಠ ಮಹಾಕಾವ್ಯಗಳ ಹಾಗೆ ವಿಶ್ವಾತ್ಮಕ ಗುಣಗಳನ್ನು ಹೊಂದಿರುವ, ಎಪಿಕ್ ತರಹದ್ದು' – ಎಂದೆಲ್ಲ ಕೊಂಡಾಡಿರುವುದನ್ನು ಕಂಡರೆ ಸೋಜಿಗವಾಗುತ್ತದೆ. ಏಕೆಂದರೆ ಹೆಣ್ಣಿನ ವಿಚಾರದಲ್ಲಿ ಮಾತ್ರ ಈ ಕಾದಂಬರಿಯ ಸಂವೇದನೆ ಪುರುಷ ಪ್ರಧಾನ ನೆಲೆಯದು.

ಮೊಟ್ಟ ಮೊದಲಿಗೆ ಇವನು ಕೊಳ್ಳದಲ್ಲಿ ಬಿದ್ದು ಸಾಯುತ್ತಿದ್ದವನನ್ನು ಶಿವಾಪುರಕ್ಕೆ ಎತ್ತಿ ತಂದು ಬೆಳ್ಳಿಯ ಬಳಿ ಬಿಟ್ಟ ಜಟ್ಟಿಗನ ಮೇಲೆ ಬಂಡೆಕಲ್ಲು ಹಾಕಿ ಸಾಯಿಸಿದ 'ತಲೆ ಹೊಯ್ಕ', ಎರಡನೆಯದಾಗಿ ಮದ್ದು ಕೊಟ್ಟು ಉಪಚರಿಸಿ ಜೀವದಾನ ಮಾಡಿದ ತಾಯಿಗೆ ಸಮಾನಳಾದ ಬೆಳ್ಳಿಯ ಮೇಲೆ ಅತ್ಯಾಚಾರ ಮಾಡಿದ ಕಾಮುಕ; ಮೂರನೆಯದಾಗಿ ಕುದುರೆ ಸವಾರ ಹೊಳೆಯನನ್ನು

# ರವಿಕಿರಣ

ಇರುಳ ಹೊತ್ತು ಸರಿದು
ರವಿಕಿರಣ ಚೆಲ್ಲಿ,
ಈ ಮಣ್ಣಿನಲಿ ಬಿದ್ದ ಬೀಜ
ಮೊಳಕೆಯೊಡೆಯಲಿಲ್ಲ
ಬೆಳೆದು ಫಲ ಪುಷ್ಪ
ಮೈದಾಳಲಿಲ್ಲ.

ಬಾನಿನ ಮೋಡಕ್ಕೆ
ತಂಪು ಗಾಳಿಯಪ್ಪಿ
ಹನಿ ಹನಿಯಾಗಿ
ಉದುರಲಿಲ್ಲ
ಹಸಿದ ಮಣ್ಣಿನ ದಾಹ
ನೀಗಲಿಲ್ಲ.

ಈ ಮಣ್ಣಿನ ಮೇಲೆ
ಧರ್ಮದ ರಂಗೋಲಿ
ಜಾತಿಯ ಹುಲುಸು ಮುಳ್ಳು

ಸೂರ್ಯಕಿರಣ
ಮಣ್ಣ ಮುಟ್ಟಲಿಲ್ಲ
ಮಳೆಹನಿ ಇಳಿಯಲಿಲ್ಲ.

ಜಡ್ಡುಗಟ್ಟಿದ ಮಣ್ಣ ಅಗೆದು
ಸಮಾನತೆಯ ಬೀಜ ಮೊಳೆದು
ವಿಚಾರ ಕಿರಣ, ಸಹಬಾಳ್ವೆಯ ಮಳೆ ಬಂದು
ಇಲ್ಲೂ ಹಸಿರು ಮೂಡೀತೇ ?
ಕಣ್ಣಸಿರಿ ತುಂಬೀತೇ ?

**ಗಣಪತಿ ವಿ. ಕೊಡ್ಲೆ**
ವಕೀಲರು, ದತ್ತನಗರ್, ಶಹಬಜಾರ್
ಗುಲ್ಬರ್ಗಾ



ವಿನಾಕಾರಣ ಕೊಂದ ಕೊಲೆಪಾತಕ, ನಾಲ್ಕನೆಯದಾಗಿ ತನ್ನ ವಿಷ ವಿದ್ಯೆಯ ಪರೀಕ್ಷೆಗೆಂದು ವಿದ್ಯುಲ್ಲತೆಯನ್ನು ಪ್ರಯೋಗಪಶುವನ್ನಾಗಿ ಮಾಡಿಕೊಂಡ ವಿಟ ಪುರುಷ, ಐದನೆಯದಾಗಿ ಅರಮನೆಯ ಸಂಬಂಧಕ್ಕಾಗಿ ರಾಜಕುಮಾರಿ ಛಾಯಾದೇವಿಯನ್ನು ಮದುವೆಯಾದ ವಂಚಕ; ಆರನೆಯದಾಗಿ, ಹಣ, ಅಂತಸ್ತು, ಅಧಿಕಾರಕ್ಕಾಗಿ ತನ್ನ ಮಕ್ಕಳನ್ನೂ ಲೆಕ್ಕಿಸದ ಕಟುಕ; ಮಗ ರವಿಕೀರ್ತಿ ಪ್ರೀತಿಸಿದ ವಾಸಂತಿಯನ್ನೂ ಅವಳ ಕೂಸನ್ನೂ ಅವಳ ತಂದೆಯನ್ನೂ ಕೊಲ್ಲಿಸಿದ ನೀಚ; ಒಲಿದವನ ಜೊತೆ ಹೋಗಿ ಬಾಳಲು ಹೊರಟ ಮಗಳು ಮುದ್ದುಗೌರಿಯನ್ನು ಹಿಡಿದು ತರಲು ರಾಜಭಟರನ್ನು ಕಳುಹಿಸಿದ ನಿರ್ದಯಿ; ಕಡೆಗೆ, ಮಹಾರಾಣಿಯ ಸೌಂದರ್ಯಕ್ಕೆ ಮಾರುಹೋಗಿ ಅವಳು ಸತ್ತು ಹೋಗಿದ್ದರೂ ಇಡೀ ರಾತ್ರಿ ಅವಳ ಹೆಣದೊಂದಿಗೇ ಸುಖಿಸಿದ ಕಾಮಪಿಶಾಚಿ. ಶಿಖರಸೂರ್ಯ ಇಂಥ ಕೀಚಕ ನಾಗಿದ್ದರೂ ಸಹ ಎಚ್. ಎಸ್. ಶಿವಪ್ರಕಾಶ್ ಮುನ್ನುಡಿಯಲ್ಲಿ ಈ ಮಹಾರಾಣಿಯನ್ನು ಕುರಿತು ಷೇಕ್ಸ್‌ಪಿಯರನ ಕ್ಲಿಯೋಪಾತ್ರಳಂಥ 'ರಾಜಸೂಳೆ' ಎಂದಿರುವುದು ಅನ್ಯಾಯ. ಇದು ಅವರವರ ಮನೋಧರ್ಮಕ್ಕೆ ಹಿಡಿದ ಕನ್ನಡಿಯೇ ಸರಿ. ಈ ಇಬ್ಬರನ್ನೂ 'ರಾಜಸೂಳೆ'ಯರೆಂದು ಕರೆಯುವುದು ಕೂಡ ಪುರುಷಾಧಿಕ್ಯ ಸಂಸ್ಕೃತಿಯ ಗರ್ವಿತ ನಿರ್ವಚನವೇ. ಶಿಖರಸೂರ್ಯನಾದರೂ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳ ಸಾಕಾರರೂಪನೇ. ಈತ ತನ್ನ ರಸವಿದ್ಯೆಯ ಬಲದಿಂದ ಸೈನಿಕರನ್ನು ಸೃಷ್ಟಿಸಿ ಕನಕಗಿರಿಯ ಸುತ್ತಣ ಛಪ್ಪನ್ನೈವತ್ತಾರು ದೇಶಗಳನ್ನು ಕತ್ತಿಯ ಮೊನೆಯಲ್ಲಿ ಗೆದ್ದುಕೊಂಡವನು. ಅರಮನೆಯಲ್ಲಿ ತನ್ನ ವಿರುದ್ಧ ಇರುವವರನ್ನು ಒಬ್ಬೊಬ್ಬರನ್ನಾಗಿ ಮುಗಿಸಿದವನು, ಇಲ್ಲವೇ ದೂರ ಅಟ್ಟಿದವನು. ಒಟ್ಟಾರೆ ಶಿಖರಸೂರ್ಯ ಕಾದಂಬರಿಯು ಲೈಂಗಿಕತೆ ಹಾಗೂ ಅಪರಾಧಗಳ ಆಡುಂಬೊಲವಾಗಿದೆ. ಇದಕ್ಕಾಗಿ ಶಿಖರ ಸೂರ್ಯನಲ್ಲಿ ಸಾಸಿವೆಯಷ್ಟು ಪಶ್ಚಾತ್ತಾಪವಿಲ್ಲ; ಅಪರಾಧ ಪ್ರಜ್ಞೆ ಎಂಬುದಂತೂ ಇಲ್ಲವೇ ಇಲ್ಲ, ಕೇವಲ ಪಲಾಯನವಾದಿ.

ಹಾಗಾದರೆ, ಅಂತಿಮವಾಗಿ ಈ ಕೃತಿಯ ಮೆಸೇಜ್ ಏನು ? ಯಾವ ಪುರುಷಾರ್ಥಕ್ಕೆ ಕಂಬಾರರು ಶಿಖರ ಸೂರ್ಯನನ್ನು ಇಷ್ಟು ವಿಜೃಂಭಿಸುತ್ತಾರೆ ? ವಾಸ್ತವವಾಗಿ ಕನಕಪುರಿಗೆ ಮುಖಾಮುಖಿಯಾಗುವ ಶಕ್ತಿಸಾಮರ್ಥ್ಯ ಇಂದಿನ ಶಿವಾಪುರಕ್ಕೆ ಉಂಟೆ ? ಅಥವಾ ಡಾ|| ಕುಂಸಿ ಉಮೇಶ್ ಹೇಳುವಂತೆ, ಕಂಬಾರರು ಕೇವಲ 'ಕಾಡು-ಹುಲಿ, ಕುದುರೆ-ಗೌಡ, ಕರ್ರೆವ್ವ-ಎಲ್ಲವ್ವ-ಗುಡ್ಡದ ನಿರಾಣಿಯಂತಹ ಅತಿಮಾನುಷ ನೆಲೆಯಿಂದ ಗತದ ಮೋಹವನ್ನು ಮತ್ತೆ ಮತ್ತೆ ಆವಾಹಿಸಿಕೊಂಡು ದುಡಿಯುವ ಸೃಜನಶೀಲ ಮೋಹವುಳ್ಳವರೇ ? (ಸಂಪಾದಕ : ಆರ್. ಜಿ. ಹಳ್ಳಿ ನಾಗರಾಜ. ಅನ್ವೇಷಣೆ - ಸಂಚಿಕೆ ೬೯-ಜುಲೈ-ಸೆಪ್ಟೆಂಬರ್-೨೦೧೧). ಎಂದರೆ ಕಂಬಾರರ ಶಿವಾಪುರ ಎಲ್ಲಿದೆ ? ನವಿಲು ಕುಣಿವ ಶಿವಾಪುರದ ಗುಡ್ಡಗಳಲ್ಲಿ ಈಗ ಕುರುಡು ಕಾಂಚಾಣ ಕುಣಿಯುತ್ತಿದೆ, ಕಾಲಿಗೆ ಬಿದ್ದವರ ತುಳಿಯುತ್ತಿದೆ. ಇಂಡಿಯಾದ ಹಳ್ಳಿಗಳು ಸದ್ಯ ತನ್ನೊಳಗೆ ಜಾತೀಯತೆ, ದ್ವೇಷ, ಕೊಲೆ, ಹಾದರ, ಹಿಂಸೆಗಳನ್ನು ತುಂಬಿಕೊಂಡು ಕಂಬಾಲಪಲ್ಲಿ, ಖೈರ್ಲಾಂಜಿಗಳಂತೆ ಸುಟ್ಟು ಹೋಗುತ್ತಿಲ್ಲವೇ ? ಅವು ತನ್ನೊಳಗಿನ ಹಿಂಸೆಯನ್ನು ಹತ್ತಿಕ್ಕಿಕೊಳ್ಳಲಾರದ, ಹೊರಗಿನ ಹಿಂಸೆಯನ್ನು ತಡೆದುಕೊಳ್ಳಲಾರದ ಅಸಹಾಯಕ ಸ್ಥಿತಿಯಲ್ಲಿವೆ. ಅವುಗಳನ್ನು ಯಾವ ಯಲ್ಲಮ್ಮ, ಶಿವಾಪುರದಮ್ಮ, ಕರ್ರೆವ್ವ, ದುರ್ಗಮ್ಮ, ಜೋಕುಮಾರ, ಋಷ್ಯಶೃಂಗರೂ ರಕ್ಷಿಸಲಾರದವರಾಗಿದ್ದಾರೆ ಅಥವಾ ಹಿಂದೆಯೂ ರಕ್ಷಿಸಲಾರದವರಾಗಿದ್ದರು. ಹಾಗಿದ್ದರೆ ಗಾಂಧಿ ಕನಸಿನ ಗ್ರಾಮಸ್ವರಾಜ್ಯ ಏಕಾಗಲಿಲ್ಲ ? ಅಥವಾ ಅಂಬೇಡ್ಕರ್ ಆಶಿಸಿದಂತೆ ನಮ್ಮ ಫ್ಯೂಡಲ್ ವ್ಯವಸ್ಥೆಯ ಈ ಗ್ರಾಮೀಣ ಭಾರತ ಕದಲುವುದೇ ಸರಿಯಲ್ಲವೆ ?

ಆದರೆ ಅನಿಷ್ಟಕ್ಕೆಲ್ಲ ಶನೇಶ್ವರನನ್ನೇ ದೂರುವಂತೆ, ಕನಕಪುರಿಯಂಥ ನಗರಗಳ ಕಂಫರ್ಟ್ ಜೋನಿನಲ್ಲೇ ನಿಂತು, ನಗರಗಳು ನವ ವಸಾಹತುಶಾಹಿ ಶೋಷಣೆಯ ಕೇಂದ್ರಗಳೆಂದು 'ಗಳಹುವುದು' ಕೂಡ ನಮ್ಮ ಲೇಖಕರ ಹಾಗೂ ವಿಮರ್ಶಕ ಪ್ರಭುಗಳ ಏಕಪಕ್ಷೀಯ ಧೋರಣೆಯಾಗಿದೆ. ಹೀಗೆನ್ನುವುದಾದರೆ, ಇದುವರೆಗೆ ನಾವು ಕಟ್ಟಿಕೊಂಡು ಬಂದ ಪ್ರಜಾತಂತ್ರ ವ್ಯವಸ್ಥೆಯನ್ನೇ ಧಿಕ್ಕರಿಸಿದಂತಲ್ಲವೇ ? ತಾತ್ಪರ್ಯವೆಂದರೆ, ಕಂಬಾರರು ಕಟ್ಟಿಕೊಡುವ ಶಿವಾಪುರಗಳೆಲ್ಲಾ 'ಬಿಳಿ' ಎಂದೂ, ಕನಕಪುರಿಗಳೆಲ್ಲಾ 'ಕಪ್ಪು' ಎಂದೂ ಸರಳೀಕರಿಸುವುದು ಸರಿಯಲ್ಲ, ಅಷ್ಟೆ.

ರಾಣಿಯನ್ನು ಹೆಮ್ಮಾರಿಯನ್ನಾಗಿ ತೋರಿಸಲು ಇಲ್ಲಿ ಚಿತ್ರಿತವಾಗಿರುವ ಬೀಭತ್ಸ ಶ್ವಾನಕೂಪದ ಕಲ್ಪನೆಯಂತೂ ಸ್ಪೇಯಿನ್‌ನ ಗೂಳಿ ಕಾಳಗದ ಗ್ರ್ಯಾಫ್ಟ್ ಇದ್ದಂತಿದೆ. 'ಅದೇನೇ ಇರಲಿ, ಇಂದಿನ ರಾಜಕಾರಣಕ್ಕೆ ಇದೊಂದು ಉತ್ತಮ ರೂಪಕವೆಂಬುದಂತೂ ನಿಜ' (ಶಿಖರಸೂರ್ಯ, ಪುಟ ೪೩೨). ಆದರೆ, ನಿರೂಪಕರಾದ ಈ ಹೆಳವರು ಕಂಬಾರರ ಅಂಕೆಗೆ ಒಳಗಾಗದೆ ಇದ್ದಿದ್ದರೆ, ನಮ್ಮನ್ನು ಬಹುಕಾಲ ಕಾಡುವ, ನೆನಪಿನಲ್ಲಿ ಉಳಿಯುವ ಕೃತಿಯಾಗಿ ಇದು ಮೂಡುತ್ತಿತ್ತೇನೋ. ಉದಾಹರಣೆಗೆ, ಬೆಳ್ಳಿಯ ಮೇಲೆ ನಡೆವ ಅತ್ಯಾಚಾರ ಪ್ರಸಂಗ, ಮಹಾರಾಣಿ ಶವದ ಮೇಲೆ ನಡೆವ ಸಂಭೋಗ ಸನ್ನಿವೇಶ, ವಾಸಂತಿಯನ್ನು ಕೊಲ್ಲಿಸಿದ ಪ್ರಸಂಗ-ಮುಂತಾದ ಸಂದರ್ಭಗಳಲ್ಲಿ ಮಾತೃಮೂಲ ಸಂಸ್ಕೃತಿಯ ವಕ್ತಾರರಾದ ಈ ಜನಪದ ಕಲಾವಿದರು ಇವನಿಗೆ ಶಾಪ ಹಾಕಿ, ಸಕಲ ಜೀವಕೋಟಿಗೆ ಜೀವದಾಯಕನಾದ ಸೂರ್ಯದೇವನ ಬಗ್ಗೆ ಅಪಾರ ಶ್ರದ್ಧಾಭಕ್ತಿಯುಳ್ಳ ಈ ಜನರು ಶಿಖರಸೂರ್ಯನೆಂಬ ಇವನ ಹೆಸರನ್ನು ಕುರಿತು ಛೇಡಿಸಿ ಅಪಹಾಸ್ಯ ಮಾಡದೆ ಬಿಡುತ್ತಿರಲಿಲ್ಲ. ಹೀಗಾಗಿ ಈ ಕಾದಂಬರಿಯ ಅತಿಮಾನುಷ ಜನಪದ ಕಥನವೊಂದನ್ನು ವರ್ತಮಾನದ ಚರಿತ್ರೆಯೊಂದಿಗೆ ಸಮೀಕರಿಸಿದಂತಿದ್ದರೂ ಹೆಳವರು ನಿರೂಪಿಸುವ ಜನಪದ ಕಥನದ 'ಶಿಷ್ಟ ರಕ್ಷಣೆಯ ದುಷ್ಟಸಂಹಾರ'ದ ಮಾದರಿಯೂ ಇದಾಗಿಲ್ಲ. ಯಾಕೆಂದರೆ ಹದ್ದಿನ ಬೆಟ್ಟಕ್ಕೆ ಪಲಾಯನ ಮಾಡಿರುವ ಆ ಶಿಖರಸೂರ್ಯ ಮತ್ತಷ್ಟು ವಾಮಾಚಾರ ವಿದ್ಯೆಗಳನ್ನು ರೂಢಿಸಿಕೊಂಡು ಕನಕಪುರಿಗೆ ಹಿಂದಿರುಗುವುದಿಲ್ಲ ವೆಂಬುದಕ್ಕೆ ಯಾವ ಗ್ಯಾರಂಟಿ ? ಹೀಗಾಗಿ ಎಚ್. ಎಸ್. ಶಿವಪ್ರಕಾಶ್ ಹಾಡಿ ಹೊಗಳಿರುವ ''ಸಾಂಸ್ಕೃತಿಕ ಮತ್ತು ದಾರ್ಶನಿಕ ಸ್ವಾಯತ್ತತೆಯನ್ನು ಸಾಧಿಸುವ ಕೃತಿ ಇದಾಗಿದೆ'' ಎಂಬುದು ಜನಪದ ಸಮಾಜವೆಂದರೆ ಏನೆಂದೂ ಅರಿಯದವರ, ಕೇವಲ ರಷ್ಯಾದ ಮಹಾಕ್ರಾಂತಿಯ (೧೯೧೭) ನಂತರ ಹುಟ್ಟಿಕೊಂಡ ''ನಾ ನಿನಗೆ ನೀ ನನಗೆ'' ಎಂಬ ಸಾಹಿತಿ-ಲೇಖಕರ ಸಹಕಾರ ತತ್ವಾಧಾರಿತ ಅನಧಿಕೃತ ಒಪ್ಪಂದದಂತೆ ಕಂಡುಬರುತ್ತದೆಯಲ್ಲವೆ ?

ಕಡೆಯದಾಗಿ, ಬಂಡವಾಳಶಾಹಿ ಸಂಸ್ಥೆಯೊಂದು ಕೊಡಮಾಡುತ್ತಿರುವ ಜ್ಞಾನಪೀಠ ಪ್ರಶಸ್ತಿಯೂ ಇಲ್ಲಿನ ಪುರೋಹಿತಶಾಹಿ ವರ್ಗದ ಕೃಪಾಕಟಾಕ್ಷವೂ ಹಾಗೂ ಸಾಹಿತ್ಯ ರಾಜಕಾರಣದ ಲಾಬಿಯೂ ಇಲ್ಲಿ ಸಮೀಕರಣಗೊಂಡಿರುವುದರಿಂದ ಕನ್ನಡಕ್ಕೆ ಇನ್ನೊಂದು ಜ್ಞಾನಪೀಠವನ್ನು ತಂದುಕೊಟ್ಟ ಡಾ|| ಚಂದ್ರಶೇಖರ ಕಂಬಾರರು, ಅಂಥ ನಿರಂಕುಶಮತಿಯಲ್ಲದ ಕಾರಣ, ಸಾರ್ವಜನಿಕವಾಗಿ ಉಡುಪಿಯ ಪೇಜಾವರ ಶ್ರೀಗಳ ಕಾಲಿಗೆರಗಿದ್ದು ವಿಶೇಷವೇನಲ್ಲ, ತೇಜಸ್ವಿಯವರೆಂದಂತೆ ಭಾರತದಲ್ಲಿ 'ರಿಲಿಜಿಯಸ್' ಆಗುವ ಕವಿ ಜನತಾ ದ್ರೋಹಿಯಾಗುತ್ತಾನೆ; ಏಕೆಂದರೆ ಭಾರತದ ಬಹುಪಾಲು ಧರ್ಮಗಳೆಲ್ಲಾ ಮಾನವೀಯತೆಗೆ ವಿರೋಧಿಗಳಾಗಿವೆ. (ತೇಜಸ್ವಿ: ಹೊಸ ದಿಗಂತದ ಕಡೆಗೆ, ಅಬಚೂರಿನ ಪೋಸ್ಟಾಫೀಸು). ಇನ್ನು ''ಕನ್ನಡದಲ್ಲಿ 'ಮಲೆಗಳಲ್ಲಿ ಮದುಮಗಳು' ಆದ ಮೇಲೆ ಮನಸ್ಸಿನಲ್ಲಿ ಊರಿ ನಿಲ್ಲುವ ಕೃತಿ 'ಶಿಖರ ಸೂರ್ಯ'ವೇ'' ಎಂದು ಕೊಂಡಾಡುತ್ತಿರುವ ವಿಮರ್ಶೆಯ ಬಗ್ಗೆ ಮಾತಾಡದಿರುವುದೇ ಲೇಸು. ಯಾಕೆಂದರೆ, ಕಂಬಾರರು ಹೆಣ್ಣನ್ನು ನೋಡುವ ದೃಷ್ಟಿಯಲ್ಲಿಯೇ ಗೌಡಿಕೆಯ ಗತ್ತು ಇಣುಕುತ್ತದೆ. ಅದು ಶಿಖರ ಸೂರ್ಯದಲ್ಲಿ ಇನ್ನಷ್ಟು ಚೆನ್ನಾಗಿ ಪ್ರಕಟವಾಗಿದೆ. ಅವರ 'ಸಾಂಬಶಿವ' ಎಂಬ ಪ್ರಹಸನದಲ್ಲಂತೂ ಹೆಣ್ಣನ್ನು ವೃತ್ತಿ ರಂಗಭೂಮಿಯ ನಾಟಕ 'ಖಾನಾವಳಿ ಚೆನ್ನಿ'ಗಿಂತ ಕಡೆಯಾಗಿ ಲೇವಡಿ ಮಾಡುತ್ತಾರೆ. ಅದನ್ನು ನೋಡಿದರೆ ಇದು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಲೇಖಕರ ಲಕ್ಷಣವೇ ಎಂಬ ದಿಗ್ಭ್ರಮೆ ಹುಟ್ಟುತ್ತದೆ. ಆದ್ದರಿಂದ ಪಾವಿತ್ರ್ಯತೆ ಮತ್ತು ಘನತೆಯ ದೃಷ್ಟಿಯಲ್ಲಿ ಕುವೆಂಪು ಅವರ 'ಮದುಮಗಳು' ಕೃತಿಯೊಂದಿಗೆ ಕಂಬಾರರ 'ಶಿಖರಸೂರ್ಯ' ಕಾದಂಬರಿಯನ್ನು ಹೋಲಿಸುವುದೆಂದರೆ 'ಅಮೃತವನ್ನುಂಡು ಗೋಮೂತ್ರದಿಂದ ಬಾಯೊರೆಸಿಕೊಂಡಂತೆ'. ಇದನ್ನು 'ವಿಚಾರ ದಕ್ಷರ್ ವೈಷಮ್ಯವನ್ನುಳಿದು ಕೇಳ್ವುದು' ಎಂಬಲ್ಲಿಗೆ ...



**ಪ್ರೊ|| ಶಿವರಾಮಯ್ಯ**
ನಂ. ೧೭೨, ಐಎಸ್ಇಸಿ ರೋಡ್, ಟೀಚರ್ಸ್ ಕಾಲೋನಿ
ನಾಗರಭಾವಿ ೧ನೇ ಹಂತ, ಬೆಂಗಳೂರು - ೫೬೦ ೦೭೨

# ಬಸವಣ್ಣನವರ ಚಾರಿತ್ರ್ಯಕ್ಕೆ ಚ್ಯುತಿ ತರುವ ವಚನಗಳು



ಒಂದು ಕಾಲದಲ್ಲಿ ಕೇವಲ ಭೋಗದ ವಸ್ತುವೆಂದು ಪರಿಗಣಿಸಲ್ಪಡುತ್ತಿದ್ದ ಮಹಿಳೆಗೆ ವಚನಕಾರರು ಜಗತ್ತಿನ ಯಾವ ಧರ್ಮಗಳೂ ನೀಡಿರದಂಥ ಉನ್ನತ ಸಾಮಾಜಿಕ, ಧಾರ್ಮಿಕ ಸ್ಥಾನಮಾನ ನೀಡಿದರು. ಬಸವಣ್ಣನವರ ನೇತೃತ್ವದ ವಚನಾಂದೋಲನದ ಪರಿಣಾಮವಾಗಿ ಅಕ್ಕಮಹಾದೇವಿ, ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಾರಮ್ಮ, ಸೂಳೆ ಸಂಕವ್ವೆ, ಆಮುಗೆ ರಾಯಮ್ಮ, ಕದಿರ ರೆಮ್ಮವ್ವೆ, ಗಂಗಾಂಬಿಕೆ, ಗೊಗ್ಗವ್ವೆ, ಅವರುಗಳಂಥ ಪ್ರತಿಭಾನ್ವಿತ ನಾರಿಮಣಿಯರು ಸಮಾಜ ಸುಧಾರಣೆಗಾಗಿ ತ್ಯಾಗ ಬಲಿದಾನಗಳನ್ನು ಮಾಡಿ ಚಿರಸ್ಮರಣೀಯರಾಗಿದ್ದಾರೆ. ಭಕ್ತಿ ಚಳವಳಿಯನ್ನೇ ಅಸ್ತ್ರವಾಗಿ ಮಾಡಿಕೊಂಡು ಸಾಮಾಜಿಕ ಕ್ರಾಂತಿಗಾಗಿ ಹೋರಾಡಿದ ಬಸವಣ್ಣನವರನ್ನು ಮಹಾನ್ ಕ್ರಾಂತಿಕಾರಿ, ಮಹಾತ್ಮ, ಜಗಜ್ಯೋತಿಯೆಂದು ನಾವಿಂದು ಸ್ಮರಿಸುತ್ತೇವೆ.

ಇಂತಹ ಒಬ್ಬ ಮಹಾನ್ ಸಾತ್ವಿಕ ಪುರುಷನು ಸ್ತ್ರೀಯರ ಬಗ್ಗೆ, ಅದರಲ್ಲೂ ವಿಶೇಷವಾಗಿ ವಿವಾಹಿತ ಮಹಿಳೆಯರ ಬಗ್ಗೆ, ಅಸಹ್ಯಕರವಾದ ಮಾತುಗಳನ್ನು, ಮಕ್ಕಳ ಮೇಲಿನ ಹಿಂಸಾಚಾರವನ್ನು ಸಹಿಸುವಂಥ ನುಡಿಗಳನ್ನು, ಯಾವ ರೂಪದಲ್ಲೇ ಆಗಲಿ ಹೇಳಿದ್ದರೆಂದರೆ ಯಾರೂ ನಂಬಲಿಕ್ಕೆ ಸಾಧ್ಯವಿಲ್ಲ.

ಆದರೆ ಅಂಥ ನುಡಿಗಳನ್ನೊಳಗೊಂಡ ಬಸವಣ್ಣನವರದ್ದೇ ಎನ್ನಲಾಗುವ ಕೆಲವು ವಚನಗಳು ವಿದ್ವಾಂಸರುಗಳ, ಚಿಂತಕರ, ವಿಶ್ಲೇಷಣಕಾರರ ಕಣ್ಣುತಪ್ಪಿಸಿ ಕೆಲವು ಕೃತಿಗಳಲ್ಲಿ ಸೇರಿಕೊಂಡು ಬಂದಿವೆ. ನನ್ನ ಗಮನಕ್ಕೆ ಬಂದ ಅಂಥ ಎರಡು ಉದಾಹರಣೆಗಳನ್ನು ಖ್ಯಾತ ಸಂಶೋಧಕ, ಸಾಹಿತಿ ಡಾ॥ ಎಲ್. ಬಸವರಾಜು ಅವರು ಸಂಗ್ರಹಿಸಿ ಬರೆದ 'ಬಸವಣ್ಣನವರ ವಚನಗಳು' ಕೃತಿಯಿಂದ ಮತ್ತು ಡಾ॥ ಸಿದ್ಧಯ್ಯ ಪುರಾಣಿಕ ಅವರ 'ಶರಣ ಚರಿತಾಮೃತ' ಗ್ರಂಥದಿಂದ ಒಂದು ವಚನವನ್ನೂ ಪ್ರಸ್ತುತ ಪಡಿಸುತ್ತಿದ್ದೇನೆ. ಶಿವನು ಏನು ಮಾಡಿದರೂ ಬಸವಣ್ಣನವರಿಗೆ ಸಹನೀಯ ಎಂಬಂತೆ ಮತ್ತು ಅಂಥ ಕೃತ್ಯಗಳ ಬಗ್ಗೆ ವ್ಯರ್ಥವಾಗಿ ಅವರು ಮರುಗುವುದಿಲ್ಲ ಎಂಬಂತೆ ಈ ವಚನಗಳಲ್ಲಿ ವ್ಯಕ್ತವಾಗುತ್ತದೆ :

ಒಡವೆ - ಭಂಡಾರ - ಕಡವರ ದ್ರವ್ಯವ
ಬಡ್ಡಿಯ ವ್ಯವಹಾರಕ್ಕೆ ಕೊಟ್ಟು
..............................
*ಆ ಧನವನು ನೀ ಬಲ್ಲಂತೆನ್ನ ಮುಂದೆ ಸೂರೆಗೊಳ್ಳುತ್ತಿರಲು*
*ನಾ ಬೇಕು-ಬೇಡವೆಂದು ಮನದಲ್ಲಿ ಮರುಗಿದೆನಾದರೆ*
*ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಮನದೊಡೆಯ ನೀನೆ ಬಲ್ಲೆ!*
*ಕಾಮನೇಮವೆಂಬ ಸಿಂಧುಬಲ್ಲಾಳನ ವಧುವ*
*ಸರ್ವಭುವನದೊಡೆಯ ಸಂಗಮ ದೇವರು ಬೇಡುವಂತಲ್ಲ*
*ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳೇ ಚೆಲುವೆ*
*ಆಕೆಯನು, ಸಂಗಮದೇವ, ನೀ ಜಂಗಮ ರೂಪಾಗಿ ಬಂದು*
*ಎನ್ನ ಮುಂದೆ ಸಂಗವ ಮಾಡುತ್ತಿರಲು*
*ಎನ್ನೊಡನಿದ್ದ ಸತಿಯೆಂದು ವಾಯಕ್ಕೆ ಮರುಗಿದೆನಾದಡೆ*
*ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಮನದೊಡೆಯ ನೀನೆ ಬಲ್ಲೆ?*
*ಪ್ರತ್ಯಕ್ಷವಾಗಿ ಸಿರಿಯಾಳ-ಚಂಗಳೆಯರ ಮನೆಗೆ ಬಂದು*
*ಅವರ ಮಗನ ಬೇಡುವಂತಲ್ಲ -*
*ಸಂಗಮದೇವ ನಿಮ್ಮ ಹೆಸರ ಚಿಕ್ಕಸಂಗಯ್ಯನಿದ್ದಹನು*
*ನೀ ಜಂಗಮ ರೂಪಾಗಿ ಬಂದು ಅವನ ಹಿಡಿದು*
*ಎನ್ನ ಮುಂದೆ ಹೆಡಗುಡಿಯ ಕಟ್ಟಿ ಚಿನಿಖಂಡವ ಮಾಡಿ*
*ಬಾಣಸವ ಮಾಡುವಾಗಲು*
*ಎನ್ನುದರದಲಿ ಬಂದ ಪುತ್ರನೆಂದು ವಾಯಕ್ಕೆ ಮರುಗಿದೆನಾದಡೆ*
*ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಮನದೊಡೆಯ ನೀ ಬಲ್ಲೆ!*
.....................................................''

(ನೋಡಿ : 'ಬಸವಣ್ಣನವರ ವಚನಗಳು', ಸಂಪಾದಕ : ಡಾ॥ ಎಲ್. ಬಸವರಾಜು, ಪುಟ ೧೨೮-೧೨೯)

ಈ ವಚನದ ಮೊದಲಿನ ಸಾಲುಗಳಲ್ಲಿ ಬಡ್ಡಿಯ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಬಸವಣ್ಣನವರು ಮಾಡಿರುವ ಆಣೆ ಅವರ ಚಾರಿತ್ರ್ಯಕ್ಕೆ ಒಗ್ಗುವಂಥದು. ಆದರೆ ಮುಂದಿನ ಸಾಲುಗಳಲ್ಲಿ ಹೇಳಿರುವಂತೆ ಸಂಗಮದೇವ (ಶಿವ) ಜಂಗಮ ರೂಪಾಗಿ ಬಂದು ತನ್ನ ಸತಿಯೊಂದಿಗೆ 'ಸಂಗವ' ಮಾಡುತ್ತಿದ್ದರೆ ವ್ಯರ್ಥವಾಗಿ ಮರುಗುವುದಿಲ್ಲವೆಂದು, ಅದೇ ರೀತಿ ಮಗನನ್ನು ಹೆಡಮುರಿಕಟ್ಟಿ ಕತ್ತರಿಸಿ ಅಡುಗೆ ಮಾಡಿದರೂ ವ್ಯರ್ಥವಾಗಿ ಮರುಗುವುದಿಲ್ಲವೆಂದು ಬಸವಣ್ಣನವರು ಖಂಡಿತ ಬರೆದಿರಲಾರರು.

ಅದೇ ಕೃತಿಯ ಪುಟ ೧೩೦ರಲ್ಲಿನ ಇನ್ನೊಂದು ವಚನ ಈ ಕೆಳಗಿನಂತಿದೆ :

*ಅರ್ಥವನರ್ಥವ ಮಾಡಿ ಕೋಳಾಹಳ ಗೈವುತ್ತಿರಲಿ;*
*ಹುಟ್ಟಿದ ಮಕ್ಕಳ ನವ ಖಂಡವ ಮಾಡಿ ಕಡಿವುತ್ತಿರಲಿ!*
*ಮುಟ್ಟಿದ ಸ್ತ್ರೀಯ ಕಣ್ಣ ಮುಂದೆ ಅಭಿಮಾನಗೊಂಡು*
*ನೆರೆವುತ್ತಿರಲಿ*
..................................
*ಮತ್ತೆಯೂ ಲಿಂಗಾರಾಧನೆಯ ಮಾಡುವೆ*
*ಜಂಗಮಾರಾಧನೆಯ ಮಾಡುವೆ,*
*ಪ್ರಸಾದಕ್ಕೆ ತಪ್ಪೆ,*
*ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ*
*ನೀನಂದೆ ಮೂಗ ಕೊಯಿ ಕೂಡಲಸಂಗಮ ದೇವ*

...ಈ ವಚನದಲ್ಲಂತೂ ಶಿಶು ಹತ್ಯೆ, ಪರಸ್ತ್ರೀ ಸಂಗದಂಥ (ನೆರೆ ಎಂದರೆ ಸೇರು, ಜೊತೆಗೂಡು, ಕೂಡು, ಸಂಭೋಗಿಸು ಎಂದು ಅರ್ಥ. ನೋಡಿ : ''ಸಂಕ್ಷಿಪ್ತ ಕನ್ನಡ-ಇಂಗ್ಲಿಷ್ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು) ಮಾತುಗಳೂ ಬರುತ್ತವೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಪ್ರಕಟಿಸಿದ ಡಾ॥ ಸಿದ್ಧಯ್ಯ ಪುರಾಣಿಕ ಅವರ 'ಶರಣ ಚರಿತಾಮೃತ' ಗ್ರಂಥದ ಪುಟ ೧೨೧ರಲ್ಲಿನ ಈ ವಚನವನ್ನು ನೋಡಿ :

*ಒಡನಿರ್ದ ಸತಿಯೆಂದು ನೆಚ್ಚಿರ್ದೆನಯ್ಯಾ*
*ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ !*
*ಅಯ್ಯೋ, ನಮ್ಮಯ್ಯನ ಕೈ ನೊಂದಿತು !*
*ತೆಗೆದು ಕೊಡಾ ಎಲೆ ಚಾಂಡಾಲಗಿತ್ತಿ !*
*ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದೊಡೆ*
*ಕೂಡಲಸಂಗಮದೇವನಲ್ಲದೆ ಮತ್ತಾರೂ ಅಲ್ಲ !*

ಕಳ್ಳರು ಬಸವಣ್ಣನವರ ಮನೆಗೆ ಕನ್ನವಿಕ್ಕಿ ಮಲಗಿದ್ದ ನೀಲಾಂಬಿಕೆಯವರ ಕಿವಿಯೋಲೆಯನ್ನು ಕಿತ್ತುಕೊಳ್ಳುತ್ತಿದ್ದಾಗ, ''ಅಯ್ಯೋ ಕಳ್ಳರು,'' ಎಂದು ಆಕೆ ಕಿರುಚಿಕೊಳ್ಳುತ್ತಿದ್ದಾಗ ಅವರು ವಚನದಲ್ಲಿ ಹಾಗೆಂದಿದ್ದರು ಎನ್ನಲಾಗುತ್ತದೆ. ಇದು ಕ್ರಿಯೆ ನಡೆಯುತ್ತಿದ್ದಾಗ ರೆಕಾರ್ಡ್ ಮಾಡಿಕೊಂಡ ಮಾತಿನಂತೆ ತೋರುತ್ತದೆ. ಯಾವುದೋ ಒಂದು ನಾಟಕದಲ್ಲಿ ಬಸವಣ್ಣನವರ ಪಾತ್ರಧಾರಿಯಾದವನು ಘಟನೆಗೆ ರಂಗೇರಿಸಲು ಭಾವಾವೇಶದಿಂದ ಆಡಿದ ಮಾತಿನಂತಿದೆ. ಬಸವಣ್ಣನವರು ಲೇಖನಿಯಲ್ಲಾಗಲಿ, ಮಾತಿನಲ್ಲಾಗಲಿ ಸತಿ ನೀಲಾಂಬಿಕೆಯವರನ್ನುದ್ದೇಶಿಸಿ 'ಚಂಡಾಲಗಿತ್ತಿ' ಎಂದು ಬೈದಿರಲು ಸಾಧ್ಯವಿಲ್ಲ.

''ವಿಶ್ವಗುರು ಬಸವಣ್ಣನವರು ರಚಿಸಿದ ವಚನಗಳು ಹಾಗೂ ಅವರ ಅನುಭವ ಮಂಟಪ ಮಾನವ ಹಕ್ಕುಗಳ ಎಲ್ಲಾ ನೀತಿಸಂಹಿತೆಗಳನ್ನೊಳಗೊಂಡಿವೆ. ಬಸವಣ್ಣನವರ ಬರವಣಿಗೆಗಳು ನಮ್ಮೆಲ್ಲರಿಗೂ ಆದರ್ಶಪ್ರಾಯವಾಗಿವೆ. ಅವರು ಹೇಳಿದಂತೆ ಜಾತಿ-ಧರ್ಮ ಸಂಕೋಲೆಯಿಂದ ಹೊರಬಂದು ವಿಶ್ವಮಾನವರಾಗಬೇಕು'' ಎಂದು ರಾಜ್ಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷ ನಾಡೋಜ ನ್ಯಾ. ಡಾ॥ ಎಸ್. ಆರ್. ನಾಯಕ ಅವರು ಇತ್ತೀಚೆಗೆ ಹೇಳಿದ ಮಾತು ಇಲ್ಲಿ ಅತ್ಯಂತ ಪ್ರಸ್ತುತವೆನಿಸುತ್ತದೆ (ನೋಡಿ : 'ಸಂಯುಕ್ತ ಕರ್ನಾಟಕ', ಕಲಬುರ್ಗಿ ಸಂಪುಟ, ದಿನಾಂಕ : ೨೮.೦೧.೨೦೧೨).

ಬಸವಣ್ಣನವರ ಬರವಣಿಗೆಗಳು ಎಲ್ಲರಿಗೂ ಆದರ್ಶ ಪ್ರಾಯವಾಗಿವೆಯೆಂಬುದು ಸರ್ವಸಮ್ಮತವಾದ ಮಾತು. ಇಂಥ ಬರವಣಿಗೆಗಳಲ್ಲಿ ಅವರ ಚಾರಿತ್ರ್ಯಕ್ಕೇ ಕುಂದು ತರುವಂಥ ವಚನಗಳು ಸೇರಿಕೊಂಡಿದ್ದು ಆಶ್ಚರ್ಯಕರ. ಸಾಹಿತಿಗಳು, ಸಂಶೋಧಕರು, ವಿಶ್ಲೇಷಣಕಾರರು ಈ ಮೇಲೆ ಉಲ್ಲೇಖಿಸಿದ ವಚನಗಳನ್ನು, ಅವು ಯಾವ ಕೃತಿಗಳಲ್ಲಾದರೂ ಬಂದಿರಲಿ, ತೆಗೆದುಹಾಕಬೇಕೆಂದು ಕೋರುತ್ತೇನೆ.

**ಸೂರ್ಯಕಾಂತ ಎಂ. ಸೊನ್ನದ**
ಪ್ಲಾಟ್ ೩೬, ವೀರಭದ್ರೇಶ್ವರ ಕಾಲನಿ, ಉದ್ನೂರ್ ರೋಡ್, ಗುಲಬರ್ಗಾ

# ಕಣ್ಣಿಲ್ಲದವ

ಇಂಗ್ಲಿಷ್ ಮೂಲ : **ಮ್ಯಾಕಿನ್ಲೆ ಕ್ಯಾಂಟರ್**
ಕನ್ನಡಕ್ಕೆ : **ಟಿ. ವಿ. ಮಾಗಳದ**

ಇತ್ತ ಪಾರ್ಸನ್ಸ್ ಹೋಟಲ್‌ನಿಂದ ಹೊರಬರುತ್ತಿದ್ದ. ಅತ್ತ ವಿಶಾಲ ಬೀದಿಯಿಂದ ಭಿಕ್ಷುಕನೊಬ್ಬ ಬರುತ್ತಿದ್ದ.

ಅವನೊಬ್ಬ ಕುರುಡ ಭಿಕ್ಷುಕ. ಕೈಯಲ್ಲಿ ಅಂಕುಡೊಂಕಾದ ಬೆತ್ತ. ಕುರುಡನ ರೀತಿಯಲ್ಲಿ ಅತ್ಯಂತ ಎಚ್ಚರಿಕೆಯಿಂದ ಬೆತ್ತವನ್ನು ಪ್ರಜ್ಞಾಪೂರ್ವಕವಾಗಿ, ವಸ್ತುಸ್ಥಿತಿಯನ್ನು ಮರೆಮಾಚುವ ಪ್ರಯತ್ನದಿಂದ ನೆಲಕ್ಕೆ ಕುಕ್ಕುತ್ತ ಬರುತ್ತಿದ್ದ. ಅಡ್ಡಾದಿಡ್ಡಿ ಬೆಳೆದ ಮೈಕಟ್ಟಿನ, ಕುರುಚಲು ಗಡ್ಡದ ಆ ಭಿಕ್ಷುಕನ ಹರಕು ಕೋಟಿನ ಕಾಲರ್ ಹಾಗೂ ಜೇಬುಗಳ ಅಂಚುಗಳು ಬೆವರು, ಎಣ್ಣೆ ಮಿಶ್ರಣದ ಕೊಳಕಿನಿಂದ ಮೆತ್ತಿಕೊಂಡಿದ್ದವು. ಹಿಡಿತ ಸಾಧಿಸುವ ವ್ಯರ್ಥ ಪ್ರಯತ್ನದಿಂದ ಅವನ ಕೈ ಬೆರಳುಗಳು ಬೆತ್ತವನ್ನು ಸಂಭಾಳಿಸಲು ಶತಸಾಹಸ ಮಾಡುತ್ತಿದ್ದವು. ಹೆಗಲಿನಲ್ಲಿ ಕಪ್ಪು ಜೋಳಿಗೆ ತೂಗಾಡುತ್ತಿತ್ತು. ಮತ್ತೊಂದು ಹೆಗಲಿನಿಂದ ಕಪ್ಪು ಚೀಲವೊಂದು ಇಳಿಬಿದ್ದಿತ್ತು. ಅವನು ಏನನ್ನೋ ಮಾರಲು ಹೊರಟವನಂತೆ ಕಾಣುತ್ತಿದ್ದ.

ವಸಂತದ ತಂಗಾಳಿಯ ಒಡಲು ಮರಗಳ ಚಿಗುರುಗಳ ಹಾಗೂ ಬಳ್ಳಿಗಳ ಹೂಗಳ ಸುವಾಸನೆಯಿಂದ ತುಂಬಿ ತುಳುಕುತ್ತಿತ್ತು. ಸೂರ್ಯನು ಸೌಮ್ಯವಾಗಿದ್ದ. ಪಾರ್ಸನ್ಸ್ ಅಲ್ಲೇ ಹೋಟೆಲ್ ಮುಂದುಗಡೆ ನಿಂತಿದ್ದ. ಕುರುಡನೊಬ್ಬನ ಕೋಲಿನ 'ಟಪ್‌ಟಪ್' ಸಪ್ಪಳ ಸಮೀಪದಿಂದಲೇ ಬರುತ್ತಿತ್ತು. ಇದ್ದಕ್ಕಿದ್ದಂತೆ ಅವನಲ್ಲಿ ಎಲ್ಲ ಕುರುಡರ ಬದುಕಿನ ಬಗ್ಗೆ ಒಂದು ರೀತಿಯ ಅನುಕಂಪ ಭಾವನೆಯ ಅಲೆಗಳು ಉಕ್ಕೇರಿದವು.

ಪಾರ್ಸನ್ಸ್ ತಾನು ಜೀವಂತ ಇರುವ ಬಗ್ಗೆ ಬಲು ಖುಷಿಪಟ್ಟುಕೊಂಡ. ಕೆಲವೇ ವರ್ಷಗಳ ಹಿಂದೆ ಅವನೊಬ್ಬ ಕುಶಲ ಕಾರ್ಮಿಕನಾಗಿದ್ದ. ಆದರೆ ಈಗ ಒಬ್ಬ ಯಶಸ್ವಿ, ಗೌರವಾನ್ವಿತ ಹಾಗೂ ಬಹುಪ್ರಶಂಸಿತ ಜೀವ ವಿಮಾ ಉದ್ಯೋಗಿಯಾಗಿದ್ದ. ಅವನು ಆ ಉದ್ಯೋಗವನ್ನು ಸ್ವತಂತ್ರವಾಗಿ, ಯಾರೊಬ್ಬರ ಸಹಾಯವೂ ಇಲ್ಲದೆ, ತನ್ನೆಲ್ಲ ಅಂಗವಿಕಲತೆಗಳ ತೀವ್ರ ಅನಾನುಕೂಲತೆ ಹಾಗೂ ಪ್ರತಿಕೂಲತೆಯ ನಡುವೆಯೂ ಯಶಸ್ವಿಯಾಗಿ ಮುನ್ನಡೆಸಿಕೊಂಡು ಹೊರಟಿದ್ದ. ಅವನಿನ್ನೂ ಯುವಕನಾಗಿದ್ದ. ಸುಗಂಧಭರಿತ ಹೂಗಳ ಸುವಾಸಿತ ಸಿರಿಗಾಳಿ ಅವನಲ್ಲಿ ಕುತೂಹಲಕಾರಿ ಹಾಗೂ ರೋಮಾಂಚನಕಾರಿ ಭಾವನೆಗಳ ಬೆಡಗಿನ ಕಾರಂಜಿಯನ್ನೇ ಪುಟಿದೆಬ್ಬಿಸುತ್ತಿತ್ತು.

ಪಾರ್ಸನ್ಸ್ ಹೊರಡಲು ಒಂದು ಹೆಜ್ಜೆ ಮುಂದಿಡುವಷ್ಟರಲ್ಲಿ 'ಟಪ್ ಟಪ್' ಕೋಲು ಸದ್ದಿನಿಂದ ಕುರುಡ ಭಿಕ್ಷುಕ ಅವನ ಬಳಿಯಿಂದ ದಾಟಿಹೋದ. ಮತ್ತೆ ಹಿಂತಿರುಗಿ ಬಂದು ಪಾರ್ಸನ್ಸ್‌ನೊಡನೆ ಮಾತಾಡಿದ, ''ಧಣಿ, ಸ್ವಲ್ಪ ಕಿವಿಗೊಡಿ. ಒಂದೇ ಒಂದು ನಿಮಿಷ. ನಿಮ್ಮ ಅಮೂಲ್ಯವಾದ ಒಂದು ನಿಮಿಷ ನನಗೆ ಕೊಡಿ.''

''ನನಗೀಗ ಸಮಯವಿಲ್ಲ.'' ''ನನ್ನಾಣೆಯಾಗಿಯೂ ನಾನು ಭಿಕ್ಷುಕನಲ್ಲ. ನನ್ನ ಬಳಿ ಒಂದು ಸಣ್ಣ ಸರಕಿದೆ'' ಎನ್ನುತ್ತ ಪಾರ್ಸನ್ಸ್‌ನ ಕೈಗಾಗಿ ತಡಕಾಡುತ್ತ ಕೊನೆಗೆ ಆತನ ಕೈಯಲ್ಲಿ ಆ ಸರಕನ್ನು ಒತ್ತಿಟ್ಟು ಹೇಳಿದ, ''ಇದನ್ನು ನಾನು ಮಾರುತ್ತಿದ್ದೇನೆ. ಒಪ್ಪೊತ್ತಿನ ಊಟಕ್ಕಾಗುವಷ್ಟು ದುಡ್ಡಾದರೆ ಸಾಕು. ಇದು ಅತ್ಯುತ್ತಮವಾದ ಸಿಗರೇಟ್ ಲೈಟರ್.''

ಪಾರ್ಸನ್ಸ್ ಅಲ್ಲಿಯೇ ನಿಂತ. ಅವನು ಕಿರಿಕಿರಿಗೊಂಡಿದ್ದ. ಪೇಚಿಗೆ ಸಿಲುಕಿದವನಂತೆ ಪರದಾಡಿದ. ಪಾರ್ಸನ್ಸ್ ಸ್ಫುರದ್ರೂಪಿ. ಯಾವೊಂದೂ ಕಪ್ಪುಕಲೆ ಇಲ್ಲದ ಶುಭ್ರವಾದ ನಸುಗಪ್ಪು ಬಣ್ಣದ ಸೂಟ್ ಧರಿಸಿದ್ದ. ಕೈಯಲ್ಲಿ ಬೆಲೆಬಾಳುವ ಬೆತ್ತ ಹಿಡಿದಿದ್ದ. ಸಿಗರೇಟ್ ಲೈಟರ್ ಕೊಟ್ಟ ಆ ಕುರುಡು ಭಿಕ್ಷುಕ ಪಾರ್ಸನ್ಸ್‌ನನ್ನು ನೋಡಲಾರ. ಪಾರ್ಸನ್ಸ್ ಆತಂಕದಿಂದ ಹೇಳಿದ, ''ಅದು ಸರಿ. ಆದರೆ ನಾನು ಸ್ಮೋಕ್ ಮಾಡುವುದಿಲ್ಲ.''

''ನೋಡಿ ಧಣಿ. ನನ್ನದೊಂದು ಮಾತು ಕೇಳಿ. ನೀವು ಸ್ಮೋಕ್ ಮಾಡದೇ ಇದ್ದರೂ ಸ್ಮೋಕ್ ಮಾಡುವ ಸಾಕಷ್ಟು ಜನ ನಿಮಗೆ ಪರಿಚಯದವರಿದ್ದಾರೆ ಎಂದು ನಾನು ಆಣೆ ಮಾಡಿ ಹೇಳಬಲ್ಲೆ. ಅಂಥವರಿಗೆ ಕೊಡಲಿಕ್ಕೆ ನಿಮಗೆ ಇದೊಂದು ಅತ್ಯುತ್ತಮ ಉಡುಗೊರೆಯಾಗಬಲ್ಲದು.'' ನಯವಾದ ಮಾತುಗಳಿಂದ ಮನವೊಲಿಸುತ್ತ ಭಿಕ್ಷುಕ ಮಾತು ಮುಂದುವರಿಸಿದ, ''ನೋಡಿ ಸರ್, ನನ್ನಂಥ ಒಬ್ಬ ಬಡಪಾಯಿಗೆ ನೀವು ಸಹಾಯ ಮಾಡಲು ಹಿಂದೆ ಮುಂದೆ ನೋಡುವುದಿಲ್ಲ ಎಂಬ ಭರವಸೆ ನನಗಿದೆ.'' ಪಾರ್ಸನ್ಸ್‌ನ ಕೈಯನ್ನು ಭಿಕ್ಷುಕ ಬಲವಾಗಿ ಹಿಡಿದುಕೊಂಡು ನಿಂತ.

ಪಾರ್ಸನ್ಸ್ ನಿಟ್ಟುಸಿರುಬಿಟ್ಟ. ತನ್ನ ಕೋಟಿನ ಜೇಬಿಗೆ ತಡಕಾಡಿ ಕೊನೆಗೂ ಜೇಬಿನಲ್ಲಿ ಕೈತೂರಿಸುವಲ್ಲಿ ಯಶಸ್ವಿಯಾದ. ಕೈಗೆ ಸಿಕ್ಕ ಎರಡು ಡಾಲರ್‌ಗಳನ್ನು ಭಿಕ್ಷುಕನ ಕೈಯಲ್ಲಿ ತುರುಕುತ್ತ



ಹೇಳಿದ, ''ಆಗಲಿ, ಖಂಡಿತವಾಗಿ ನಾನು ನಿನಗೆ ಸಹಾಯ ಮಾಡುತ್ತೇನೆ. ನೀನು ಹೇಳಿದಂತೆ ನನ್ನ ಯಾರಾದರೂ ಒಬ್ಬ ಗೆಳೆಯನಿಗೆ ಲೈಟರನ್ನು ಉಡುಗೊರೆಯಾಗಿ ಕೊಡುವೆ.''

ಒಬ್ಬ ಕುರುಡ ಮಾರಾಟಗಾರನೊಂದಿಗೆ ಒರಟಾಗಿ ನಡೆದುಕೊಳ್ಳುವುದು, ಚೌಕಾಸಿ ಮಾಡುವುದು ಅಥವಾ ವಿಚಾರಣೆಗೊಳಪಡಿಸುವುದು ಸಭ್ಯತನವಲ್ಲವೆಂಬ ಸೂಕ್ಷ್ಮತೆಯಿಂದ ಸ್ವಲ್ಪ ಹಿಂಜರಿಯುತ್ತಲೇ ಪಾರ್ಸನ್ಸ್ ಭಿಕ್ಷುಕನಿಗೆ ಒಂದು ಪ್ರಶ್ನೆ ಕೇಳಿದ; ''ನಿನ್ನ ಕಣ್ಣು ದೃಷ್ಟಿ ಸಂಪೂರ್ಣವಾಗಿ ಕಳೆದುಹೋಗಿದೆಯೆ ?''

ಹರಕು ಬಟ್ಟೆಯ ಆ ವ್ಯಕ್ತಿ ಎರಡು ಡಾಲರ್‌ಗಳನ್ನು ತಕ್ಷಣ ಜೇಬಿಗಿಳಿಸಿದ. ಅರೆಹುಚ್ಚನ ಅಹಂಕಾರದಿಂದ ಹೇಳಿದ, ''ಹದಿನಾಲ್ಕು ವರ್ಷ, ಧಣಿ. ವೆಸ್ಟಬರಿಯಲ್ಲಿ ಸರ್. ದುರಂತದಲ್ಲಿ ನಾನೂ ಒಬ್ಬ.''

''ವೆಸ್ಟಬರಿ'', ಪುನರುಚ್ಚರಿಸುತ್ತ ಪಾರ್ಸನ್ಸ್ ಹೇಳಿದ, ''ಓಹ್! ಹೌದು! ಅದೊಂದು ರಾಸಾಯನಿಕ ಸ್ಫೋಟ... ವರ್ಷಗಳವರೆಗೆ ಪತ್ರಿಕೆಗಳು ಅದರ ಬಗ್ಗೆ ಚಕಾರ ಎತ್ತಿರಲಿಲ್ಲ. ಆದರೆ ಆ ದಿನಗಳಲ್ಲಿ ಅದೊಂದು ಅತ್ಯಂತ ದೊಡ್ಡ ದುರಂತ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ... ಆದರೇನು ? ಜನ ಈಗ ಅದೆಲ್ಲದರ ಬಗ್ಗೆ ಮರೆತಿದ್ದಾರೆ.'' ಇನ್ನೇನು ಹೊರಡಬೇಕು ಎಂದುಕೊಂಡು ಪಾರ್ಸನ್ಸ್ ಹೆಜ್ಜೆ ಮುಂದಿಡುವುದರಲ್ಲಿದ್ದ. ಕುರುಡ ಮತ್ತೆ ಮಾತಿಗಾರಂಭಿಸಿದ. ''ಆದರೆ ಧಣಿ, ನಾನು ನಿಮಗೊಂದು ಮಾತು ಹೇಳುತ್ತೇನೆ. ಜನ ಮರೆತಿರಬಹುದು. ಆ ದುರ್ಘಟನೆಯಲ್ಲಿ ಸಿಕ್ಕಿಬಿದ್ದವರು ಮಾತ್ರ ಅದನ್ನೆಂದೂ ಮರೆಯಲಾರರು. ನಾನು ನೋಡಿದ ಕೊನೆಯ ದೃಶ್ಯವೆಂದರೆ ರಾಸಾಯನಿಕ ಅಂಗಡಿಯ ಛತ್ತು ಆ ಸ್ಫೋಟದಲ್ಲಿ ಒಂದೇ ಹೊಡೆತಕ್ಕೆ ಕಿತ್ತು ಹಾರಿದ್ದು. ಆ ಹಾಳು ರಾಸಾಯನಿಕ ಅನಿಲ ವಿಷಸರ್ಪದ ಹೆಡೆಯಂತೆ ಸುತ್ತಲೂ ಹರಡಿಕೊಂಡದ್ದು.''

ಪಾರ್ಸನ್ಸ್ ಕೆಮ್ಮಿದ. ಆದರೆ ಕುರುಡು ಮಾರಾಟಗಾರ ನಾಟಕೀಯ ಶೈಲಿಯ ನೆನಪಿನ ರೈಲನ್ನು

ಓಡಿಸತೊಡಗಿದ. ಪಾರ್ಸನ್ಸ್‌ನ ಜೇಬಿನಲ್ಲಿ ತನಗೆ ಕೊಡಲು ಇನ್ನೂ ಒಂದರ್ಧ ಡಾಲರ್ ಉಳಿದಿರಬಹುದೆಂಬ ದೂರದ ವಿಚಾರವು ಮಾತು ಮುಂದುವರಿಸುವಿಕೆಯ ಅವನ ನಿರ್ಧಾರಕ್ಕೆ ಪ್ರೇರಣೆ ನೀಡಿರಬೇಕು.

''ನೀವೇ ಸ್ವಲ್ಪ ವಿಚಾರಮಾಡಿ, ಧಣಿ... ಆ ದುರ್ಘಟನೆಯಲ್ಲಿ ನೂರಾ ಎಂಟು ಜನ ಕೊಲ್ಲಲ್ಪಟ್ಟರು. ಅಂದಾಜು ಇನ್ನೂರಕ್ಕೂ ಹೆಚ್ಚು ಜನ ಗಾಯಗೊಂಡರು. ಸುಮಾರು ಐವತ್ತಕ್ಕೂ ಹೆಚ್ಚು ಜನ ಕಣ್ಣು ಕಳೆದುಕೊಂಡರು. ಕುರುಡರಾದರು.'' ಪಾರ್ಸನ್ಸ್‌ನ ಕೋಟಿನ ತೋಳುಗಳು ಅವನ ಕೈಗೆ ಸಿಗುವವರೆಗೂ ಅವನ ಕೊಳಕು ಕೈಗಳು ಮುಂದೆ ಚಾಚಿಕೊಂಡು ತಡಕಾಡಿದವು. ''ನಿಮಗೆ ಒಂದು ಮಾತು ಹೇಳ್ತೀನಿ, ಸರ್. ಯಾವ ಯುದ್ಧಕ್ಕೂ ಕಡಿಮೆ ಇಲ್ಲದಷ್ಟು ಆ ಕರಾಳ ಘಟನೆ ದುರಂತಮಯವಾಗಿತ್ತು. ಒಂದು ವೇಳೆ ಯುದ್ಧದಲ್ಲಿ ನಾನು ಕಣ್ಣು ಕಳೆದುಕೊಂಡಿದ್ದರೆ ಅದು ಒಳ್ಳೆಯದೇ ಎನ್ನಬಹುದಾಗಿತ್ತು. ಬೇಕಾದಷ್ಟು ಉತ್ತಮ ಕಾಳಜಿ, ಅತ್ಯುತ್ತಮ ಆರೈಕೆ ದೊರೆಯುತ್ತಿತ್ತು. ಆಗ ನನಗೆ ಸಿಗುತ್ತಿದ್ದ ರಕ್ಷಣೆ, ಉಪಚಾರ, ಗೌರವವೇ ಬೇರೆ ಇರುತ್ತಿತ್ತು. ಅದರ ಬಗ್ಗೆ ನಾನು ಚಿಂತೆ ಮಾಡ ಬೇಕಾದದ್ದೇ ಇರುತ್ತಿರಲಿಲ್ಲ. ಆದರೆ ನಾನೊಬ್ಬ ಕೆಲಸಗಾರ. ನಾನೊಬ್ಬ ಕಾರ್ಮಿಕನಷ್ಟೆ. ನನಗೆ ಸಿಕ್ಕಿದ್ದು ಕುರುಡುತನ ಮಾತ್ರ. ನನ್ನ ಬದುಕಿನ ಕೊರಡುತನ. ನನ್ನ ಬಾಳಿನ ಬರಡುತನ. ಆದರೆ ಆ ಬಂಡವಾಳಶಾಹಿಗಳು ಬಳಿದುಕೊಂಡು ಬಳಿದುಕೊಂಡು ಹಣದ ಗಂಟಿನ ಮೇಲೆ ಕುಳಿತಿದ್ದಾರೆ. ಅವರು ವಿಮೆ ಇಳಿಸಿದ್ದರು. ಆದ ಹಾನಿ ಬಗ್ಗೆ ಅವರಿಗೆ ಚಿಂತೆ ಇಲ್ಲ. ಏಕೆಂದರೆ ವಿಮೆ ಅವರಿಗೆ ಭದ್ರತೆ ನೀಡಿದೆ. ಸಮೃದ್ಧತೆ ತಂದಿದೆ. ಅವರು...''

''ಅವರು ವಿಮೆ ಮಾಡಿಸಿದ್ದರು'', ಕುರುಡ ಅದೇ ಶಬ್ದಗಳನ್ನು ಪುನರುಚ್ಚರಿಸಿದ. ಪಾರ್ಸನ್ಸ್ ಮಾತು ಮುಂದುವರಿಸಿ ನುಡಿದ, ''ಹೌದಾ ? ಅದನ್ನೇ ನಾನು ಮಾಡುತ್ತಿರುವುದು. ನಾನೂ ಒಬ್ಬ ವಿಮಾ ಉದ್ಯೋಗಿ.''

''ನಾನು ಕಣ್ಣು ಹೇಗೆ ಕಳೆದುಕೊಂಡೆ ಎಂಬುದನ್ನು ನೀವು ತಿಳಿದುಕೊಳ್ಳಬಯಸಿದ್ದೀರಿ. ಅಲ್ಲವೆ ?'' ಸನ್ನಿವೇಶವನ್ನು ಒತ್ತಾಯದಿಂದ ಸೃಷ್ಟಿಸಿಕೊಂಡು ಕುರುಡ ಮಾತು ಬೆಳೆಸಿದ, ''ಸರಿ ಈಗ ನಿಮಗೆ ಅದನ್ನೆಲ್ಲ ಹೇಳುವೆ !''

ಹಣಕ್ಕಾಗಿ ಕಂಠಪಾಠ ಮಾಡಿ ಮೇಲಿಂದ ಮೇಲೆ ಹೇಳುವ ನಾಟಕದ ಸಂಭಾಷಣೆಯಂತೆ ಮಾತುಗಳು ದುಃಖಪೀಡಿತ ಭಾವನೆಯ ಶೈಲಿಯಲ್ಲಿ ಕುರುಡನಿಂದ ಹೊರಬೀಳತೊಡಗಿದವು, ''ನಾನು ಅಲ್ಲಿ ಆ ರಾಸಾಯನಿಕ ಅಂಗಡಿಯಲ್ಲಿದ್ದೆ. ದಿಢೀರ್ ಸಂಭವಿಸಿದ ದುರಂತದಿಂದ ತಬ್ಬಿಬ್ಬಾದೆ. ನೂಕುನುಗ್ಗಲಿನಲ್ಲಿ ಹೊರಗೋಡುತ್ತಿದ್ದ ಕಂಗೆಟ್ಟ ಜನಜಂಗುಳಿಯಲ್ಲಿ ನಾನು ಕೊನೆಯವನಾಗಿದ್ದೆ. ಅಕ್ಕಪಕ್ಕದ ಎಡಬಲಗಳ ಕಟ್ಟಡಗಳು ಸ್ಫೋಟಗೊಳ್ಳುತ್ತಿರುವಾಗಲೂ ಹೊರಗಡೆ ಬಯಲ ಗಾಳಿಯಲ್ಲಿ ಒಂದು ಅವಕಾಶವಿತ್ತು. ಅನೇಕರು ಬಾಗಿಲಿನಿಂದ ಹೊರಗೋಡಿ ಸುರಕ್ಷಿತವಾಗಿ ಪಾರಾದರು. ನಾನೂ ಕೂಡ ಆ ಬಲಿಷ್ಠರ ಮಧ್ಯದಲ್ಲಿ ನುಸುಳಿಕೊಂಡು ಇನ್ನೇನು ಹೊರಬರಬೇಕೆನ್ನುವಷ್ಟರಲ್ಲಿ, ''ಮೂರ್ಖಾ ! ಹೋಗಲಿಕ್ಕೆ ನನಗೆ ದಾರಿಬಿಡು...!'' ಎಂದು ಗುಡುಗುತ್ತ ಬಲಿಷ್ಠನೊಬ್ಬ ನನ್ನನ್ನು ತಳ್ಳಿದ. ಬಹುಶಃ ಅವನೊಬ್ಬ ತಲೆತಿರುಕ ಇರಬಹುದು. ನಂಗೊತ್ತಿಲ್ಲ. ಅಷ್ಟಾದರೂ ನನ್ನ ಹೃದಯಾಂತರಾಳದಲ್ಲಿ ಅವನನ್ನು ಕ್ಷಮಿಸಲು ಪ್ರಯತ್ನಿಸುವೆ, ಧಣಿ. ಅವನು ನನಗಿಂತ ದೊಡ್ಡವನಿದ್ದ. ನನ್ನನ್ನು ಹಿಡಿದೆಳೆದು ನೆಲಕ್ಕೆ ತಳ್ಳಿ ನೇರ ನನ್ನ ಮೇಲೆ ನಡೆದುಹೋದ. ಆ ಹೊಲಸಿನಲ್ಲಿ ನೂಕಿ ನಿರ್ದಯವಾಗಿ ನನ್ನನ್ನು ತುಳಿದುಕೊಂಡೇ ಹೋದ. ಅವನೇನೋ ಪಾರಾಗಿಹೋದ. ಆದರೆ ನಾನು ಬದಿಗಳಿಂದ ಸುರಿಯುವ ವಿಷಾನಿಲ, ಬೆಂಕಿ ಮತ್ತು ಅವಶೇಷಗಳ ಮಧ್ಯೆ ಅಲ್ಲೇ ಬಿದ್ದುಕೊಂಡೆ.''... ಇಷ್ಟನ್ನು ಹೇಳುತ್ತ ಅಭ್ಯಾಸ ಬಲದಿಂದ ಕರಗತಗೊಳಿಸಿಕೊಂಡ ಅಳು ನುಂಗುವಿಕೆಯೊಂದಿಗೆ, ನಡುನಡುವೆ ಬಿಕ್ಕಳಿಸುತ್ತ ಪಾರ್ಸನ್ಸ್‌ನಿಂದ ಮತ್ತೇನನ್ನೋ ನಿರೀಕ್ಷಿಸುವಂತೆ, ಮೌನವಾಗಿ ನಿಂತುಕೊಂಡ. ಬಹುಶಃ ಅವನು ''ಅಯ್ಯೋ ಪಾಪ'' ''ಭಾರಿ ದುರ್ದೈವ !'' ''ಎಂಥ ದುರದೃಷ್ಟ!'' ಎಂಬ ಸಾಂತ್ವನದ ಶಬ್ದಗಳ ಜೊತೆಗೆ ಏನಾದರೂ ಸಹಾಯವನ್ನು ಪಾರ್ಸನ್ಸ್‌ನಿಂದ ಆಶಿಸುತ್ತ,''ಹೀಗಿದೆ ನೋಡಿ ಧಣಿ, ನನ್ನ ದುರಂತ ಕಥೆ. ದುಸ್ಸಹನೀಯ ವ್ಯಥೆ'', ಎಂದ.

ಗಡಗಡ ನಡುಗಿಸುವ ತಂಪಾದ ಗಾಳಿಯ ಒಂದು ಸೆಳೆತ ಭರ್ರನೆ ಬೀಸಿ ಸ್ತಬ್ಧಗೊಂಡಿತು.

''ನೀನು ಹೇಳಿದ್ದು ನಿಜ. ಆದರೆ ಅದು ಆದದ್ದು ಹಾಗಲ್ಲ'', ಪಾರ್ಸನ್ಸ್ ಹೇಳಿದ.

ಕುರುಡ ನವಿರಾಗಿ ಕಂಪಿಸಿದ. ಮೆಲ್ಲನೆ, ''ಅದು ಹಾಗಲ್ಲ ಅಂದರೆ ಏನದರ ಅರ್ಥ ? ಅಂದರೆ ನೀವು ಹೇಳೋದು ಏನು ?'' ಎಂದ.

ಪಾರ್ಸನ್ಸ್ ಸಾವಧಾನವಾಗಿ ಉತ್ತರಿಸಿದ, ''ನಾನು ಹೇಳೋದು ಏನಂದ್ರೆ ನಿನ್ನ ಕತೆಯಲ್ಲಿ ಸತ್ಯ ಇದೆ. ಆದರೆ ಕೊನೆಯಲ್ಲಿ ಅದು ತಿರುಚಿಕೊಂಡಿದೆ. ಹಿಂದೆಮುಂದೆ ಆಗಿದೆ.''



''ಏನಂದಿರಿ ಧಣಿ ? ತಿರುಚಿಕೊಂಡಿದೆ ! ಹಿಂದೆಮುಂದೆ ಆಗಿದೆ''! ಕುರುಡ ಕರ್ಕಶ ಧ್ವನಿಯಿಂದ ಒರಟಾಗಿ ಕೇಳಿದ.

ಪಾರ್ಸನ್ಸ್ ಸ್ಥಿತಪ್ರಜ್ಞತೆಯಿಂದ ಉತ್ತರಿಸಿದ, ''ನಾನೂ ಅದೇ ಅಂಗಡಿಯಲ್ಲಿ ಇದ್ದೆ. ಅಂದಿನ ವಸ್ತುಸ್ಥಿತಿ ಬೇರೆಯೇ ಆಗಿತ್ತು. ನನ್ನನ್ನು ಹಿಡಿದು ಹಿಂದಕ್ಕೆ ತಳ್ಳಿ ಮತ್ತೆ ತುಳಿದುಕೊಂಡು ನನ್ನ ಮೇಲೆ ನಿರ್ದಯವಾಗಿ ನಡೆದು ಹೋದ ವ್ಯಕ್ತಿ ನೀನು. ಮಾರ್ಕ್‌ವರ್ಡ್ತ್, ನನಗಿಂತ ಬಲಿಷ್ಠನಾದವನು ನೀನು. ಗೊತ್ತಾ ?''

ನುಂಗಲಾಗದ ತುತ್ತನ್ನು ಗಂಟಲಲ್ಲಿಳಿಸಲು ಚಡಪಡಿಸುತ್ತಿರುವವನಂತೆ ಕುರುಡ ಬಹಳ ಹೊತ್ತು ಮೂಕನಾಗಿ ನಿಂತುಬಿಟ್ಟ. ನಂತರ ಚೇತರಿಸಿಕೊಂಡು ಬಡಬಡಿಸತೊಡಗಿದ, ''ಪಾರ್ಸನ್ಸ್! ಅಯ್ಯೋ ದೇವರೆ !! ಅಯ್ಯೋ ದೇವರೇ !!! ನಾನು ಅಂದ್ಕೊಂಡಿದ್ದ ನೀನು...'' ಕ್ಷಣ ಕಾಲ ಮಾತು ಹೊರಡದೆ ತಡೆದು ನಿಂತ. ಮತ್ತೆ ಸುಧಾರಿಸಿಕೊಂಡು ದೆವ್ವ ಬಡಿದವನಂತೆ ಚೀರಿದ, ''ಹೌದು, ಹೌದು. ಇರಬಹುದು, ಇರಬಹುದು. ಆದರೆ ನಾನು ಕುರುಡ. ನಾನೊಬ್ಬ ಕುರುಡ. ಆದರೆ ನೀನು ನನ್ನೊಬ್ಬನನ್ನೇ ಮಾತಾಡಲು ಹಚ್ಚಿ ನನ್ನೆದುರಿನಲ್ಲಿ ನಿಂತುಕೊಂಡಿರುವಿ. ಕ್ಷಣಕ್ಷಣಕ್ಕೂ ನನ್ನನ್ನು ನೋಡುತ್ತ ನಗುತ್ತಿರುವಿ ! ನಾನು ಕುರುಡ. ನಾನೊಬ್ಬ ಕುರುಡನಿದ್ದೇನೆ, ಗೊತ್ತಾ ?''

ಅವನನ್ನು ದಿಟ್ಟಿಸಿ ನೋಡಲು ಬೀದಿಯ ಜನ ಅವನತ್ತ ಆಸಕ್ತಿಯಿಂದ ತಿರುಗಿದರು. ಕುರುಡ ತೀವ್ರ ಘಾಸಿಗೊಂಡವನಂತೆ ಮತ್ತೆ ಮಾತಾಡಿದ, ''ನೀನು ಓಡಿಹೋದೆ. ನೀನು ಸುರಕ್ಷಿತವಾಗಿ ಪಾರಾದೆ. ಆದರೆ ನಾನು ! ನಾನು ಕುರುಡನಾದೆ ! ನಿನ್ನ ಕಿವಿಗೆ ಬಿತ್ತಾ ನಾನು ಹೇಳೋದು ? ನಾನು...''

''ಕಿವಿಗೆ ಬೀಳ್ತಾ ಇದೆ, ಮಾರ್ಕ್‌ವರ್ಡ್ತ್, ಅದನ್ನೇ ದೊಡ್ಡ ರಂಪ, ರಾದ್ಧಾಂತ ಮಾಡಬೇಡ. ಕಣ್ಣು ಕಳೆದುಕೊಂಡವ ನೀನಲ್ಲ, ಕಣ್ಣು ಕಳೆದುಕೊಂಡವ ನಾನು. ಕಣ್ಣಿಲ್ಲದವ ನೀನಲ್ಲ, ಕಣ್ಣಿಲ್ಲದವ ನಾನು !'' ಪಾರ್ಸನ್ಸ್ ನಿಧಾನವಾಗಿ ಉತ್ತರಿಸಿ ಕೈಯಲ್ಲಿದ್ದ ಕೋಲಿನಿಂದ ದಾರಿ ಕಂಡುಕೊಳ್ಳುತ್ತ ತನ್ನ ಕೆಲಸಕ್ಕೆ ನಡೆದ.

---

ಇಂಗ್ಲಿಷ್ ಮೂಲ : **ಮ್ಯಾಕಿನ್ಲೆ ಕ್ಯಾಂಟರ್**

ಕನ್ನಡಕ್ಕೆ : **ಟಿ. ವಿ. ಮಾಗಳದ**

'ಶಾಂತ ನಿಲಯ', ವಡಗೇರಿ ಬಿಲ್ಡಿಂಗ್, ವಿವೇಕಾನಂದ ನಗರ, ಗದಗ - ೫೮೨ ೧೦೧

# ಹಣೆಯಲ್ಲಿ ಬರೆಯುವವರಾರು ?



೧೯೮೫ನೇ ಅಕ್ಟೋಬರ್ ೩೧ರಂದು ಜನ್ನನ ಹಣೆಯಲ್ಲಿ ಬರೆದ ಬ್ರಹ್ಮಲಿಪಿಯಲ್ಲಿ ದೊಡ್ಡದೊಂದು ಕಾಗುಣಿತದ ತಪ್ಪು ಪ್ರಕಟವಾಗಿ ಶಾಶ್ವತವಾಗಿ ಅವನು ಜೀವಂತ ಹೆಣವಾದ. ಕೆಳವರ್ಗದ ಕುಟುಂಬದ ಏಕೈಕ ಆಧಾರ ಸ್ತಂಭ ಕುಸಿಯಿತು. ತಂದೆ-ತಾಯಿ-ತಂಗಿಯರ ಬಾಳು ತತ್ತರಿಸಿತು. ವೈದ್ಯರ ಅಚಾತುರ್ಯದ ತಪ್ಪಿಗೆ ಕುಟುಂಬಕ್ಕೆ ಶಿಕ್ಷೆ ವಿಧಿಸಿದಂತಾಯಿತು. ಇಂತಹ ಆಕಸ್ಮಿಕ ವಿಪತ್ತುಗಳನ್ನು ಎದುರಿಸಲಾರದ ದುರ್ಬಲರಿಗೆ ಸಮಾಜ ನೀಡುವ ಸಾಂತ್ವನ ಅದೇ ಅಲ್ಲವೇ ? ಗ್ರಹಚಾರ ದೋಷ, ವಿಧಿಲಿಖಿತಗಳ ಸಿಹಿಮಿಶ್ರಿತ ಕಹಿಗುಳಿಗೆಗಳನ್ನು ನುಂಗಿ ತೃಪ್ತಿಪಟ್ಟುಕೊಳ್ಳದೆ ಬೇರೆ ದಾರಿಗಳೆಲ್ಲಾ ಭದ್ರವಾಗಿ ಮುಚ್ಚಿಬಿಟ್ಟಿದ್ದುವು.

ನಡೆದದ್ದೇನು ? ಮಂಗಳೂರಿನ ಐ.ಟಿ.ಐ.ಯಲ್ಲಿ ಶಿಕ್ಷಕನಾಗಿದ್ದ ಜನ್ನ ಅತ್ಯಂತ ಕ್ರಿಯಾಶೀಲ ಹಾಗೂ ಪ್ರತಿಭಾವಂತ. ಅವನ ಗಲಗಲ ಮಾತುಗಳಲ್ಲಿ ಬೆಳದಿಂಗಳ ತಂಪೂ, ಸ್ಫಟಿಕದ ಹೊಳಪೂ, ಜೇನಿನ ಸವಿಯೂ ತುಳುಕುತ್ತಿತ್ತು. ಸವಾಲುಗಳನ್ನೆದುರಿಸುವ ಚಾಣಾಕ್ಷತನ ಮತ್ತು ವಿವೇಕಗಳು ಈ ೩೨ ವರ್ಷದ ತರುಣನಲ್ಲಿ ಮೈಗೂಡಿದ್ದವು. ಯಾವುದೇ ದುರಭ್ಯಾಸಗಳಿಲ್ಲದ, ವೈಚಾರಿಕ ಪ್ರಜ್ಞೆಯುಳ್ಳ ನೀಳಕಾಯದ ಇವನ ಮುಖದಲ್ಲಿ ಎಂದೂ ನಗು ಮಾಸಿದ್ದಿಲ್ಲ. ಹೊಟ್ಟೆನೋವಿನ ಚಿಕಿತ್ಸೆಗಾಗಿ ಆಸ್ಪತ್ರೆ ಸೇರಿದಾಗ ಅವನ ಮೇದೋಜೀರಕದಲ್ಲಿ ಕಲ್ಲು ಇರುವುದು ಪತ್ತೆಯಾಗಿ ಅದನ್ನು ಕೀಳುವುದು ರೋಗಿಗೆ ಅಪಾಯವೆಂದು ಶಸ್ತ್ರಚಿಕಿತ್ಸೆ ಮಾಡಿ ತಕ್ಕಮಟ್ಟಿಗೆ ಶಮನಗೊಳಿಸಲಾಯಿತು. ಮರುವರ್ಷ ನೋವು ಮರುಕಳಿಸಿದಾಗ ನೋವಿನ ಭಾಗಕ್ಕೆ ಅರಿವಳಿಕೆ ನೀಡಿ ಶಾಂತಗೊಳಿಸಲಾಯಿತು. ಮೂರನೇ ವರ್ಷ ಮತ್ತೆ ನೋವು ಬಂದಾಗ ಅರಿವಳಿಕೆ ತಜ್ಞರು ಇಂಜೆಕ್ಷನ್ ಚುಚ್ಚುವಾಗಲೇ ಏನೋ ಎಡವಟ್ಟಾಗುತ್ತದೆ ಎಂಬ ಅರಿವಾಗಿ ಡಾಕ್ಟರುಗಳನ್ನು ಅವನು ಎಚ್ಚರಿಸಿದ. ಒಬ್ಬ ಬಡರೋಗಿಯ ಮಾತಿಗೆ ಬೆಲೆಕೊಡುವಷ್ಟು ದಡ್ಡರೇ ವೈದ್ಯರು ? ಆಗಬಾರದ್ದು ಆಗಿಯೇಬಿಟ್ಟಿತು. ಸೊಂಟದಿಂದ ಕೆಳಗಿನ ಭಾಗ ಸ್ಪರ್ಶ ಶಕ್ತಿಹೀನವಾಗಿ ನಿಷ್ಕ್ರಿಯವಾಯಿತು. ಜನ್ನ ನಿತ್ಯ ವಿಧಿಗಳನ್ನು ಪೂರೈಸಲಾಗದ, ಏಳಲಾಗದ, ಕೂರಲಾಗದ ಉಸಿರಾಡುವ ಶವದಂತಾದ. ವೈದ್ಯರಲ್ಲಿ ಪ್ರಶ್ನಿಸಿದ, ವಾದಿಸಿದ, ಪರಿಹಾರದ ದಾರಿಗಳೇನು ಎಂದು ಪರಿಶೀಲಿಸಿದ. ''ಬಿ.ಪಿ. ಏರಿದರೆ ಹೀಗೆ ಒಮ್ಮೊಮ್ಮೆ ಆಗುವುದಿದೆ. ಹೆದರಬೇಡಿ, ನಾವು ಕೈಲಾದಷ್ಟು ಪ್ರಯತ್ನಿಸುತ್ತೇವೆ'' ಎಂದು ಬೆಟ್ಟದಷ್ಟು ಭರವಸೆ ನೀಡುತ್ತಾ ಬಂದರು ವೈದ್ಯರು. ಒಂದು ವರ್ಷ, ೧೦ ತಿಂಗಳ ಕಾಲ ಏನೆಲ್ಲಾ ಥೆರಪಿಗಳ ಪ್ರಯೋಗ ಅವನ ದೇಹದ ಮೇಲೆ ನಡೆಯಿತು. ಫಲ ಮಾತ್ರ ಶೂನ್ಯ. ವೈದ್ಯರಾದರೇನು ? ಅವರೂ ಮನುಷ್ಯರಲ್ಲವೇ ? ಅಂತಃಸಾಕ್ಷಿ ಚುಚ್ಚದಿರುತ್ತದೆಯೇ ? ಔಷಧಿಯ ವೆಚ್ಚ ಹೊರತಾಗಿ ಉಳಿದ ಸೇವೆಯನ್ನು ಉಚಿತವಾಗಿಯೇ ನೀಡಿದರು. ಜನ್ನನ ಮಿತ್ರ ಬಳಗದವರು, ಸಹೋದ್ಯೋಗಿಗಳು ಅನ್ಯಾಯದ ವಿರುದ್ಧ ಕೇಸು ದಾಖಲಿಸುವ ಪ್ರಯತ್ನ ಮಾಡಿದರು. ಕೇಸು ದಾಖಲಿಸಲು ಆಧಾರವಾದ ಯಾವ ಎಳೆಗಳೂ ಕೇಸ್ ಶೀಟ್‌ನಲ್ಲಿ ಇರಲಿಲ್ಲ. ಅವರ ಪ್ರೀತಿಗೆ ಮಣಿಯುತ್ತಾ ಜನ್ನ, ''ಹಾಗೆ ಮಾಡಿದರೆ ನನ್ನ ಕಾಲುಗಳು ಮರಳಿ ಮೊದಲಿನಂತಾ ಗುತ್ತದೆಯೇ'' ಎಂದು ಪ್ರಶ್ನಿಸಿ ಅವರ ಆವೇಶವನ್ನು ಇಳಿಸಿದ. ಬಂದದ್ದನ್ನು ಎದುರಿಸುವುದೊಂದೇ ದಾರಿಯೆಂದು ಮನೆಗೆ ಮರಳಿದ.

ಪುಟ್ಟ ಮನೆಯ ಚಾವಡಿಯಲ್ಲೊಂದು ಮಂಚದ ಮೇಲೆ ವೈಚಾರಿಕ ವೈಜ್ಞಾನಿಕ, ಆಧ್ಯಾತ್ಮಿಕ ಪುಸ್ತಕಗಳನ್ನೋದತೊಡಗಿದ. ತಾಯ್ತಂದೆ ಮತ್ತು ತಂಗಿ ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಶುಶ್ರೂಷೆ ಮಾಡುತ್ತಿರುವುದನ್ನು ಕಂಡು ಕೆಲಕಾಲ ದಿಂಬು ತೋಯುವಷ್ಟು ರೋದಿಸಿದ. ಪತ್ರಿಕೆಗಳಲ್ಲಿ ಅವನ ಈ ದುಃಸ್ಥಿತಿಯ ಬಗ್ಗೆ ಲೇಖನ ಪ್ರಕಟವಾದಾಗ ಸಹೃದಯರು ಸ್ಪಂದಿಸಿ ಸಹಾಯ ನೀಡಿದಾಗಲೂ ಸ್ವಾಭಿಮಾನಿಯಾದ ಅವನಿಗೆ ತನ್ನದೂ ಒಂದು ಬದುಕೇ, ಎಂದು ಪ್ರಶ್ನಿಸುತ್ತಾ ಇಚ್ಛಾಮರಣಕ್ಕೆ ಪ್ರಯತ್ನಿಸಿದ. ಅದು ಈ ದೇಶದಲ್ಲಿ ಸಾಧ್ಯವಿಲ್ಲವೆಂಬ ಅರಿವಾಗಿ ಹುಟ್ಟುವುದು ನನ್ನ ಕೈಯಲ್ಲಿರಲಿಲ್ಲ, ಈಗ ಸಾಯುವುದು ನನ್ನ ಕೈಯಲ್ಲಿದೆ ಎಂದು ನಿರ್ಧರಿಸಿದ. ರಾತ್ರಿ ಹಗಲು ತನ್ನನ್ನು ಕಣ್ಣೆವೆಯಂತೆ ರಕ್ಷಿಸುವ ಬಂಧುಗಳ ಮಮತೆಯಿಂದಾಗಿ ಅದಕ್ಕೂ ಅವಕಾಶ ಸಿಗಲಿಲ್ಲ. ಅಪಘಾತಗಳಿಂದ ಬೆನ್ನುಹುರಿಗೆ ಪೆಟ್ಟಾಗಿ ಕೈಕಾಲುಗಳ ಸ್ವಾಧೀನ ಕಳೆದುಕೊಂಡ ಕೆಲವು ರೋಗಿಗಳೊಂದಿಗೆ ಸಂಪರ್ಕವಿರಿಸಿಕೊಂಡು ತನ್ನದೇ ರೀತಿಯಲ್ಲಿ ಎದ್ದು ನಿಲ್ಲಲು ಪ್ರಯತ್ನಿಸಿದ. ಅವರ ಸಾಹಸಗಾಥೆಗಳಿಂದ ಪ್ರೇರಣೆ ಪಡೆದ. ಆಧಾರ ನೀಡಿ ಕೂರಿಸಿದರೆ ಸಣ್ಣ ಸಣ್ಣ ಎಲೆಕ್ಟ್ರಾನಿಕ್ ಉಪಕರಣಗಳನ್ನು ರಿಪೇರಿ ಮಾಡುವ ಕೆಲಸದಲ್ಲಿ ತಲ್ಲೀನನಾದ. ಸೊಂಟದ ಮೇಲಿನ ಪ್ರತಿ ಅಂಗಾಂಗಗಳು ಸುವ್ಯವಸ್ಥೆಯಲ್ಲಿದ್ದುದರಿಂದ ಸಮಯ ಕಳೆಯಲು ಸೂಕ್ತ ವ್ಯವಸ್ಥೆ ಮಾಡಿಕೊಂಡ. ಅಳು ಬತ್ತಿತು. ಮುಖದಲ್ಲಿ ನಗು ಅರಳಿತು.

ಆದರೆ ಒಂದು ದಿನ ರಾತ್ರಿ ಅವನು ಮಲಗಿದ್ದಾಗ ಅವನ ಕಾಲುಗಳ ಬೆರಳುಗಳನ್ನು ಇಲಿ ಕಚ್ಚಿ ತಿಂದುಹಾಕಿತ್ತು. ಬೆಳಿಗ್ಗೆ ಎದ್ದ ತಾಯಿಗೆ ಅವನ

**ನನ್ನ ಜೀವನದ ಘಟನೆ ನೆನಪಾಗುತ್ತದೆ. ಮೂಗು ಆಪರೇಶನ್‌ಗೆಂದು ಹೋದವಳು ಓ.ಟಿ.ಯಿಂದ ಹೊರಬರುವಾಗ ಕಾಲು ಸುಟ್ಟು ಬೊಕ್ಕೆಗಳು ಎದ್ದಿದ್ದವು. ಅರ್ಥಿಂಗ್ ಕೊಡುವ ಉಪಕರಣವನ್ನು ಪ್ರಜ್ಞೆಯಿಲ್ಲದ ವೈದ್ಯರು ನನ್ನ ಕಾಲಡಿಯಲ್ಲಿಟ್ಟು ಸುಟ್ಟುಬಿಟ್ಟಿದ್ದರು. ನಿರ್ಲಕ್ಷಿಸಿದ ವೈದ್ಯರ ಅಪರಾಧ ನನ್ನನ್ನು ಎರಡು ತಿಂಗಳು ನರಳುವಂತೆ ಮಾಡಿತು. ಪ್ರಶ್ನೆ ಅದಲ್ಲ. ಪುನಃ ಚಿಕಿತ್ಸೆಗೆ ಅವರ ಬಳಿಗೇ ಹೋದಾಗ ಆ ನುರಿತ (?) ವೈದ್ಯರು ನೀಡಿದ ಉತ್ತರ ನನ್ನನ್ನು ದಂಗುಬಡಿಸಿತು. ಹೆರದವರಿಗೆ ನೋವನ್ನು ಸಹಿಸುವ ಶಕ್ತಿಯಿಲ್ಲವಂತೆ. ಹೀಗೂ ಒಬ್ಬ ವೈದ್ಯರು ಮೂರ್ಖತನ ಪ್ರದರ್ಶಿಸಿಯಾರೇ ?**

ಬಿ. ಎಂ. ರೋಹಿಣಿ

# ಮೇ - ಒಂದು



**ಮೇ** - ಒಂದು, ಅದೊಂದೇ ದಿನವಲ್ಲ, ಕಾರ್ಮಿಕರ ದಿನ
ಪ್ರತಿದಿನ, ಪ್ರತಿಕ್ಷಣ, ಅವರು ನಮಗೆ ನೀಡಿದ ದಾನ

ದಿನದ ಆಯುಷ್ಯ, ಮೇಲದರ ಭವಿಷ್ಯಕೆ ನಾಂದಿ ಅವರಣ್ಣ
ಈ ಯುಗ ಅವರದು, ಈ ಜಗ ಅವರದು, ಅವರೇ ದಿನಮಾನ

ಮೇ - ಒಂದು, ಅದೊಂದೇ ದಿನವಲ್ಲ ಶ್ರಮಿಕರ ದಿನ
ಅರಳುವ ಸುಖ ಪುಷ್ಪಕೆ, ಅವರ ಶ್ರಮವೇ ತಾಯಿಬೇರು

ಅವರು ಹರಿಯುವ ನದಿಯ ಉಸಿರು, ಹರಡಿದ ಭೂಮಿಯ ಹಸಿರು
ಅವರಿಂದ ಜಗದ ಉತ್ಥಾನ, ಮಹಾಪ್ರಸ್ಥಾನ, ಮಾನ, ಸನ್ಮಾನ

ಮೇ - ಒಂದು, ಅದೊಂದೇ ದಿನವಲ್ಲ ಶ್ರಮಿಕರ ದಿನ
ಸೃಜನ ಅವರು, ಸೃಷ್ಟಿ ಅವರು, ಸಕಲ ವಸ್ತು ಸೌಂದರ್ಯ ಅವರು

ಅಜೇಯ ಅವರು, ಅನಂತ ಅವರು, ಅಖಂಡ ಜೀವಧಾರೆ ಅವರು
ಶ್ರಮಿಕರ ಕಾಯಕ್ಕೆ ಕಾಯಕವೇ ಸಿಂಗಾರ, ಬಸಿವ ಬೆವರು ಬಂಗಾರ

ಅವರ ಮಂದಹಾಸವೊಂದು ಛಂದಸ್ಸು ಶ್ರಮಕಾವ್ಯದ ಯಶಸ್ಸು
ಅವರೇ ಭವಿಷ್ಯದ ನಿಧಿ, ಆದಿ, ಅನಾದಿ, ಯುಗದಾದಿ

ಮೇ - ಒಂದು, ಅದೊಂದೇ ದಿನವಲ್ಲ, ಶ್ರಮಿಕರ ದಿನ
ಪ್ರತಿದಿನ, ಪ್ರತಿಕ್ಷಣ ಅವರು ನಮಗೆ ನೀಡಿದ ದಾನ

**ಜಂಬಣ್ಣ ಅಮರಚಿಂತ**
ನಂ. ೮-೧೧(೮)/೭೯೬, ವಿದ್ಯಾನಗರ, ರಾಯಚೂರು - ೫೮೪ ೧೦೩

ಮಂಚದಲ್ಲಿ ರಕ್ತ ಕಂಡು ಕಿರುಚಿದಾಗಲೇ ಅವನಿಗೆ ತಿಳಿದದ್ದು. ಕೂಡಲೇ ಅದಕ್ಕೆ ಶುಶ್ರೂಷೆಯನ್ನೇನೋ ನೀಡಿದರು. ಆ ಬಳಿಕ ಜನ್ನ ಖಿನ್ನನಾಗುತ್ತಾ ಹೋದ. ಒಂದು ದಿನ ರಾತ್ರಿ ಬ್ಲೇಡಿನಿಂದ ತನ್ನ ಕೈಯ ರಕ್ತನಾಳವನ್ನು ಸಿಗಿದು ಆತ್ಮಹತ್ಯೆಗೆ ಪ್ರಯತ್ನಿಸಿದ. ಅದೂ ಫಲಕಾರಿಯಾಗದೆ ಕೂಡಲೇ ಆಸ್ಪತ್ರೆಗೆ ಸಾಗಿಸಿದ್ದರಿಂದ ಯಮ ಅವನನ್ನು ಬಿಸಾಡಿಹೋದ. ಹೀಗೆ ಕ್ಷಣಗಳನ್ನು ಯುಗಗಳಾಗಿ ಎಣಿಸುತ್ತಾ ಜನ್ನನ ಬಾಳಬಂಡಿ ತೆವಳುತ್ತಾ ಸಾಗುತ್ತಿತ್ತು. ಆರೋಗ್ಯವಾಗಿದ್ದ ಅವನ ತಂದೆ ನಿಧನರಾದರು. ತಂಗಿ ಮದುವೆಯಾದರೂ ಅಣ್ಣನ ಆರೈಕೆಗಾಗಿ ತವರಿನಲ್ಲೇ ಉಳಿದಳು. ಸರಕಾರೀ ಕೆಲಸದಿಂದ ಅವನನ್ನು ನಿವೃತ್ತಿಗೊಳಿಸಬೇಕಾದ ಕಡತಗಳ ಹಿಂದೆ ಅವಳೇ ಓಡಾಡಿದಳು. ೧೩ ವರ್ಷ ಸೇವೆಯಲ್ಲಿದ್ದ ಅವನಿಗೆ ನಿವೃತ್ತಿ ವೇತನವೂ ದಕ್ಕದು. ಅದು ಸರಕಾರಿ ನಿಯಮ. ಆದರೆ ಸರಕಾರದಲ್ಲೂ ಒಬ್ಬಿಬ್ಬರು ಹೃದಯವಂತ ಅಧಿಕಾರಿಗಳಿದ್ದುದರಿಂದ ತಮ್ಮ ಅಧಿಕಾರದ ಬಲದಿಂದ ೨೦ ವರ್ಷ ಸೇವೆ ಸಲ್ಲಿಸಿದ್ದಾನೆಂದು ಷರಾ ಬರೆದು ಅವನು ಬದುಕಿರುವಷ್ಟು ಕಾಲ ತುಸು ನೆಮ್ಮದಿಯಿಂದ ಬದುಕುವಂತೆ ಮಾಡಿದರು. ಈ ಸ್ಥಿತಿಯಲ್ಲಿ ೧೩ ವರ್ಷ ನರಳಿ ೧೯೯೮ರಲ್ಲಿ ಜನ್ನ ಮರಣಹೊಂದಿದ. ಅವನೂ ಅವನ ಮನೆಯವರೂ ಅನುಭವಿಸಿದ ನೋವುಗಳಿಗೆ ಕಾರಣರಾರು? ಉತ್ತರವಿಲ್ಲದ ಪ್ರಶ್ನೆಗಳಿಗೆ ಪೂರ್ವಜನ್ಮದ ಪಾಪಕರ್ಮದ ಫಲವೆಂದು ಉತ್ತರಿಸಿ ತಪ್ಪುಗಳನ್ನೇಕೆ ತಿಪ್ಪೆ ಸಾರಿಸಬೇಕು? ಈ ಪ್ರಶ್ನೆಗಳು ಸದಾ ಅವನನ್ನು ಕಾಡುತ್ತಿದ್ದುವು. ಒಮ್ಮೆ ಅವನ ಹಿತೈಷಿಗಳೊಬ್ಬರು ಪ್ರಾರ್ಥನಾ ಕೂಟವೊಂದರಲ್ಲಿ ರೋಗಿಗಳು ಪವಾಡ ರೂಪದಲ್ಲಿ ಗುಣಮುಖರಾಗುತ್ತಾರೆಂದು ಅವನನ್ನು ಬಹಳ ಒತ್ತಾಯಿಸಿದರು. ಜನ್ನನ ಅಡ್ಡ ಮಾತುಗಳನ್ನೆಲ್ಲಾ ತಳ್ಳಿ ಹಾಕಿ ಪ್ರಾರ್ಥನಾ ಕೂಟವೂ ನಡೆಯಿತು. ಒಂದು ವಾರ ಕಳೆಯಬೇಕಾದರೆ ಊರಲ್ಲಿ ಸುದ್ದಿ: ಜನ್ನ ಈಗ ನಡೆಯುತ್ತಾನಂತೆ. ಸುದ್ದಿ ತಿಳಿದ ಮಿತ್ರರಿಗೆ ಸಂಭ್ರಮವೋ ಸಂಭ್ರಮ. ಅವನ ಸ್ಥಿತಿಯಲ್ಲಿ ಎಳ್ಳಷ್ಟೂ ಸುಧಾರಣೆ ಕಾಣದ ನಮಗೆ ಹೀಗೂ ಉಂಟೇ ಎಂಬ ವಿಸ್ಮಯ. ಆಸರೆಗಾಗಿ ದೇವರಲ್ಲಿ ಆಕ್ರಂದಿಸುವವರಿಗೆ ಎಲ್ಲಾದರೂ ಒಂದು ಹುಲ್ಲುಕಡ್ಡಿಯ ಆಸರೆ ಸಿಗುತ್ತದೆಯೇ ಎಂಬ ಆಸೆ ಸಹಜ. ಒಬ್ಬ ದೇವರು ಶಿಕ್ಷೆ ಕೊಟ್ಟದ್ದನ್ನು ಇನ್ನೊಬ್ಬನು ಪರಿಹರಿಸುವನೆಂಬ ಒಪ್ಪಂದ ಅವರೊಳಗೆ ಆಗಿದೆಯೇ? ಹೀಗೆ ದೇವರುಗಳು ಮಾನವನ ಬದುಕಿನಲ್ಲಿ ಚೆಲ್ಲಾಟವಾಡಿಯಾರೇ? ಇಲ್ಲ, ದೇವರನ್ನು ಇಷ್ಟು ಕೇವಲವಾಗಿ ಕಂಡು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವವರಿಂದಾಗಿ ಮಧ್ಯವರ್ತಿಗಳಾದ ಬಾಬಾಗಳಿಗೆ, ಸಂನ್ಯಾಸಿಗಳಿಗೆ, ಸಾಧುಗಳಿಗೆ ನಿಶ್ಚಿಂತೆಯಿಂದ ಬದುಕಲು ನಾವೇ ವ್ಯವಸ್ಥೆ ಮಾಡಿಕೊಟ್ಟಿದ್ದೇವಲ್ಲವೇ? ತಪ್ಪಿತಸ್ಥರನ್ನು ರಕ್ಷಿಸುವ ತಂತ್ರವಿದಲ್ಲವೇ?

ಇದೇ ಹೊತ್ತಿನಲ್ಲಿ ನನ್ನ ಜೀವನದ ಘಟನೆಯೂ ನೆನಪಾಗುತ್ತದೆ. ಮೂಗು ಆಪರೇಶನ್‌ಗೆಂದು ಹೋದವಳು ಓ.ಟಿ.ಯಿಂದ ಹೊರಬರುವಾಗ ಕಾಲು ಸುಟ್ಟು ಬೊಕ್ಕೆಗಳು ಎದ್ದಿದ್ದವು. ಅರ್ಥಿಂಗ್ ಕೊಡುವ ಉಪಕರಣವನ್ನು ಪ್ರಜ್ಞೆಯಿಲ್ಲದ ವೈದ್ಯರು ನನ್ನ ಕಾಲಡಿಯಲ್ಲಿಟ್ಟು ಸುಟ್ಟುಬಿಟ್ಟಿದ್ದರು. ನಿರ್ಲಕ್ಷಿಸಿದ ವೈದ್ಯರ ಅಪರಾಧ ನನ್ನನ್ನು ಎರಡು ತಿಂಗಳು ನರಳುವಂತೆ ಮಾಡಿತು. ಪ್ರಶ್ನೆ ಅದಲ್ಲ, ಪುನಃ ಚಿಕಿತ್ಸೆಗೆ ಅವರ ಬಳಿಗೇ ಹೋದಾಗ ಆ ನುರಿತ (?) ವೈದ್ಯರು ನೀಡಿದ ಉತ್ತರ ನನ್ನನ್ನು ದಂಗುಬಡಿಸಿತು. ಹೆರದವರಿಗೆ ನೋವನ್ನು ಸಹಿಸುವ ಶಕ್ತಿಯಿಲ್ಲವಂತೆ. ಹೀಗೂ ಒಬ್ಬ ವೈದ್ಯರು ಮೂರ್ಖತನ ಪ್ರದರ್ಶಿಸಿಯಾರೇ? ಕಾದ ಸಟ್ಟುಗ ತಂದು ನಿಮ್ಮ ಕಾಲಿಗೆ ಇಡಲೇ? ನೀವೂ ಹೆರದವರೇ ಅಲ್ಲವೇ – ಎಂದು ಪ್ರಶ್ನಿಸಿದರೆ ತಪ್ಪೇನು? ರೋಗಿಯ ಅಂಗಗಳ ಮೇಲೆ ವೈದ್ಯರು ಹೀಗೆ ಅತ್ಯಾಚಾರ ಮಾಡಬಹುದೇ? ಹೋಗಲಿ. ತಮ್ಮಿಂದ ತಪ್ಪಾಗಿದೆಯೆಂದು ತಿಳಿದೂ ಅದನ್ನು ರೋಗಿಯ ತಲೆಗೆ ಕಟ್ಟಬಹುದೇ? ಅವರೂ ಮನುಷ್ಯರೇ ಆದುದರಿಂದ ಅಚಾತುರ್ಯಗಳು ಸಂಭವಿಸಬಹುದು ಎಂದು ಒಪ್ಪೋಣ. ಜನ್ನನ ಪ್ರಕರಣದಲ್ಲಿ ಅಪರಾಧದ ಸಾಕ್ಷ್ಯಗಳನ್ನೆಲ್ಲಾ ನಾಶಮಾಡಿದ ವೈದ್ಯರು ನನ್ನ ಪ್ರಕರಣದಲ್ಲಿ ಸಾಕ್ಷಿಯನ್ನೇ ಬಲಿಯಾಗಿಸಲು ಪ್ರಯತ್ನಿಸಿದರು. ಇಂತಹ ಒಬ್ಬಿಬ್ಬ ವೈದ್ಯರಿಂದ ವೈದ್ಯರ ಸಮೂಹವನ್ನೇ ಸಂದೇಹಿಸುವಂತಾಗುತ್ತದೆ. ಪವಿತ್ರ ವೃತ್ತಿಯೆಂಬ ಗೌರವ ಉಳ್ಳ ಈ ವೃತ್ತಿ ಒಂದು ಉದ್ಯಮವಾಗಿ ಬೆಳೆಯುತ್ತಿರುವುದು ಎಲ್ಲರಿಗೂ ಗೊತ್ತೇ ಇದೆ. ಬಡಜನರು, ಕಾಣದ ನಾರಾಯಣ ದೇವರನ್ನು ನಂಬಬೇಕೆ, ಕಾಣುವ ವೈದ್ಯ ನಾರಾಯಣನನ್ನು ನಂಬಬೇಕೆ, ಎಂಬ ಗೊಂದಲದಲ್ಲಿದ್ದಾರೆ.

**ಬಿ. ಎಂ. ರೋಹಿಣಿ**
ಪಂಚಾಯತ್ ಕಚೇರಿ ಬಳಿ, ಕುಡುಪು, ಮಂಗಳೂರು - ೫೭೫ ೦೨೮

# ಪಂಚಪಾಂಡವರು ಮತ್ತು ಯಕ್ಷ

ಹಿಂದಿ ಮೂಲ : **ಡಾ|| ಹರಿಕೃಷ್ಣ ದೇವಸರೆ**     ಕನ್ನಡಕ್ಕೆ : **ಡಾ|| ಪಂಚಾಕ್ಷರಿ ಹಿರೇಮಠ**

ಆ ಐವರೂ ಶಾಲೆಯಲ್ಲಿ ಪಂಚಪಾಂಡವರ ಹಾಗೆಯೇ ಇದ್ದರು. ಹೆಸರು ಕೂಡ ಹಾಗೆಯೇ. ಯುಧಿಷ್ಠಿರ ಕುಮಾರ, ಅರ್ಜುನ ಸಿಂಹ, ಭೀಮರಾಜ, ನಕುಲ ಚಂದ್ರ, ಹಾಗೂ ಸಹದೇವ ಪ್ರಸಾದ. ಇನ್ನೂ ವಿಚಿತ್ರವೆಂದರೆ ಅವರೆಲ್ಲ ಒಂದೇ ವರ್ಗದ ವಿದ್ಯಾರ್ಥಿಗಳಾಗಿದ್ದುದು. ಮುಂದಿನ ಸೀಟುಗಳೂ ಅವರಿಗಾಗಿ ಮೀಸಲಾಗಿದ್ದುವು. ವರ್ಗದ ಪ್ರಥಮ ಶ್ರೇಣಿಯ ವಿದ್ಯಾರ್ಥಿಗಳೂ ಅವರೇ ಆಗಿರುತ್ತಿದ್ದರು. ಆಟ-ಪಾಠಗಳಲ್ಲೂ ಅವರೇ ಮುಂದಿರುತ್ತಿದ್ದರು. ಐದೂ ಜನ ಕೂಡಿಯೇ ಇರುತ್ತಿದ್ದರು. ಸ್ಕೂಲಿನಲ್ಲಿ ಅವರದೇ ದರ್ಬಾರು. ಬೇರೆಯವರು ಈ ಮಂಡಲಿಯಲ್ಲಿ ಸೇರಲು ಸಾಧ್ಯವೇ ಇರಲಿಲ್ಲ. ಓರ್ವ ಹೊಸಬ ಇವರ ವರ್ಗದ ವಿದ್ಯಾರ್ಥಿಯಾಗಿ ಬಂದ. ಇವರ ಸ್ನೇಹ ಬೆಳೆಸಲು ಪ್ರಯತ್ನಿಸಿದ. ಆದರೆ ಈ ಪಂಚ ಪಾಂಡವರು ಅವನೊಂದಿಗೆ ಮಾತನಾಡುವುದಿರಲಿ, ಅವನ ಹೆಸರೇನೆಂದು ಕೂಡ ಕೇಳಲಿಲ್ಲ.

ರಜೆ ಬಂದಾಗ ಒಂದು ದಿನ ಈ ಪಂಚಪಾಂಡವರು ಪಿಕ್‌ನಿಕ್ ಹೋಗುವ ಕಾರ್ಯಕ್ರಮ ಹಾಕಿಕೊಂಡರು. ನಕುಲಚಂದ್ರನಿಗೆ ಕಾರು ನಡೆಸಲು ಬರುತ್ತಿತ್ತು. ಆದರೆ ಲೈಸೆನ್ಸ್ ಇರಲಿಲ್ಲ. ಅವರ ತಂದೆ ಬಹಳ ಕೇಳಿಕೊಂಡ ಮೇಲೆ ಕಾರು ಕೊಡಲೊಪ್ಪಿದ. ಕಾರಿನಲ್ಲಿ ಈ ಐದೂ ಜನ ಪಿಕ್‌ನಿಕ್ ಸ್ಥಳ ತಲುಪಿದರು. ಈ ಸ್ಥಳ ಕಾಡು ಹಾಗೂ ಗುಡ್ಡಬೆಟ್ಟಗಳಿಂದ ಸುತ್ತುವರಿದಿತ್ತು. ಕಾರನ್ನು ಒಂದೆಡೆ ನಿಲ್ಲಿಸಿ ಅತ್ತಿತ್ತ ತಿರುಗಾಡತೊಡಗಿದರು. ತಿರುಗಾಟ ಓಡಾಟಗಳಿಂದ ದಣಿವಾಗಿ ಒಂದೆಡೆ ಪ್ರಶಸ್ತವಾಗಿದ್ದ ಸ್ಥಳದಲ್ಲಿ ಜಮಖಾನ ಹಾಸಿದರು. ಅದರ ಮೇಲೆ ಹಾಯಾಗಿ ಕುಳಿತು ಇಸ್ಪೀಟು ಆಡತೊಡಗಿದರು. ಮಧ್ಯಾಹ್ನ ಆದಂತೆ ಆಟ ನಿಲ್ಲಿಸಿ ಕಾರಿನಲ್ಲಿಟ್ಟಿದ್ದ ಬುತ್ತಿ ಹೊರತಂದು ಹೊಟ್ಟೆ ತುಂಬ ಐವರೂ ಊಟ ಮಾಡಿದರು. ಆದರೆ ನೀರು ? ಹೊರಡುವ ಅವಸರದಲ್ಲಿ ಅವರು ನೀರು ತರುವುದನ್ನೇ ಮರೆತಿದ್ದರು. ಆಗ ಯುಧಿಷ್ಠಿರ ಹೇಳಿದ, ''ಬಂಧು ಸಹದೇವ, ಇಲ್ಲೇ ಸಮೀಪದಲ್ಲಿ ಗುಡ್ಡದ ಮೇಲಿಂದ ನೀರಿನ ಝರಿ ಹರಿಯುತ್ತಿದೆ. ತಂಬಿಗೆ ತೆಗೆದುಕೊಂಡು ಹೋಗಿ ನೀರು ತುಂಬಿಕೊಂಡು ಬಾ.''



ಸಹದೇವ ತಂಬಿಗೆ ತೆಗೆದುಕೊಂಡು ನೀರು ತರಲು ಹೋದ. ಹೋದವನು ತುಂಬ ಹೊತ್ತಾದರೂ ಮರಳಿಬರಲೇ ಇಲ್ಲ, ನಕುಲನಿಗೆ ಸಿಟ್ಟುಬಂತು. ಅವನು, ''ಸಹದೇವನ ಈ ಚಾಳಿ ತುಂಬ ಕೆಟ್ಟದ್ದು. ಎಲ್ಲಿಗಾದರೂ ಹೋದನೋ ಬೇಗ ಬರುವುದೇ ಇಲ್ಲ, ಮಹಾರಾಯ. ತಡೆಯಿರಿ, ನಾನು ಹೋಗಿ ಕರೆದುಕೊಂಡು ಬರುವೆ'' ಎನ್ನುತ್ತ ನಕುಲ ಅಲ್ಲಿಂದ ಹೊರಟೇಬಿಟ್ಟ.

ಹೀಗೆ ಹೋದ ನಕುಲನೂ ಮರಳದಿದ್ದಾಗ ಅರ್ಜುನನೇ ಹೋದ. ಅವನೂ ಬರದಿದ್ದಾಗ ಭೀಮ ಹೋದ. ಬಹಳ ಹೊತ್ತಾದರೂ ಹೋದವರಾರೂ ಬರದಿದ್ದಾಗ ಯುಧಿಷ್ಠಿರನಿಗೆ ಚಿಂತೆ ಆವರಿಸಿತು. ಕೊನೆಗೆ ಆತನೂ ನೀರಿನ ಝರಿಯಿದ್ದ ಕಡೆ ಸಾಗಿದ. ಅಲ್ಲಿಗೆ ತಲುಪಿ ಅಲ್ಲಿಯ ದೃಶ್ಯ ಕಂಡು ಅವನು ಚಕಿತಗೊಂಡ. ನಾಲ್ವರು ಸೋದರರೂ ನೆಲದ ಮೇಲೆ ಮಲಗಿದ್ದರು. ಮಹಾಭಾರತದ ಪುನರಾವೃತ್ತಿ ಆಗುತ್ತಲಿದೆಯೇ ಎಂದೆನಿಸಿತು ಅವನಿಗೆ. ಆದರೆ ಆತನಿಗೆ ಯಕ್ಷನ ಪ್ರಶ್ನೆ ಮತ್ತು ಧರ್ಮರಾಜ ಯುಧಿಷ್ಠಿರನ ಉತ್ತರ ಗೊತ್ತಿಲ್ಲ. ಅವನು ಯೋಚನೆಯಲ್ಲಿರುವಂತೆಯೇ ಎಲ್ಲಿಂದಲೋ ಧ್ವನಿಯೊಂದು ಕೇಳಿಬಂತು : ''ಯುಧಿಷ್ಠಿರ, ನಿನ್ನ ಈ ಸೋದರರಿಗೆ ಏನಾಗಿದೆಯೆಂದು ಯೋಚನೆಗೀಡಾಗಿರಬೇಕು, ಅಲ್ಲವೇ ? ಇವರು ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರ ಹೇಳದೆ ನೀರು ತೆಗೆದುಕೊಳ್ಳಲಿಚ್ಛಿಸಿದರು. ನೀನು ಕೂಡ ನನ್ನ ಪ್ರಶ್ನೆಗೆ ಉತ್ತರಿಸದೆ ಹೋದರೆ ನಿನ್ನ ಸ್ಥಿತಿಯೂ ಹೀಗೆಯೇ ಆಗುತ್ತದೆ.''

ಆಗ ಯುಧಿಷ್ಠಿರ, ''ಆದರಿದು ಮಹಾಭಾರತದ ಕಾಲವಲ್ಲ, ನಿನ್ನ ಹಳೆಯ ಪ್ರಶ್ನೆಗಳಿಗೆ ಹೊಸ ಉತ್ತರ ನೀನು ಸ್ವೀಕರಿಸಬಲ್ಲೆಯಾ ?'' ಎಂದು ಕೇಳಿದ.

ಆಗ ಯಕ್ಷ, ''ಪ್ರಶ್ನೆಗಳು ಒಂದೇ ರೀತಿಯಾಗಿರುತ್ತವೆ. ಅವುಗಳ ಉತ್ತರ ಮಾತ್ರ ಬದಲಿಯಾಗುತ್ತಲಿರುತ್ತವೆ'' ಎಂದ.

''ಸರಿ. ಹಾಗಾದರೆ ನೀನು ಪ್ರಶ್ನೆ ಕೇಳಬಹುದು'' ಎಂದ ಯುಧಿಷ್ಠಿರ. ನಂತರ ಪ್ರಶ್ನೆ - ಉತ್ತರ ಆರಂಭವಾದವು.

ಯಕ್ಷ : ''ಧರ್ಮ ಅಂದರೇನು ?''

ಯುಧಿಷ್ಠಿರ : ''ಲೌಡ್‌ಸ್ಪೀಕರಗಳಲ್ಲಿ ಉಪದೇಶ ನೀಡುವುದು. ಕೀರ್ತನೆ ಮಾಡುವುದು. ಮಲಗಿದ್ದವರ ನಿದ್ರೆ ಕೆಡಿಸುವುದು. ಮಕ್ಕಳ ಓದಿನಲ್ಲಿ ತೊಂದರೆ ಉಂಟುಮಾಡುವುದು.''

ಯಕ್ಷ : ''ಸತ್ಯ ಯಾವುದು ? ಸುಳ್ಳು ಯಾವುದು ?''

ಯುಧಿಷ್ಠಿರ : ''ಯಾವ ಮಾತಿನ ಬಗ್ಗೆ ಸಾಕ್ಷಿ ಸಿಗುತ್ತದೆಯೋ ಅದು ಸತ್ಯ, ಯಾವುದರ ಬಗ್ಗೆ ಸಾಕ್ಷಿ ಸಿಗುವುದಿಲ್ಲವೋ ಅದು ಸುಳ್ಳು.''

ಯಕ್ಷ : ''ಗುರು ಯಾರು ಶಿಷ್ಯ ಯಾರು ?''

ಯುಧಿಷ್ಠಿರ : ''ವೇತನ ಪಡೆದು ಓದಿಸುವಾತ ಗುರು, ಫೀ ಕೊಟ್ಟು ಓದುವಾತ ಶಿಷ್ಯ.''

ಯಕ್ಷ: ''ವಿದ್ಯೆ ಯಾವುದು ? ಪರೀಕ್ಷೆ ಯಾವುದು ?''

ಯುಧಿಷ್ಠಿರ : ''ಪಠ್ಯಪುಸ್ತಕಗಳ ಹೊರೆ ವಿದ್ಯೆ. ಪ್ರಶ್ನೆಪತ್ರಿಕೆಗಳ ಲಾಟರಿ, ಪರೀಕ್ಷೆ.''

ಯಕ್ಷ: ''ಶ್ರೀಮಂತ ವ್ಯಕ್ತಿ ಸಾವಿಗಿಂತಲೂ ಹೆಚ್ಚಾಗಿ ಯಾರಿಗೆ ಹೆದರುತ್ತಾನೆ ?''

ಯುಧಿಷ್ಠಿರ : ''ಇನ್‌ಕಮ್ ಟ್ಯಾಕ್ಸ್ ಆಫೀಸರನಿಗೆ.''

ಯಕ್ಷ: ''ಮೂರು ರೆಕ್ಕೆಗಳಿರುವ ಹಾಗೂ ತಲೆಯ ಮೇಲೆ ತಿರುಗುವ ಪಕ್ಷಿ ಯಾವುದು ?''

ಯುಧಿಷ್ಠಿರ : ''ಫ್ಯಾನು.''

ಯಕ್ಷ: ''ಬಾಲವಿಲ್ಲದಿದ್ದರೂ ಬಾಲ ಅಲುಗಾಡಿಸುವರಾರು ?''

ಯುಧಿಷ್ಠಿರ : ''ಪರಾಕು ಹಾಕುವವ.''

ಯಕ್ಷ: ''ತನ್ನ ವಚನಕ್ಕೆ ಬದ್ಧನಾಗದೇ ಇರುವವನಾರು ?''

ಯುಧಿಷ್ಠಿರ : ''ನೇತಾ''

ಯಕ್ಷ: ''ಕೇಳುವಾಗ ಕೈಜೋಡಿಸುತ್ತಾನೆ. ಸಿಕ್ಕ ನಂತರ ಕೊಟ್ಟವನನ್ನು ಮರೆಯುತ್ತಾನೆ. ಆ ವಸ್ತು ಯಾವುದು ?''

ಯುಧಿಷ್ಠಿರ : ''ಓಟು.''

ಯಕ್ಷ: ''ಸಾಲ ಕೊಟ್ಟು ಮರಳಿ ಅಸಲನ್ನು ಬೇಡದವನು ಯಾರು ?''

ಯುಧಿಷ್ಠಿರ : ''ಬಡ್ಡಿ ವ್ಯವಹಾರ ಮಾಡುವವ. ಏಕೆಂದರೆ ಅವನು ಕೇವಲ ಬಡ್ಡಿಯನ್ನು ಮಾತ್ರ ಬೇಡುತ್ತಾನೆ.''

ಯಕ್ಷ: ''ನಿನ್ನ ಎಲ್ಲ ಉತ್ತರದಿಂದ ನಾನು ಪ್ರಭಾವಿತ ಹಾಗೂ ಸಂತುಷ್ಟನಾಗಿದ್ದೇನೆ. ನಿನ್ನ ಬಂಧುಗಳು ಯಾರೂ ಸತ್ತಿಲ್ಲ. ಕೇವಲ ನನ್ನ ಆದೇಶದಂತೆ ಸತ್ತವರ ಹಾಗೆ ಮಲಗುವ ನಾಟಕ ಮಾಡಿದ್ದಾರೆ. ನನ್ನ ಆಜ್ಞೆ ಪಡೆದ ನಂತರವೇ ಅವರು ಮೇಲೇಳುತ್ತಾರೆ. ಇವರಲ್ಲಿ ಯಾರನ್ನಾದರೊಬ್ಬರನ್ನು ನಾನು ಎಬ್ಬಿಸಬಲ್ಲೆ.''

ಯುಧಿಷ್ಠಿರ : ''ನಕುಲನನ್ನು ಎಬ್ಬಿಸು. ಏಕೆಂದರೆ ಕಾರು ನಡೆಸಲು ಅವನಿಗೆ ಮಾತ್ರ ಬರುತ್ತದೆ. ಅವನು ನಮ್ಮೆಲ್ಲರನ್ನು ಕಾರಿನಲ್ಲಿ ಮನೆ ತಲುಪಿಸಬಲ್ಲ.''

ಯಕ್ಷ ಈ ಮಾತನ್ನು ಕೇಳುತ್ತಲೇ ಅಟ್ಟಹಾಸದಿಂದ ಕೇಕೆ ಹಾಕುತ್ತ ಬಂಡೆಗಲ್ಲಿನ ಮರೆಯಿಂದ ಹೇಳಿದ – ''ಯುಧಿಷ್ಠಿರ, ನೀನು ನಿಜವಾಗಲೂ ಬುದ್ಧಿವಂತ. ಆದರೆ ಕಾರಿನ ಕೀಲಿಕೈಯನ್ನು ಈ ಮೊದಲೇ ಆ ಕಲ್ಲಿನ ಕೆಳಗೆ ಇರಿಸಿದ್ದೇನೆ. ನಕುಲ ಅಪರಾಧಿಯೆಂಬುದು ನಿನಗೆ ಗೊತ್ತಿದೆಯೇ ? ಅವನು ಲೈಸೆನ್ಸ್ ಇಲ್ಲದೆ ಕಾರು ನಡೆಸಿಕೊಂಡು ಬಂದಿದ್ದಾನೆ.''

''ಈ ಸಲ ಅವನನ್ನು ಕ್ಷಮಿಸಿಬಿಡಿ. ಮುಂದೆ ಹೀಗಾಗದಂತೆ ನೋಡಿಕೊಳ್ಳಲಾಗುವುದು.

''ಆದರೆ ನಾನು ಕೀಲಿಕೈಯನ್ನು ಒಂದು ಕರಾರಿನ ಮೇಲೆ ಮಾತ್ರ ಕೊಡುವೆ. ಆ ಕರಾರು ಏನೆಂದರೆ ನೀವು ನನ್ನನ್ನು ನಿಮ್ಮ ಮಂಡಲಿಯಲ್ಲಿ ಸೇರಿಸಿಕೊಳ್ಳಬೇಕು.''

''ಅದು ಸರಿ, ಆದರೆ ನೀನು ಯಾರು ?''

''ನಾನು ಯಕ್ಷ. ನೀನು ವಚನಕೊಟ್ಟರೆ ನಿನ್ನೆದುರಿಗೆ ಪ್ರತ್ಯಕ್ಷನಾಗುವೆ.''

''ನೀನು ಎಲ್ಲರನ್ನೂ ಎಚ್ಚರಗೊಳಿಸಿದರೆ ನಾನು ನಿನ್ನನ್ನು ಸ್ನೇಹಿತನೆಂದು ಒಪ್ಪಿಕೊಳ್ಳುವೆ.''

''ಹಾಗೇ ಆಗಲಿ. ಎಲ್ಲ ಪಾಂಡವರು ಎದ್ದೇಳಿ. ಇದು ನನ್ನ ಆದೇಶವಾಗಿದೆ. ಕಲ್ಲಿನ ಮರೆಯಲ್ಲಿರುವ ಕಾರಿನ ಕೀಲಿಕೈ ತೆಗೆದುಕೊಳ್ಳಿ. ನಾನು ಪ್ರತ್ಯಕ್ಷನಾಗುತ್ತಿದ್ದೇನೆ.''

ಯಕ್ಷ ಪ್ರತ್ಯಕ್ಷನಾಗುವ ಹಾದಿ ನೋಡತೊಡಗಿದರು ಎಲ್ಲರೂ. ನೀರಿನ ಝರಿ ಇದ್ದ ಬೆಟ್ಟದ ತುದಿಯಲ್ಲಿರುವ ಬಂಡೆಗಲ್ಲಿನ ಮರೆಯಿಂದ ಯಕ್ಷ ಬರುವುದನ್ನು ನೋಡುತ್ತಾರೆ. ತೀರ ಹತ್ತಿರ ಬಂದು ಎಲ್ಲರ ಕೈ ಕುಲುಕುತ್ತ, ''ನನ್ನೀ ನಾಟಕ ನಿಮಗೆಲ್ಲ ಹೇಗೆನ್ನಿಸಿತು. ನಾನು ಯಾರೆಂದು ಗುರುತಿಸಬಲ್ಲಿರಾ ? ನಿಮ್ಮ ಕ್ಲಾಸ್‌ಮೇಟ್. ಹೊಸದಾಗಿ ಬಂದವನು. ನನ್ನ ಹೆಸರು ರಮೇಶಚಂದ್ರ ಯಕ್ಷ. ಇನ್ನು ಮೇಲಾದರೂ ನಿಮ್ಮ ಮಂಡಲಿಯಲ್ಲಿ ನನ್ನ ಸೇರಿಸಿಕೊಳ್ಳಿ. ಮಹಾಭಾರತದ ಯಕ್ಷ ಯಾವ ಕೆಲಸ ಮಾಡಲು ಸಮರ್ಥನಾಗಲಿಲ್ಲವೋ ಆ ಕೆಲಸವನ್ನು ಕಲಿಯುಗದ ಆಧುನಿಕ ಈ ಯಕ್ಷ ಮಾಡಿ ತೋರಿಸಿದ್ದಾನೆ.''

ಈ ಪಾಂಡವರು ಒಕ್ಕೊರಲಿನಿಂದ ಅವನನ್ನು ಹೊಗಳುತ್ತ, ''ಇಂದಿನಿಂದ ನೀನು ನಮ್ಮ ಸ್ನೇಹಿತ'' ಎಂದು ಅವನನ್ನು ಬಾಚಿ ತಬ್ಬಿಕೊಂಡರು. ಎಲ್ಲರೂ ಸೇರಿ ಕಾರಿನಲ್ಲಿ ಮನೆಯತ್ತ ಹಿಗ್ಗಿನಿಂದ ಹೊರಟರು.

---

ಹಿಂದಿ ಮೂಲ : **ಡಾ|| ಹರಿಕೃಷ್ಣ ದೇವಸರೆ**   ಕನ್ನಡಕ್ಕೆ : **ಡಾ|| ಪಂಚಾಕ್ಷರಿ ಹಿರೇಮಠ**
ಜಯನಗರ, ಧಾರವಾಡ - ೫೮೦ ೦೦೧

---






**ಕಳೆದ ಏಪ್ರಿಲ್ ೧, ೨೦೧೨ರ ಭಾನುವಾರದಂದು ಬಲ್ಮಠ ರಸ್ತೆಯಲ್ಲಿನ ಶರಾವತಿ ಕಟ್ಟಡದಲ್ಲಿ ನವಕರ್ನಾಟಕ ಪ್ರಕಾಶನದ ನೂತನ ಪುಸ್ತಕ ಮಳಿಗೆಯ ಪ್ರಾರಂಭೋತ್ಸವ ನಡೆಯಿತು. ಜೊತೆಯಲ್ಲಿ ನವಕರ್ನಾಟಕ ಪ್ರಕಟಿಸಿರುವ ಡಾ|| ಇಂದಿರಾ ಹೆಗ್ಗಡೆ ಅವರ ಕೃತಿ – ತುಳುವರ ಮೂಲತಾನ 'ಆದಿ ಆಲಡೆ' ಲೋಕಾರ್ಪಣೆಗೊಂಡಿತು. ನವಕರ್ನಾಟಕದ ಸಂಸ್ಥಾಪಕ ಅಧ್ಯಕ್ಷ ಕಾಂ|| ಬಿ. ವಿ. ಕಕ್ಕಿಲ್ಲಾಯ ಆಗಮಿಸಿದ್ದು ಸಮಯೋಚಿತವಾದ ಕೆಲವು ಮಾತುಗಳನ್ನಾಡಿದರು. ಮೊದಲ ಚಿತ್ರ ಮಳಿಗೆ ಉದ್ಘಾಟನೆಯದು. ಚಿತ್ರದಲ್ಲಿ ಕೃತಿಯ ಲೇಖಕಿ ಡಾ|| ಇಂದಿರಾ ಹೆಗ್ಗಡೆ, ಶ್ರೀ ಆರ್. ಎಸ್. ರಾಜಾರಾಮ್, ಶ್ರೀ ಬಿ. ವಿ. ಕಕ್ಕಿಲ್ಲಾಯ ಶ್ರೀ ಎ. ಆರ್. ಉಡುಪ. ಮಳಿಗೆ ಉದ್ಘಾಟಿಸಿದ ಪ್ರೊ|| ಬಿ. ಎ. ವಿವೇಕ ರೈ, ಶ್ರೀ ಜಿ. ಎನ್. ಅಶೋಕ ವರ್ಧನ, ಪುಸ್ತಕ ಲೋಕಾರ್ಪಣೆ ಮಾಡಿದ ಡಾ|| ವಾಮನ ನಂದಾವರ. ಎರಡನೆಯ ಚಿತ್ರದಲ್ಲಿ ಪುಸ್ತಕ ಬಿಡುಗಡೆ ಮಾಡುತ್ತಿರುವುದು.**

# ಶ್ರೀಮಂತ ಮನ

‘‘ನಿಂಗೋಸ್ಕರಾನೇ ಕಾಯ್ತಾ ಇದ್ದೆ. ಇನ್ನೊಂದು ಸ್ವಲ್ಪ ಹೊತ್ತು ನೀನು ಬರ್ದೆ ಹೋಗಿದ್ರೆ ನಾನೇ ಬರ್ತಿದ್ದೆ ನಿಮ್ಮನೇಗೆ’’ ಎನ್ನುತ್ತ ಅವಳ ಕೈ ಹಿಡಿದೆಳೆದು ಸೋಫಾದಲ್ಲಿ ಕೂಡಿಸುತ್ತಾ ತಾನೂ ಕುಳಿತಳು, ಚೈತ್ರ.

‘‘ಅದೇನೇ ಅಂಥಾ ವಿಷ್ಯ, ನನ್ನನ್ನೇ ಹುಡುಕ್ಕೊಂಡು ಬಂದು ಅರ್ಜೆಂಟಾಗಿ ಹೇಳೋ ಅಂಥಾದ್ದು ?!’’ ಕುತೂಹಲದಿಂದ ಕೇಳಿದಳು ಸುಪ್ರಿಯ.

‘‘ನಿಂಗೆ ಆವತ್ತೊಂದು ದಿನ ಹೇಳಿದ್ದೆ ಅಲ್ವಾ, ನಮ್ಮಣ್ಣಂದಿರಿಗೆ ಅದೃಷ್ಟ ಖುಲಾಯ್ಸಿಬಿಡ್ತೂಂತ, ಸಿಂಗಪೂರ್‌ನಿಂದ...’’ ಅವಳ ಮಾತು ಮುಗಿಯುವ ಮೊದಲೇ ‘‘ಹ್ಞಾಂ ! ಹೇಳಿದ್ದೆ. ಅವರ್ಯಾರೇ ಅಂಥಾ ‘‘ಗುಡ್‌ಎಸ್ಟ್’’ ಓಲ್ಡ್ ಮ್ಯಾನ್ ಈ ಕಾಲ್ದಲ್ಲಿ. ಎಲ್ಲೋ ದೂರದ ಊರಲ್ಲಿದ್ಕೊಂಡು, ಹುಡುಕಿ ಹುಡುಕಿ ನಿಮ್ಮಣ್ಣಂದಿರಿಗೇ ತಮ್ಮ ಆಸ್ತೀನೆಲ್ಲಾ ಬಿಟ್ಟುಹೋಗಿದಾರೇಂದ್ರೆ, ರಿಯಲಿ ಜೆನರಸ್ ಕಣೆ, ನಂಬಲಾರದ ವಿಷಯ’’ ಎಂದು ಅಚ್ಚರಿ ವ್ಯಕ್ತಪಡಿಸಿದಳು ಚೈತ್ರ.

‘‘ಅದೆಲ್ಲಾ ನಿಂಗೆ ಹೇಳ್ಬೇಕು ಅಂತಾನೇ ಕಾಯ್ತಾ ಇದ್ದೆ. ಅವ್ರು ಸಿಂಗಪೂರ್‌ಗೆ ಹೋಗಿ ಆಗಲೇ ತುಂಬ ವರ್ಷಗಳಾಯ್ತಂತೆ. ನಮ್ಮಮ್ಮನ, ಸೋದರಮಾವನ, ಮಗನ, ಭಾಮೈದುನನ ಅಳಿಯಾಂತೆ.’’

ಸುಪ್ರಿಯಾಗೆ ನಗು ಬಂತು. ‘‘ಎಷ್ಟು ಹತ್ರದ ಸಂಬಂಧಾ ಕಣೆ ನಿಮ್ಮಣ್ಣಂದಿರಿಗೆ ! ಹಳೇ ಚಂದಮಾಮ ಕಥೆ ಥರಾ ಇದೆ. ರಾಕ್ಷಸನ ಪ್ರಾಣ, ಸಪ್ತ ಸಮುದ್ರಗಳಾಚೆ, ಯಾವ್ದೋ ಅರಮನೆಯ ಏಳಂತಸ್ತಿನ ಉಪ್ಪರಿಗೇಲಿ, ಪಂಜರದಲ್ಲಿರೋ ಗಿಣಿ ಹೃದಯದಲ್ಲಿ...’’ ಎಂದು ಹೇಳುತ್ತಿರುವಾಗಲೇ ಇಬ್ಬರಿಗೂ ನಗು ಬಂತು.

‘‘ಏಯ್, ಸಾಕೇ. ಆಮೇಲೆ ನಗ್ತೀಯಂತೆ. ಮೊದ್ಲು ವಿಷ್ಯ ಕೇಳಿಸ್ಕೊ. ನಮ್ಮಮ್ಮ ಅವ್ರಿಗೆ ಓದೋ ಕಾಲ್ದಲ್ಲಿ ಚೂರೋ ಪಾರೋ ಸಹಾಯ ಮಾಡಿದ್ರಂತೆ, ಅದನ್ನ ನೆನಪಿಟ್ಕೊಂಡು ತಮ್ಮ ಆಸ್ತೀನ ನಮ್ಮಣ್ಣಂದಿರಿಗೆ ಬರೆದ್ರಂತೆ...’’

‘‘ಮದ್ವೆ ಆಗಿರಲಿಲ್ಲವೇ ?’’

ಬ್ರಹ್ಮಚಾರೀನಂತೆ ಕಣೆ, ಆದ್ರೂ ನಮ್ಮ ಫ್ಯಾಮಿಲೀಗೆ ಕೊಡ್ಬೇಕೂಂತ ಏನಿದೆ ? ಎಷ್ಟು ಒಳ್ಳೆ ಮನುಷ್ಯ ಅಲ್ವಾ ? ಆದ್ರೂ, ನಮ್ಮಣ್ಣಂದಿರಿಗೆ ಮಹಾ ಜಂಭ ಬಿಡು, ಅವರಿಗ್ಯಾಕೆ ಬರೆದ್ರೋ. ಅವಳ ಮಾತಿನಲ್ಲಿ ಅಸಮಾಧಾನವಿತ್ತು.

‘‘ಚೈತ್ರ, ಈಗಿನ ಲಾ ಪ್ರಕಾರ ಹೆಣ್ಣುಮಕ್ಕಳಿಗೂ ಪಾಲಿರುತ್ತೆ ಅನ್ಸುತ್ತೆ. ವಿಚಾರಿಸಿ ನೋಡೇ. ನಿಂಗೂ ಸ್ವಲ್ಪ ಸಿಗಬಹುದು’’ ಎಂದು ಆಸೆ ಹುಟ್ಟಿಸಿದಳು, ಸುಪ್ರಿಯಾ.

‘‘ಅಯ್ಯೋ, ಯಾರಿಗ್ಬೇಕೆ ಇನ್ನೊಬ್ರ ದುಡ್ಡು, ತಕ್ಕೊಳ್ಳಿ ಬಿಡು, ಮಜಾ ಮಾಡ್ಲಿ ಅವ್ರೇ. ನೀ ಏನೇ ಹೇಳೇ, ಕಷ್ಟ ಪಡ್ದೆ ಬಂದಿದ್ ದುಡ್ಡು ಖುಷಿ ಕೊಡಲ್ಲ.’’ ತನಗೆ ಸಿಕ್ಕಿಲ್ಲವಲ್ಲ, ಅದಕ್ಕೇ ಈ ವೇದಾಂತ ಎಂದುಕೊಂಡಳು ಸುಪ್ರಿಯಾ. ಅವರಿಬ್ಬರೂ ಮಾತಾಡುತ್ತಿರುವಾಗಲೇ ಪಾರ್ವತಿ ಬಂದಳು. ಪಾರ್ವತಿ, ಚೈತ್ರಳ ಗಂಡನ ಊರಿನವಳು. ಅವಳ ತಮ್ಮನಿಗೆ ಕೆಲಸ ಸಿಕ್ಕಿದಾಗ, ತಮ್ಮ ಮನೆಯ ಔಟ್‌ಹೌಸಿನಲ್ಲೇ ಬಂದಿರಲು ಹೇಳಿದ್ದರು ಚೈತ್ರಳ ಗಂಡ. ತಮ್ಮ ಕೆಲಸಕ್ಕೆ ಹೋದಮೇಲೆ, ಪಾರ್ವತಿ ಅಕ್ಕಪಕ್ಕದಲ್ಲಿ ತನಗೆ ತಿಳಿದವರಿಗೆ ಬಟ್ಟೆ ಹೊಲಿದುಕೊಡುತ್ತಾಳೆ, ಅವಳ ಬಳಿ ಹೊಲಿಗೆಯ ಮಿಷನ್ ಇದೆ. ಬೆಳಿಗ್ಗೆ ಸ್ವಲ್ಪ ಹೊತ್ತು ಚೈತ್ರಳಿಗೆ ಮನೆ ಕೆಲಸದಲ್ಲಿ ಸಹಾಯ ಮಾಡುತ್ತಾಳೆ.

‘‘ಅಕ್ಕ, ಇದು ಸರಿಯಾಗಿ ಬಂದಿದೆಯಾ ಅಥವಾ ಬೇರೆ ಏನಾದರೂ ಸರಿ ಮಾಡೋದಿದೆಯಾ ನೋಡಿ ಹೇಳಿ’’ ಎಂದು ಸುಪ್ರಿಯಾಳಿಗೆ ಅವಳ ಹೊಲಿದದ್ದು ಬ್ಲೌಸ್ ಕೊಟ್ಟಳು. ಸುಪ್ರಿಯ ತೋಳಿನವರೆಗೂ ಏರಿಸಿ, ‘‘ಸರಿಯಾಗಿದೆ, ಪರ್‌ಫೆಕ್ಟ್ ಆಗಿದೆ’’ ಎಂದು ಮೆಚ್ಚುಗೆ ಸೂಚಿಸಿದಳು. ನೀವು ಸರಿಯಾಗಿದೇಂತ ಹೇಳಿದ್ರೆ, ನಾನು ಈ ಮೂರು ಬ್ಲೌಸ್‌ಪೀಸ್‌ಗಳನ್ನೂ ಕತ್ತರಿಸಿ ಹೊಲಿದುಬಿಡ್ತೀನಿ’’ ಎಂದು ಪಾರ್ವತಿ ಹೇಳುತ್ತಿರುವಂತೆಯೇ, ಸುಪ್ರಿಯ ಮೆಲುನಗೆ ನಕ್ಕಳು.

ಅಷ್ಟರಲ್ಲಿ ಫೋನು ‘ಟ್ರಿಂಗ್-ಟ್ರಿಂಗ್’ ಎನ್ನುತ್ತಲೇ ಚೈತ್ರ ಎದ್ದು, ಹಲೋ ಎಂದಾಗ ಅತ್ತ ಕಡೆಯಿಂದ ಸರೋಜಳ ಧ್ವನಿ. ‘‘ಹ್ಞಾಂ ! ಸರೋಜಕ್ಕ, ಹೇಳು... ಆಯ್ತಾ ನಮ್ಮಣ್ಣಂದಿರ ಜಾಕ್‌ಪಾಟ್ ಕೆಲಸ ?’’ ಎಂದು ಕುಹಕ ನಗೆಯಾಡಿದಳು. ಅವಳಕ್ಕನ ಮಾತು ಮುಂದುವರಿಯುತ್ತಿದ್ದಂತೆಲ್ಲಾ, ಚೈತ್ರಳ ಕಣ್ಣಲ್ಲಿ ಆಶ್ಚರ್ಯ, ಸಡಗರ ಎಲ್ಲವೂ ಮಿಂಚಿತ್ತು. ‘‘ನಿಜವಾಗ್ಲೂ ನಾ ಅಕ್ಕ ? ನಂಗಂತೂ ನಂಬಕ್ಕೇ ಆಗ್ತಿಲ್ಲ. ಥ್ಯಾಂಕ್‌ಯೂ’’ ಎಂದು ಮಾತು ಮುಗಿಸಿ ಫೋನ್ ಕೆಳಗಿಟ್ಟು, ಸಂಭ್ರಮದಿಂದ ಸುಪ್ರಿಯಾಳ ಹತ್ತಿರ ಬಂದಳು. ‘‘ನಂಗೆ ಕಂಗ್ರಾಟ್ಸ್ ಹೇಳೇ !’’ ಎನ್ನುತ್ತಾ ಚೈತ್ರ ತಾನೇ ಸುಪ್ರಿಯಾಳ ಕೈಹಿಡಿದು ಕುಲುಕಿದಳು. ತಲೆ, ಬುಡ ಅರ್ಥವಾಗದಿದ್ದರೂ ಅವಳಿಗೆ ‘ಕಂಗ್ರಾಟ್ಸ್’ ಹೇಳಿದಳು. ಈಗ ಹೇಳು ಅದೇನು ಅಂಥಾ ವಿಶೇಷವಾದ್ದು ಅಂತ.’’

‘‘ಸಿಂಗಪೂರ್‌ನಿಂದ ಬಂದ ಹಣ, ಕೋರ್ಟ್‌ನಲ್ಲಿ ಇತ್ಯರ್ಥವಾಗಿ ಬ್ಯಾಂಕ್‌ಗೆ ಸೇರಿದೆಯಂತೆ. ನಾಳೆ ಹೋಗಿ ಫಾರ್ಮಾಲಿಟೀಸ್ ಮುಗಿಸಿಬಿಟ್ರೆ, ಎಲ್ಲಾ ಕೈಗೆ ಸೇರುತ್ತಂತೆ.’’ ‘‘ಹೌದಾ’’ ಎನ್ನುವಂತೆ ತಲೆಯಾಡಿಸಿದಳು ಸುಪ್ರಿಯ.

‘‘ಅಷ್ಟೇ ಅಲ್ಲ ಕಣೆ, ಇನ್ನೂ ಒಂದು ಗುಡ್ ನ್ಯೂಸ್ ಇದೆ. ನೀನಾಗ್ಲೇ ಹೇಳ್ದೆ ನೋಡು, ಹೆಣ್ಣುಮಕ್ಕಳಿಗೂ ಪಾಲಿರುತ್ತೇನ್ಸುತ್ತೆ, ಲಾಯರ್ ಹತ್ರ ವಿಚಾರಿಸೂಂತ, ಅವ್ರೇ ಅದರಲ್ಲಿ ಬರೆದುಬಿಟ್ಟಿದಾರಂತೆ, ಅವರ ಎಲ್ಲಾ ಮಕ್ಕಳಿಗೂ ಅಂತ, ಸೋ, ನಂಗೂ ನಮ್ಮಕ್ಕಂಗೂ ಕೂಡಾ ಅದರಲ್ಲಿ ಸಮನಾದ ಪಾಲು ಸಿಗುತ್ತೆ’’. ಅವಳ ಸಂತೋಷದ ಕಾರಣ ಈಗ ಅರ್ಥವಾಯ್ತು ಸುಪ್ರಿಯಾಗೆ. ‘‘ವ್ಹಾವ್ ! ಕಹಾನೀಮೆ ಟ್ವಿಸ್ಟ್ ಅಂದ್ರೆ ಇದೇ ಕಣೆ’’ ಎಂದು ಅವಳೂ ಈಗ ಸಂಪೂರ್ಣವಾಗಿ ಸಂತೋಷದಲ್ಲಿ ಭಾಗಿಯಾದಳು. ಪಾರ್ವತಿಯೂ ಭಾಗಿಯಾದಳು.

ರಾಧಾ ಟೇಕಲ್



ಇವರ 'ಹೋ ಹೋ'ಗಳ ಮಧ್ಯೆ ಹೊರಗಡೆ 'ಪೋಸ್ಟ್' ಎಂಬ ಕೂಗು. ಪಾರ್ವತಿ ಎದ್ದುಹೋಗಿ ಬಾಗಿಲು ತೆರೆದಳು. ಅವಳ ಹೆಸರಿಗೇ ಒಂದು ರಿಜಿಸ್ಟರ್ಡ್ ಪೋಸ್ಟ್! ಅವಾಕ್ಕಾದರೂ ಸಹಿ ಮಾಡಿ ಪಡೆದಳು. ಈಗೊಂದು ವಾರದ ಕೆಳಗೆ ಒಂದು ಗಾರ್ಮೆಂಟ್ ಫ್ಯಾಕ್ಟರಿಯಲ್ಲಿ ಕೆಲಸ ಸಿಕ್ಕಿತ್ತು. ಅದರ ಬಗ್ಗೆಯೇ ಇರಬಹುದೆಂದುಕೊಂಡು ಕವರ್ ತೆಗೆದು ಓದಿದಳು. ಅದರಲ್ಲಿ ಬರೆದಿರುವ ವಿಷಯ ಓದುತ್ತಾ ಅವಳ ಚಹರೆಯಲ್ಲಿ ಅನೇಕ ಭಾವಗಳು. ಲಕೋಟೆ ತಿರುಗಿಸಿ ನೋಡಿದಳು ಎಲ್ಲಿಂದ ಎಂದು.

''ಏನದು ಪಾರ್ವತಿ ? ಎಲ್ಲಿಂದ ?'' ಕುಳಿತಲ್ಲಿಂದಲೇ ಚೈತ್ರ ಅವಳನ್ನು ಪ್ರಶ್ನಿಸಿದಳು. ಮಾರುತ್ತರ ನೀಡದೆ, ಅದನ್ನು ಚೈತ್ರಳ ಕೈಯಲ್ಲಿಟ್ಟು, ತಾನು ಬಟ್ಟೆಗಳನ್ನು ಜೋಡಿಸುತ್ತಿದ್ದ ಕೆಲಸವನ್ನು ಮುಂದುವರಿಸಿದಳು. ಚೈತ್ರ ಗಬಗಬನೆ ಓದಿದಳು. ''ಸುಪ್ರಿಯಾ !! ಇಲ್ನೋಡೆ ಈವತ್ತು ನಂ ಪಾರ್ವತಿಗೂ ಲಾಟರಿ ಹೊಡೆದಿದೆ !!'' ಎಂದು ಉದ್ಗರಿಸಿದಳು.

''ಏನೇ ಹಂಗಂದ್ರೆ ?'' ಕುತೂಹಲ ತಡೆಯಲಾರದ ಸುಪ್ರಿಯಾ ತಾನೂ ಪಕ್ಕದಲ್ಲಿ ಕುಳಿತು ಓದಿದಳು.

ಅದು ಕೋಲಾರದ ಒಂದು ಸರ್ಕಾರಿ ಆಸ್ಪತ್ರೆಯಿಂದ ಬಂದ ಕಾಗದ. ಅದರ ಒಕ್ಕಣೆ ಹೀಗಿತ್ತು. ಅಲ್ಲಿ ಕೆಲಸದಲ್ಲಿದ್ದ, ಚೀಫ್ ಮೆಡಿಕಲ್ ಆಫೀಸರ್ ಅವರ ಆಫೀಸಿನಲ್ಲಿ ಜವಾನನಾಗಿದ್ದ ನಂಜಪ್ಪ ಎಂಬಾತ ಹೃದಯಾಘಾತದಿಂದ ಅಸುನೀಗಿದ್ದು, ಆತನ ಸಮೀಪ ಬಂಧು ಅರ್ಥಾತ್ ಆತನ ಧರ್ಮಪತ್ನಿಯೆಂದು ಆತನೇ ತನ್ನ ಫಾರಂನಲ್ಲಿ ನಮೂದಿಸಿರುವಂತೆ ಪಾರ್ವತಿ ಎಂಬಾಕೆಯು... ಎಂಬ ಗೃಹದಲ್ಲಿ ವಾಸಿಸುತ್ತಿದ್ದು/ವಾಸಿಸುತ್ತಿರುವಂಥಾ ಹೆಣ್ಣುಮಗಳು ಈ ಕೂಡಲೇ ಬಂದು ಮೃತರಿಗೆ ಸಂಬಂಧಿಸಿದ ಎಲ್ಲಾ ದಾಖಲೆಗಳಿಗೂ ಸಹಿ ಮಾಡಿ ಅವರಿಗೆ ಸೇರಿದ ಆಸ್ತಿ ಎಂದರೆ, ವಿಮಾ, ಗ್ರಾಚ್ಯುಯಿಟಿ ಮತ್ತಿತರ ಆಸ್ತಿಗಳಿಗೆ ಜವಾಬುದಾರರಾಗಿ ಎಲ್ಲವನ್ನೂ ಪಡೆಯತಕ್ಕದ್ದು. ಆತನಿಗೆ ಸೇರಿದ ಒಟ್ಟು ಆಸ್ತಿಯ ಮೌಲ್ಯದ ಬಗ್ಗೆ ಓದುತ್ತಿರುವಂತೆಯೇ ಗೆಳತಿಯರಿಬ್ಬರಿಗೂ ಮಾತೇ ಹೊರಡದಾಯಿತು. ಗತಿ ಇಲ್ಲದವಳಂತೆ ಕಾಣುವ ಪಾರ್ವತಿಯ ಹೆಸರಿನಲ್ಲಿ ಇಷ್ಟೊಂದು ಹಣವೇ ?! ಎಲ್ಲಕ್ಕಿಂತ ಮೊದಲು, ಅವಳಿಗೆ ಮದುವೆಯಾಗಿತ್ತೇ ? ಹಾಗಾದರೆ ತಮ್ಮನೊಂದಿಗಿದ್ದಾಳೇಕೆ ? ಬಿಟ್ಟುಬಿಟ್ಟಿದ್ದಾನೆಯೇ ? ಬಿಟ್ಟಿದ್ದರೆ, ಅವಳ ಹೆಸರಿಗೇಕೆ ಬರೆಯುತ್ತಾನೆ ? ಇದೇನಿದು ಮಿಸ್ಟರಿ ?! – ಇಂಥ ಎಲ್ಲ ಪ್ರಶ್ನೆಗಳೂ ಸರಸರನೆ ತಲೆ ಏರಿ ಮಂಡೆ ಬಿಸಿಯಾಯ್ತು.

''ಇದೇನು ಪಾರ್ವತಿ ?!'' ಎಂದು ಅವರು ಕೇಳುತ್ತಿದ್ದರೆ, ಅವಳು ತನಗದು ಸಂಬಂಧವೇ ಇಲ್ಲದಂತೆ ತನ್ನ ಕೆಲಸ ತಾನು ಮಾಡುತ್ತಿದ್ದಾಳೆ. ''ಪಾರ್ವತಿ ? ನಿಂಗೆ ಮದ್ವೆಯಾಗಿತ್ತಾ ? ಒಂದಿನಾನೂ ಹೇಳ್ಲೇ ಇಲ್ಲ'' ಸುಪ್ರಿಯಳಿಗೆ ನಂಬಲಾಗುತ್ತಿಲ್ಲ. ಅವಳ ಕತ್ತಲ್ಲಿ ಯಾವುದೇ ಕುರುಹಿಲ್ಲ: ಕಾಲಿಗೆ ಉಂಗುರ ಇಲ್ಲ.

''ಮದ್ವೆ ಆಗಿತ್ತೂಂತ ನಮ್ಮನೇಲಿ ಇವ್ರು ಹೇಳಿದ್ರಾಗಲಿ, ಆತ ಇಷ್ಟು ಜಾಸ್ತಿ ಸಂಬಳ ತರೋ ಗಂಡ ಅಂತ ಗೊತ್ತಿರ್ಲಿಲ್ಲ'' ಎಂದಳು ಚೈತ್ರ. ಅದೇನು ಅಸಮಾಧಾನವೋ ? ಅಸೂಯೆಯೋ ?

''ಮತ್ತೆ ನೀನಿಲ್ಲಿ, ತಮ್ಮನ ಜೊತೇಲಿದೀಯ ? ಈಗ ಕೆಲ್ಸಕ್ಕೆ ಸೇರ್ಬೇಕೂಂತಿದೀಯಾ ?'' ಸುಪ್ರಿಯಾಳಿಗೆ ಎಲ್ಲವನ್ನೂ ಥಟ್ಟನೆ ತಿಳಿದುಬಿಡುವ ತವಕ. ಆದರೆ ಪಾರ್ವತಿಯಿಂದ ಯಾವುದೇ ಪ್ರತಿಕ್ರಿಯೆ ಇಲ್ಲ.

''ನನ್ನ ಕೇಳಿದ್ರೆ, ನೀನೀಗ ಕೆಲ್ಸಕ್ಕೆ ಸೇರೋದೇ ಬೇಡ, ಒಂದು ಬಿಸಿನೆಸ್ ಶುರುಮಾಡಬಹುದು, ನಿನಗೆ ಬರೋ ದುಡ್ಡಲ್ಲಿ ಸ್ವಲ್ಪ ಬಂಡವಾಳ ಹಾಕಿದ್ರೆ.''

''ನಿನ್ನ ತಮ್ಮನಿಗೆ ಒಂದು ಸ್ವಂತ ಮನೆ ಮಾಡಿಕೊಡಬಹುದು. ನಂಗಂತೂ ನಂಬಕ್ಕೇ ಆಗ್ತಿಲ್ಲ! ಇಷ್ಟು ಒಳ್ಳೇ ಆಸ್ತಿ ಇಟ್ಟಿರೋ ಗಂಡನ ಜೊತೇಲಿಲ್ದೆ ತಮ್ಮನ ಜೊತೇಲಿದ್ದು, ಅದೂ ಹೀಗೆ ನಮ್ಮನೇಲಿ ಚೂರೂಪಾರು ಕೆಲಸ ಮಾಡ್ಕೊಂಡು...'', ಚೈತ್ರಳೂ ದನಿ ಗೂಡಿಸಿದಳು. ಅವಳು ಸುಮ್ಮನಿರುವುದು ಇಬ್ಬರಿಗೂ ಇನ್ನಿಷ್ಟು ಅಸಮಾಧಾನ. ಹೌದು, ಅಲ್ಲ ಏನೂ ಹೇಳದೆ ಕುಳಿತಿದಾಳಲ್ಲ!

ಇವರಿಬ್ಬರ ಮಾತುಗಳು ಇನ್ನೂ ಮುಂದುವರಿಯುವಷ್ಟರಲ್ಲಿ ಪಾರ್ವತಿ ಅವರ ಮಾತುಗಳಿಗೆ ಬ್ರೇಕ್ ಹಾಕುವಂತೆ,

''ನಂಗೆ, ಈ ಹಣದ ವಿಷ್ಯಾ ಬೇಕಾಗಿಲ್ಲ; ಇಸ್ಕೊಳ್ಳೋ ಉದ್ದೇಶಾನೇ ಇಲ್ಲ''. ಇಬ್ಬರಿಗೂ ಆಘಾತ ! ''ಏನೇ ಹಂಗಂದ್ರೆ ?'' ಬೆರಗಾದಳು ಚೈತ್ರ.

''ನಂಗೆ ಈ ದುಡ್ಡಿನ ಮೇಲೆ ಎಳ್ಳಷ್ಟೂ ಹಕ್ಕಿಲ್ಲ.''

''ಇದೊಳ್ಳೆ ಮಾತೂಂತ ಆಡ್ತಿದೀಯ. ನಿನ್ನ ಗಂಡಾನೇ ನಿನ್ನನ್ನ ಸ್ವತಃ ನಾಮಿನಿ ಮಾಡಿರೋವಾಗ'' ಎಂಥಾ ಹುಚ್ಚಿ ಇವಳು ಎನ್ನುವಂತಿತ್ತು ಅವರ ಮುಖದಲ್ಲಿನ ಛಾಯೆ.

''ಹೌದಕ್ಕ, ನಂಗೆ ಮದ್ವೆ ಆಗಿತ್ತು. ಆದ್ರೆ ನಾನು ಅವರ್ಮನೇಲಿ ಮೂರು ದಿನಾನೂ ಬಾಳಲಿಲ್ಲ. ಅಪ್ಪನ ಮನೇಗ್ ವಾಪಸ್ ಬಂದ್ಬಿಟ್ಟೆ.''

''ಯಾಕೆ ?''

''ಏನೋಕ್ಕ, ನಂಗಿಷ್ಟ ಆಗ್ಲಿಲ್ಲ''. ಅವರಿಬ್ಬರಿಗೂ ಅವಳ ಮಾತಿನ ವೈಖರಿ ಅರ್ಥವಾಗುತ್ತಿಲ್ಲ.

''ನಿಮ್ಮಪ್ಪ ಅಮ್ಮ ಬುದ್ಧಿ ಹೇಳ್ಲಿಲ್ವಾ'', 'ಬೈಲಿಲ್ವಾ ?'

''ತುಂಬಾನೇ ಬುದ್ಧಿ ಹೇಳಿದ್ರು, ಕೋಪಮಾಡ್ಕೊಂಡ್ರು. ಅವ್ರೂ ಬಂದು ತುಂಬಾ ಸಲ ಕರೆದ್ರು, ಇಸ್ಪೀಟಾಡೋದು, ಕುಡ್ಯೋದು ಬಿಟ್ಟುಬಿಡ್ತೀನಿ. ಬಾ ಅಂತಂದ್ರು.''

''ಆದ್ರೂ ನಂಗ್ಯಾಕೋ ಮನಸಾಗಲಿಲ್ಲ. ನಾನು ಬರಲ್ಲ, ನೀವು ಬೇರೆ ಯಾರನ್ನಾದ್ರೂ ಮದ್ವೆ ಮಾಡ್ಕೊಳ್ಳಿ, ನಂದೇನೂ ಅಭ್ಯಂತರ ಇಲ್ಲ, ಬೇಕಾದ್ರೆ ಬರೆದುಕೊಡ್ತೀನಿ ಅಂದೆ, ಅವ್ರು ಮತ್ತೆ ಬರಲಿಲ್ಲ, ಬೇರೆ ಮದ್ವೆ ಆಗಿರಬಹುದು ಅಂದ್ಕೊಂಡೆ.''

''ಅಬ್ಬ ! ಪರವಾಗಿಲ್ಲ ನೀನು. ಹೋಗ್ಲಿ ಆಗಿದ್ದಾಯ್ತು ಅದೆಲ್ಲಾ ಮರೆತುಬಿಡು. ಈಗ ನಂಜಪ್ಪನ ಆಸ್ತಿ ತೊಗೊಂಡು, ಒಂದು ಒಳ್ಳೆ ಕೆಲಸಕ್ಕೆ ಉಪಯೋಗ್ಸು. ಮಕ್ಕಳಿಗೆ ಒಂದು ಸ್ಕೂಲ್ ತೆಗಿ; ಒಳ್ಳೇ ಕೆಲಸಾನೂ ಆಯ್ತು, ನಿಂಗೆ ದುಡ್ಡೂ ವಾಪಸ್ ಬರುತ್ತೆ. ಇಲ್ಲಾಂದ್ರೆ ನಿಂಗಿಷ್ಟ ಇರೋ ಹೊಲಿಗೇದೆ ಒಂದು ಟ್ರೇನಿಂಗ್ ಸ್ಕೂಲ್ ತೆಗಿ. ಅದ್ರಲ್ಲಿ ಹಾಕಿದ ಬಂಡವಾಳಕ್ಕೆ ಮೋಸ ಇಲ್ದೆ ದುಡ್ಡು ಬರುತ್ತೆ.''

''ನಿನ್ನ ತಮ್ಮನಿಗೆ ಒಂದು ಬಿಸಿನೆಸ್ ಹಾಕ್ಕೊಡು. ಜನ್ಮ ಪೂರ್ತಿ ನಿಂಗೆ ಋಣಿಯಾಗಿರ್ತಾನೆ. ಮುಂದೆ ಅವನ್ಗೆ ಮದ್ವೆ ಆಗಿ ಅವ್ನ ಹೆಂಡ್ತಿ ಬಂದ್ರೂ ನಿನ್ನನ್ನ ಚೆನ್ನಾಗಿ ನೋಡ್ಕೋತಾಳೆ ಆವಾಗ.''

ಇಬ್ಬರೂ ಎಲ್ಲಾ ರೀತಿಯ ಸಲಹೆಗಳನ್ನೂ ನೀಡಿದರು, ಅದರಲ್ಲಿ ಒಂದಾದರೂ ಅವಳ ತಲೆಗೆ ಹತ್ತೀತು ಎಂಬ ಭರವಸೆಯಿಂದ.

''ಅಕ್ಕ, ನೀವು ನನ್ನ ಒಳ್ಳೇದಕ್ಕೆ ಹೇಳ್ತಿದೀರ ನಂಗೊತ್ತು, ಆದ್ರೂ ಕ್ಷಮ್ಸಿ. ನಾನು ಅವ್ರ ದುಡ್ಡಲ್ಲಿ ಒಂದು ಪೈಸಾನೂ ಮುಟ್ಟಲ್ಲ. ನನ್ಗಂಡ ಅಂತ ಅಂದ್ಕೊಂಡು ಒಂದೀನಾನೂ ಅವರ ಜೊತೇಲಿ ಸಂಸಾರ ಮಾಡ್ಲಿಲ್ಲ. ಅದ್ಹೆಂಗೆ ನಾನು ಅವ್ರ ಹೆಂಡ್ತಿ ಆಗ್ತೀನಿ ? ನಾನವರನ್ನ ದೂರ ಮಾಡಿ, ಅವರ್ಗೆ ಕಷ್ಟ ಆಗಿದ್ರೂ, ಸಾಯೋವರ್ಗೂ ನನ್ನನ್ನೇ ಹೆಂಡ್ತಿ ಅಂದ್ಕೊಂಡು ಅವ್ರ ಆಸ್ತಿ ಎಲ್ಲಾ ನನ್ನ ಹೆಸರಿಗೇ ಬರೆದಿರೋದು ಅವ್ರ ದೊಡ್ಡತನ ! ಆದ್ರೆ ಅವ್ರ ಬಗ್ಗೆ ಒಂದಿಷ್ಟೂ ಯೋಚ್ನೆ ಮಾಡ್ದೆ ಇಷ್ಟು ವರ್ಷ ಇದ್ಬಿಟ್ಟು, ಈಗ ಅವ್ರ ಆಸ್ತೀನೆಲ್ಲಾ ನನ್ನ ಹೆಸ್ರಿಗೆ ಬರೆದಿದಾರೇಂತ ಆಸೆಪಟ್ರೆ ಅದು ನನ್ನ ಕೀಳು ಬುದ್ಧಿ, ದಡ್ಡತನ ! ಇನ್ನು ನನ್ನ ತಮ್ಮಂಗೆ ಕೊಡು ಅಂದ್ರಿ. ನನಗೇ ನೆಂಟರಾಗ್ದೆ ಉಳ್ದವರ ದುಡ್ಡು ಅವನಿಗ್ಯಾಕೆ ? ಅವ್ನು ಕಷ್ಟಪಟ್ಟು ಮುಂದೆ ಬರ್ಲಿ; ಸತ್ತವರ ಹಣದ ಮೇಲೆ ಆಸೆಪಡೋದು ಬೇಡ.''

''ಆದ್ರೂ ಅವನನ್ನ ಒಂದು ಮಾತು ಕೇಳು ನೋಡು''

''ಇಲ್ಲಕ್ಕ, ನನ್ನ ನಿರ್ಧಾರಾನ ಅವ್ನು ಯಾವತ್ತೂ ತೆಗೆದುಹಾಕಲ್ಲ. ಒಂದಿನಾನಾದ್ರೂ ನನ್ನ ಗಂಡ ಅಂತ ಅಂದ್ಕೊಂಡು ಬಾಳದೇ ಇದ್ದವನ ಗೋರಿ ಮೇಲೆ ಅರಮನೆ ಕಟ್ಟೋದು ಯಾವ ನಿಯತ್ತು ? ಗೊತ್ತಿಲ್ಲದವರ ದುಡ್ಡು ತಗೊಂಡು ಸುಖಾಪಡೋ ಹಕ್ಕು ನನ್ನ ತಮ್ಮಂಗೂ ಇಲ್ಲ; ನಂಗೂ ಇಲ್ಲ. ಹಾಗೆ ಮಾಡಿದ್ರೆ ಯಾವ ದೇವ್ರೂ ಮೆಚ್ಚಲ್ಲ. ಅದು ಹೀಗೆ ಬರುತ್ತೇಂತ ನಾನು ಯಾವತ್ತೂ ಅಂದ್ಕೊಂಡಿರಲಿಲ್ಲ; ದಿಢೀರ್ ಬಂತೂಂತ ಶ್ರೀಮಂತಳಾಗೋ ಆಸೇನೂ ಇಲ್ಲ'' ಎಂದದ್ದೇ ಮಡಿಸಿದ ಬಟ್ಟೆಗಳನ್ನು ಕಪಾಟಿನಲ್ಲಿಡಲು ಅಲ್ಲಿಂದೆದ್ದು ಹೋದಳು. ಯಾರೋ ದೂರದ ಸಂಬಂಧಿಗಳು ! ತಾವೆಂದೂ ನೋಡೇ ಇಲ್ಲ. ಅಂಥವರು ತಮ್ಮ ಆಸ್ತಿಯೆಲ್ಲಾ ನಮ್ಮ ಹೆಸರಿಗೆ ಬರೆದರೆಂದು ಎಲ್ಲಾ ಎಷ್ಟು ಆಸೆ ಪಟ್ಟಿದ್ದು; ತನ್ನ ಪಾಲಿಗೆ ಬರುವ ದುಡ್ಡಿನಲ್ಲಿ ತಾನಾಗಲೇ ಏನೇನು ಮಾಡಬೇಕೆಂದು ಪಟ್ಟಿ ಹಾಕುತ್ತಿದ್ದ ಚೈತ್ರಳ ಮುಖಕ್ಕೆ ರಪ್ಪನೆ ಹೊಡೆದಂತಾಯ್ತು ಪಾರ್ವತಿಯ ನಿರ್ಧಾರ ಕೇಳಿ.

''ವ್ಹಾಹ್ ಪಾರ್ವತಿ, ಎಷ್ಟೇ ಹೆಚ್ಚಾಗಿ ಓದಿದವರೂ, ಇಂಥಾ ಯೋಚನೆ ಮಾಡಿರಲ್ಲ, ಮೊದಲೇ ಆಸ್ತಿ ಇದ್ದರೂ, ಬೇರೆಯವರಿಂದ ಬಿಟ್ಟಿ ಸಿಗುವುದಾದರೆ, ಇಂಥಾ ನಿರ್ಧಾರ ತೊಗೊಳ್ಳಲ್ಲ, ಕೈಯಲ್ಲಿ ಕಾಸಿಲ್ಲದಿದ್ದರೂ, ಅವಶ್ಯಕತೆ ಬೇಕಾದಷ್ಟಿದ್ದರೂ, ನೀನು ತೆಗೆದುಕೊಂಡಿರುವ ನಿರ್ಧಾರಕ್ಕೆ ಹ್ಯಾಟ್ಸ್ ಆಫ್' ಎಂದುಕೊಂಡ ಸುಪ್ರಿಯಾ ಕೂಡಲೇ ಪತ್ರಿಕೆಗೆ ಬರೆದು ಕಳಿಸುವ ನಿರ್ಧಾರ ಮಾಡಿದಳು.

**ರಾಧಾ ಟೇಕಲ್**
ನಂ. ೧೧೧, 'ಮಾರುತಿ ಕೃಪ', ೩ನೇ ಮುಖ್ಯರಸ್ತೆ, ೭ನೇ ಬ್ಲಾಕ್, ೨ನೇ ಹಂತ ನಾಗರಭಾವಿ
ಬೆಂಗಳೂರು - ೫೬೦ ೦೭೨

ಡಾ|| ಜೆ. ಜಯಂತಿ

# ಚಿಲ್ಲರೆ ವಹಿವಾಟಿನಲ್ಲಿ ವಿದೇಶೀ ನೇರ ಬಂಡವಾಳ ಹೂಡಿಕೆ

## – ಒಂದು ಅಭಿಪ್ರಾಯ

**ಭಾ**ರತದಲ್ಲಿ ಆರಂಭವಾದ ಜಾಗತೀಕರಣದ ಅಲೆಗಳು ಇಂದಿಗೂ ತಮ್ಮ ಪ್ರಭಾವ, ಪ್ರಾಬಲ್ಯಗಳಿಂದ ಅರ್ಥವ್ಯವಸ್ಥೆಯಲ್ಲಿ ಚಾಂಚಲ್ಯ ಉಂಟುಮಾಡುತ್ತಲೇ ಇವೆ. ಇತ್ತೀಚೆಗೆ ಕೇಂದ್ರ ಸರ್ಕಾರ ಜಾರಿಗೆ ತರಲು ಹೊರಟಿರುವ ಬಹುಬ್ರಾಂಡ್‌ನ ಚಿಲ್ಲರೆ ವಹಿವಾಟಿನಲ್ಲಿ ವಿದೇಶೀ ನೇರ ಹೂಡಿಕೆಗೆ ಅವಕಾಶ ಮಾಡಿಕೊಡುವ ನಿರ್ಧಾರ ಅನೇಕ ತಲ್ಲಣಗಳನ್ನು ಉಂಟುಮಾಡಿದೆ. ೧೯೯೧ರಲ್ಲಿ ಭಾರತ ಸರ್ಕಾರ ಚಿಲ್ಲರೆ ವಹಿವಾಟನ್ನು ವಿದೇಶೀ ನೇರ ಹೂಡಿಕೆಯಿಂದ ದೂರವೇ ಇಟ್ಟಿತ್ತು. ಆದರೆ ನವೆಂಬರ್ ೨೪, ೨೦೧೧ರಂದು ಕೇಂದ್ರ ಸರ್ಕಾರ ಶೇ. ೫೧ರಷ್ಟು ವಿದೇಶೀ ನೇರ ಹೂಡಿಕೆಗೆ ಬಹುಬ್ರಾಂಡ್ ಚಿಲ್ಲರೆ ವಹಿವಾಟಿನಲ್ಲಿ ಅವಕಾಶ ನೀಡುವ ಪ್ರಸ್ತಾವನೆಯನ್ನು ಸಂಸತ್ತಿನಲ್ಲಿ ಮಂಡಿಸಿದೆ. ಆದರೆ ಕೇಂದ್ರದ ಈ ನಿರ್ಧಾರ ಹಲವು ರೀತಿಯ ಪ್ರತಿಕ್ರಿಯೆಗಳಿಗೆ ಎಡೆಮಾಡಿಕೊಟ್ಟಿದೆ. 'ಎಫ್‌ಡಿಐ' ಪರ (ವಿದೇಶೀ ನೇರ ಹೂಡಿಕೆ) ಇರುವವರು ಸಮರ್ಥಿಸಿಕೊಂಡಿದ್ದರೆ, ವಿರೋಧಿಗಳು ಅದೊಂದು ಕೋಟ್ಯಂತರ ಸಣ್ಣ ವ್ಯಾಪಾರಿಗಳ ಜೀವನೋಪಾಯವನ್ನು ಹಾಳುಮಾಡುವ ಮೂರ್ಖತನದ ತೀರ್ಮಾನವಾಗಿದೆ ಎಂದು ಕುಹಕವಾಡಿದ್ದಾರೆ.

ಭಾರತೀಯ ಕೈಗಾರಿಕಾ ಒಕ್ಕೂಟವು ಸರ್ಕಾರದ ಈ ಕ್ರಮವನ್ನು ಸ್ವಾಗತಿಸಿದೆ. ಅದರ ಪ್ರಕಾರ ಬಹುಬ್ರಾಂಡ್ ಚಿಲ್ಲರೆ ವಹಿವಾಟಿನಲ್ಲಿ ವಿದೇಶೀ ನೇರ ಹೂಡಿಕೆಗೆ ಅವಕಾಶ ನೀಡುವುದರಿಂದ, ವ್ಯವಸ್ಥಿತ ಚಿಲ್ಲರೆ ಮಾರುಕಟ್ಟೆ ೨೦೨೦ರ ಹೊತ್ತಿಗೆ ೨೬೦ ಬಿಲಿಯನ್ ಡಾಲರ್ ತಲುಪಲಿದೆ. (ಈಗಿನ ಲೆಕ್ಕವೆಲ್ಲಾ ಡಾಲರುಗಳಲ್ಲಿ; ರೂಪಾಯಿ ಲೆಕ್ಕ ಲೆಕ್ಕಕ್ಕಿಲ್ಲ!) ಎಲ್ಲಾ ಉತ್ಪಾದಕರ ಆದಾಯ ಪ್ರತಿ ವರ್ಷ ೩೫-೪೫ ಬಿಲಿಯನ್ ಡಾಲರ್‌ನಷ್ಟು ಹೆಚ್ಚಾಗಲಿದೆ. ೩-೪ ದಶಲಕ್ಷ ಹೊಸ ನೇರ ಉದ್ಯೋಗಗಳು ಸೃಷ್ಟಿಯಾಗಲಿವೆ. ೪-೬ ದಶಲಕ್ಷ ಪರೋಕ್ಷ ಉದ್ಯೋಗಗಳು ಸೃಷ್ಟಿಯಾಗಲಿವೆ. ಭಾರತೀಯ ವಾಣಿಜ್ಯ ಮತ್ತು ಕೈಗಾರಿಕಾ ಫೆಡರೇಷನ್ ಹೇಳುವಂತೆ ವಿದೇಶೀ ನೇರ ಹೂಡಿಕೆ ಶಕ್ತಿಯುತವಾದ ಪೂರೈಕೆ ಸರಪಳಿಯನ್ನು ಸೃಷ್ಟಿಸಲಿದೆ. ಇದರಿಂದ ರೈತರು, ಸಣ್ಣ ಮತ್ತು ಮಧ್ಯಮ ಉದ್ಯಮಗಳು ಆಧುನಿಕ ವ್ಯಾಪಾರ ಪ್ರಕ್ರಿಯೆಯೊಂದಿಗೆ ಸಂಯೋಜಿತಗೊಳ್ಳಲಿವೆ. ರೈತರು ಹಾಗೂ ಸಣ್ಣ, ಮಧ್ಯಮ ಉದ್ಯಮಗಳು ತಮ್ಮ ಉತ್ಪನ್ನಗಳಿಗೆ ಹೆಚ್ಚಿನ ಬೆಲೆ ಪಡೆಯಬಹುದಾಗಿದೆ. ಜ್ಞಾನ ಮತ್ತು ಕೌಶಲ್ಯಗಳು ಆಧುನಿಕ ವಲಯದಿಂದ ಸಣ್ಣ ಮತ್ತು ಮಾಧ್ಯಮ ಉದ್ಯಮಗಳಿಗೆ ವರ್ಗಾವಣೆಗೊಳ್ಳಲಿವೆ. ಈ ವರ್ಗಗಳು ಬೆಲೆ ನಿರ್ಧಾರಕ್ಕೆ ಪೂರೈಕೆ ಯೋಜಿಸಿಕೊಳ್ಳಲು ಒಂದು ಒಳ್ಳೆಯ ಪಾರದರ್ಶಕ ವ್ಯವಸ್ಥೆಯನ್ನು ಕಂಡುಕೊಳ್ಳಬಹುದಾಗಿದೆ.

ಪ್ರಧಾನಿ ಮನ್‌ಮೋಹನ್ ಸಿಂಗ್ ಅವರ ಮಾತಿನಲ್ಲಿ ಹೇಳುವುದಾದರೆ, ''ಈ ನಿರ್ಧಾರ ಖಚಿತವಾಗಿ ನಮ್ಮ ದೇಶಕ್ಕೆ ಒಳಿತನ್ನೇ ಮಾಡಲಿದೆ ಎಂಬುದು ನಮ್ಮ ದೃಢನಂಬಿಕೆಯಾಗಿದೆ.'' ಪ್ರಧಾನಿಯವರ ಅಭಿಪ್ರಾಯದಲ್ಲಿ ಈ ನಿರ್ಧಾರ ರೈತರು, ಅನುಭೋಗಿಗಳಿಗೆ ಉಪಯುಕ್ತವಾಗಲಿದೆಯಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸಲಿದೆ. ಇತರ ರಾಷ್ಟ್ರಗಳ ಅನುಭವದ ಆಧಾರದ ಮೇಲೆ ಹೇಳುವುದಾದರೆ, ಎಫ್‌ಡಿಐ ಚಿಲ್ಲರೆ ವಹಿವಾಟಿನಲ್ಲಿ ಬರುವುದರಿಂದ ಸಣ್ಣ ಹಾಗೂ ದೊಡ್ಡ ಪ್ರಮಾಣದ ಚಿಲ್ಲರೆ ವ್ಯಾಪಾರಿಗಳು ಜೊತೆ ಜೊತೆಯಲ್ಲೇ ವ್ಯಾಪಾರ ನಡೆಸಬಹುದಾಗಿದೆ. ರಾಜ್ಯ ಸರ್ಕಾರಗಳಿಗೆ ಈ ನಿರ್ಧಾರ ಸೂಕ್ತವೆನಿಸದಿದ್ದರೆ,

**ಕೇಂದ್ರದ ಒಂದು ನಿರ್ಧಾರ ತಾತ್ಕಾಲಿಕವಾಗಿ ಭಾರತಕ್ಕೆ ಪೂರಕವೆನಿಸಿದರೂ, ಬಹುರಾಷ್ಟ್ರೀಯ ಕಂಪನಿಗಳ ಪ್ರಾಬಲ್ಯ ದೀರ್ಘಾವಧಿಯಲ್ಲಿ ಸಣ್ಣ ಮತ್ತು ಮಧ್ಯಮ ಉದ್ದಿಮೆಗಳಿಗೆ ನಷ್ಟದಾಯಕವೆನಿಸಲಿದೆ. ನಿರುದ್ಯೋಗ ಸಮಸ್ಯೆ ಕೂಡ ಉಲ್ಬಣಗೊಳ್ಳಲಿದೆ. ಅಂತೂ ವಿರೋಧ ಪಕ್ಷಗಳ ಒತ್ತಡಕ್ಕೆ ಮಣಿದ ಕೇಂದ್ರ ಸರ್ಕಾರ ಸದ್ಯಕ್ಕೆ ಇದನ್ನು ತಡೆಹಿಡಿದಿದೆ. ಮುಂಬರುವ ದಿನಗಳಲ್ಲಿ ಸಾಕಷ್ಟು ಚರ್ಚೆಯಾದ ಬಳಿಕ ವಿರೋಧಿಗಳ ಮನವೊಲಿಸಿ ಕೆಲವು ಬದಲಾವಣೆಗಳೊಂದಿಗೆ ಮತ್ತೊಮ್ಮೆ ಈ ಪ್ರಯತ್ನ ನಡೆಸಿದರೆ ಆಶ್ಚರ್ಯವೇನಿಲ್ಲ.**

ವಿದೇಶೀ ನೇರ ಹೂಡಿಕೆಯನ್ನು ಬಿಡುಗಡೆಗೊಳಿಸಬೇಕಾಗಿಲ್ಲ. ಏಕ ಬ್ರ್ಯಾಂಡ್ ಚಿಲ್ಲರೆ ವಹಿವಾಟಿನಲ್ಲಿ ಶೇಕಡ ೧೦೦ರಷ್ಟು ಹೂಡಿಕೆಗೆ ಅವಕಾಶ ನೀಡಲಾಗಿದೆಯಲ್ಲದೆ, ವಿದೇಶೀ ಹೂಡಿಕೆದಾರರಿಗೆ ಪೂರ್ಣ ಮಾಲೀಕತ್ವದ ಅವಕಾಶ ನೀಡಲಾಗಿದೆ. ಸರ್ಕಾರ ಹೇಳುವಂತೆ ಹಣದುಬ್ಬರದ ಒತ್ತಡ ನಿವಾರಿಸಲು ವಿದೇಶೀ ನೇರ ಹೂಡಿಕೆ ಸಹಾಯ ಮಾಡಲಿದೆ.

ಆದರೆ, ಸರ್ಕಾರದ ಈ ನೀತಿಯನ್ನು ವಿರೋಧಿಸುತ್ತಿರುವ ವಿರೋಧ ಪಕ್ಷಗಳು ಹಾಗೂ ಅನೇಕ ಚಿಂತಕರು, ವಿಮರ್ಶಕರು ಹೇಳುವಂತೆ ಸರ್ಕಾರದ ಈ ರೀತಿಯ ತ್ವರಿತ ನಿರ್ಧಾರಗಳು ಭಾರತೀಯ ಅರ್ಥವ್ಯವಸ್ಥೆಯ ಮೇಲೆ ಋಣಾತ್ಮಕ ಪರಿಣಾಮಗಳನ್ನು ಉಂಟುಮಾಡಲಿವೆ. ವಿರೋಧಿಗಳ ಅಭಿಪ್ರಾಯದಂತೆ ಬೃಹತ್ ಅಂತರರಾಷ್ಟ್ರೀಯ ಚಿಲ್ಲರೆ ವ್ಯಾಪಾರಿ ಸಂಸ್ಥೆಗಳು ಭಾರತೀಯ ಮಾರುಕಟ್ಟೆಗೆ ಲಗ್ಗೆ ಹಾಕಲಿವೆ. ೨೦೦೭ರಲ್ಲಿ ನೆದರ್‌ಲ್ಯಾಂಡ್ಸಿನ ಒಂದು ಸಂಸ್ಥೆ ೭೪% ಆದಾಯ ಗಳಿಸಿತ್ತು. ಫ್ರಾನ್ಸಿನ ಕ್ಯಾರೆಫೋರ್ ಎಂಬ ಸಂಸ್ಥೆ ೫೨% ಆದಾಯ ಪಡೆದಿದ್ದರೆ, ಜರ್ಮನಿಯ ಮೆಟ್ರೋ ೫೩%, ಬ್ರಿಟನ್‌ಗೆ ಸೇರಿದ ಟೆಸ್ಕೋ ಸಂಸ್ಥೆ ೨೨% ಆದಾಯ ಗಳಿಸಿದ್ದವು. ಇಂತಹ ಬದಲಾವಣೆ ದಲ್ಲಾಳಿಗಳ ಆದಾಯವನ್ನೂ ಹೆಚ್ಚಿಸಲಿದೆ. ಅವ್ಯವಸ್ಥಿತ ಚಿಲ್ಲರೆ ವ್ಯಾಪಾರ ಕ್ಷೇತ್ರ ಹಾಗೂ ಸಣ್ಣ ಪ್ರಮಾಣದ ಚಿಲ್ಲರೆ ವಹಿವಾಟಿನಲ್ಲಿ ನಿರುದ್ಯೋಗ ಹೆಚ್ಚಲಿದೆ. ೨೦೦೯-೧೦ರ ರಾಷ್ಟ್ರೀಯ ಸಮೀಕ್ಷೆ ವರದಿ ಪ್ರಕಾರ ಮೋಟಾರ್ ವಾಹನಗಳ ರಿಪೇರಿ, ಮೋಟಾರ್ ಸೈಕಲ್‌ಗಳು ಇತರ ಗೃಹೋಪಯೋಗಿ ವಸ್ತುಗಳ ರಿಪೇರಿ ಸೇರಿದಂತೆ ಸಗಟು ಹಾಗೂ ಚಿಲ್ಲರೆ ವಹಿವಾಟು ಕ್ಷೇತ್ರಗಳಲ್ಲಿ ೪೫೯ ದಶಲಕ್ಷ ಶ್ರಮಶಕ್ತಿಯಲ್ಲಿ ೪೪ ದಶಲಕ್ಷ ಕೆಲಸಗಾರರಿಗೆ ಉದ್ಯೋಗಾವಕಾಶಗಳನ್ನು ನೀಡಿತ್ತು.

ವಿದೇಶೀ ಹೂಡಿಕೆಯುಳ್ಳ ಚಿಲ್ಲರೆ ವಹಿವಾಟು ನಗರ ಪ್ರದೇಶಗಳಿಗೆ ಸೀಮಿತಗೊಂಡಿದ್ದರೂ ಅದು ಸಣ್ಣ ವ್ಯಾಪಾರಿಗಳು ಹಾಗೂ ಕೃಷಿಯ ಮೇಲೆ ದುಷ್ಪರಿಣಾಮ ಬೀರಲಿದೆ. ಲಕ್ಷಾಂತರ ಸಣ್ಣಪುಟ್ಟ ಅಂಗಡಿಗಳು ಬಾಗಿಲು ಮುಚ್ಚಬೇಕಾಗುತ್ತದೆ. ಇದರಿಂದ ೪ ಕೋಟಿ ಜನರ ಜೀವನ ಅಸ್ತವ್ಯಸ್ತಗೊಳ್ಳಲಿದೆ. ಆರಂಭದಲ್ಲಿ ಬೆಲೆ ಇಳಿಕೆ ಕಂಡುಬಂದರೂ ವಿದೇಶೀ ಸಂಸ್ಥೆಗಳು ಕಾಲಾಂತರದಲ್ಲಿ ಬೆಲೆ ಏರಿಸಬಹುದಾಗಿದೆ.

## ಬಾ ನಲ್ಲೆ ಭೂರಮೆಯ ಶೃಂಗಾರಕೆ

### (ಸುನೀತ)

ಬಾ ನಲ್ಲೆ, ಬಾ ನಲ್ಲೆ 'ಮಧುಚಂದ್ರ'ಕ್ಕೆಂದು
ಟೈಟಾನಿಯಂ ಆಕ್ಸೈಡ್ ಬಿಳಿ ಮಣ್ಣಲಿ ಹೊರಳಾಡಲು
ನಿರ್ವಾತ ಶಾಖದಲಿ ವಿಲವಿಲ ಒದ್ದಾಡಲು
ಹೂ-ದುಂಬಿಯ ಝೇಂಕಾರ ಕೇಳದೆ ಮೌನದಲಿ ಬಿಕ್ಕಲು
ಮಧು-ಮಕರಂದವ ಹೀರಲಾಗದೆ ಉಪವಾಸ ಸಾಯಲು
ಇಂಥಾ ಬರಗೆಟ್ಟ 'ಮಧು ಚಂದ್ರಕೆ'
ಕರೆದೊಯ್ಯುವರು ಅವೈಜ್ಞಾನಿಕ ಭಾವದ ಅರಸಿಕರಲ್ಲವೇ ?

ಬಾ ನಲ್ಲೆ, ಬಾ ನಲ್ಲೆ 'ಭೂರಮೆಯ ಶೃಂಗಾರ'ಕೆ
ಮೆತ್ತನೆ ಮಂಚದಲಿ, ಸುಗಂಧ ಭರಿತ
ತಂಗಾಳಿಯಲಿ ತೇಲಾಡಿ, ಮೈ ಹಗುರಗೊಳಿಸಲು
ಹೂ-ಹಸಿರಿನ ಸೊಬಗ ಸವಿದು, ಮಕರಂದವ ಹೀರಲು
ತುಟಿಗೆ ತುಟಿ ಹಚ್ಚಿ, ಜೇನ ಚಪ್ಪರಿಸಲು
ಸ್ವರ್ಗಕ್ಕೆ ಕಿಚ್ಚು ಹಚ್ಚಿದ ಮಧು-ಮಂದಾರಕೆ
ಕರೆದೊಯ್ಯುವರು ವೈಜ್ಞಾನಿಕ ಭಾವದ ಕವಿ-ರಸಿಕರಲ್ಲವೇ ?

**ಎಸ್. ಮಂಜುನಾಥ**
ನಂ. ೬೩, ವಾರ್ಡ್-೧೨, ರೆಡ್ಡಿ ಬೀದಿ, ಬಳ್ಳಾರಿ - ೫೮೩ ೧೦೧



ಇನ್ನು, ಚಿಲ್ಲರೆ ವಹಿವಾಟಿನ ಸ್ವರೂಪ ಭಾರತದಲ್ಲಿ ಹೇಗಿದೆ ಎಂಬುದನ್ನು ಒಮ್ಮೆ ಅವಲೋಕಿಸಿದರೆ ಕೆಲವು ಪ್ರಮುಖ ಅಂಶಗಳು ಗೋಚರಿಸುತ್ತವೆ. ಸುಮಾರು ೪೦೦ ಶತಕೋಟಿ ಡಾಲರ್‌ಗಳಷ್ಟು ಇರುವ ವಹಿವಾಟು ೨೦೧೪ರ ಹೊತ್ತಿಗೆ ೬೦೦ ಶತಕೋಟಿಗೆ ಹೆಚ್ಚಲಿದೆ. ಸಂಘಟಿತ ವಲಯದ ಪಾಲು ಶೇ. ೭ರಷ್ಟಿದ್ದರೆ, ಒಟ್ಟು ಆಂತರಿಕ ಉತ್ಪನ್ನದಲ್ಲಿ ಶೇ. ೧೫ರಷ್ಟು ಪಾಲನ್ನು ಹೊಂದಿದೆ. ಶೇ. ೮ರಷ್ಟು ಉದ್ಯೋಗಾವಕಾಶಗಳು ಇಲ್ಲಿವೆ. ಭಾರತ ವಿಶ್ವದಲ್ಲೇ ಚಿಲ್ಲರೆ ವಹಿವಾಟಿನಲ್ಲಿ ನಾಲ್ಕನೇ ಅತ್ಯುತ್ತಮ ರಾಷ್ಟ್ರವೆನಿಸಿದೆ.

ಭಾರತದ ವ್ಯಾಪಾರಿಗಳ ಸಮೂಹ ಗುರುವಾರ, ಡಿಸೆಂಬರ್ ೧, ೨೦೧೧ರಂದು 'ಭಾರತ ವ್ಯಾಪಾರ ಬಂದ್'ಗೆ ಕರೆ ನೀಡಿತ್ತು. ಈ ಸಂಸ್ಥೆಯ ಸೆಕ್ರೆಟರಿ ಜನರಲ್ ಆಗಿರುವ ಖಂಡೇಲ್‌ವಾಲಾ ಹೇಳುವಂತೆ, ಸರ್ಕಾರದ ವಿದೇಶೀ ಬಂಡವಾಳ ಹೂಡಿಕೆಯ ಬಗೆಗಿನ ನಿರ್ಧಾರ ಅಸಮಾನ ವೇದಿಕೆಯನ್ನು ಸೃಷ್ಟಿಸಲಿದೆ. ಇದು ಬಹುರಾಷ್ಟ್ರೀಯ ನಿಗಮಗಳ ಪರವಾಗಲಿದೆಯಲ್ಲದೆ ದೇಶೀಯ ವ್ಯಾಪಾರಿಗಳು ಮತ್ತು ಗ್ರಾಹಕರಿಗೆ ದುಃಸ್ವಪ್ನವಾಗಲಿದೆ. ಭಾರತದಲ್ಲಿ ಚಿಲ್ಲರೆ ವಹಿವಾಟು ಪ್ರಾದೇಶಿಕ ಬಂಡವಾಳದಿಂದಲೇ (ಶೇ. ೧೫ರಷ್ಟು) ಸಮರ್ಥವಾಗಿ ನಿರ್ವಹಿಸಲ್ಪಡುತ್ತಿದೆ. ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಶೇ. ೧೦ರಷ್ಟು ಕೊಡುಗೆ ನೀಡಲಾಗಿದೆ. ಕೇಂದ್ರ ಸರ್ಕಾರದ ವಾಣಿಜ್ಯ ಹಾಗೂ ಕೈಗಾರಿಕಾ ಸಚಿವರಾದ ಶ್ರೀಯುತ ಆನಂದ ಶರ್ಮ ಹೇಳುವಂತೆ, ವಿರೋಧ ಪಕ್ಷದ ನಾಯಕರು ಲಿಖಿತ ರೂಪದಲ್ಲಿ ಕೆಲವು ಮುಖ್ಯ ಅಂಶಗಳನ್ನು ತಿಳಿಸಿದ್ದಾರೆ.

ಕೇಂದ್ರ ಸರ್ಕಾರ ಚಿಲ್ಲರೆ ವಹಿವಾಟಿನಲ್ಲಿ ವಿದೇಶೀ ನೇರಹೂಡಿಕೆಗೆ ಅವಕಾಶ ನೀಡುವ ನಿರ್ಧಾರ ಕೈಗೊಂಡಿದ್ದರೂ, ಇದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಹವರ್ತಿ ಪಟ್ಟಿಯಲ್ಲಿ ಬರುವ ವಿಷಯವಾಗಿರುವುದರಿಂದ ಬಹುರಾಷ್ಟ್ರೀಯ ಸಂಸ್ಥೆಗಳ ಪ್ರವೇಶಕ್ಕೆ ರಾಜ್ಯಗಳ ಅನುಮತಿ ಬೇಕಾಗುತ್ತದೆ. ಅಲ್ಲದೆ, ಕೃಷಿ ಉತ್ಪನ್ನಗಳ ಮಾರುಕಟ್ಟೆ ಸಮಿತಿ (ಎ.ಪಿ.ಎಂ.ಸಿ.) ಕಾಯ್ದೆಗೂ ಸೂಕ್ತ ತಿದ್ದುಪಡಿ ತರುವುದು ಅನಿವಾರ್ಯವೆನಿಸುತ್ತದೆ. ಚಿಲ್ಲರೆ ವಹಿವಾಟಿನಲ್ಲಿ ಎ.ಪಿ.ಎಂ.ಸಿ.ಗಳಿಗೆ ಅವಕಾಶ ನೀಡುವುದು ಕೆಲವು ಷರತ್ತುಗಳನ್ನು ಒಳಗೊಂಡಿದೆ. ೧೦ ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ನಗರಗಳಲ್ಲಿ ಮಾತ್ರ ತಮ್ಮ ಮಳಿಗೆಗಳನ್ನು ತೆರೆಯಲು ವಿದೇಶೀ ಸಂಸ್ಥೆಗಳಿಗೆ ಅವಕಾಶ ನೀಡಲಾಗುತ್ತದೆ. ಈ ಪ್ರಕ್ರಿಯೆ ಪೂರ್ಣಗೊಳ್ಳಲು ೩-೪ ವರ್ಷಗಳ ಕಾಲಾವಕಾಶ ಬೇಕಾಗಿದೆ. ಆದ್ದರಿಂದ ಚಿಲ್ಲರೆ ವಹಿವಾಟಿನ ಸ್ವರೂಪಕ್ಕೆ ಯಾವುದೇ ಗಂಡಾಂತರವಿಲ್ಲ.

ಒಟ್ಟಾರೆಯಾಗಿ ಹೇಳುವುದಾದರೆ, ಕೇಂದ್ರದ ಈ ನಿರ್ಧಾರ ತಾತ್ಕಾಲಿಕವಾಗಿ ಭಾರತಕ್ಕೆ ಪೂರಕವೆನಿಸಿದರೂ, ಬಹುರಾಷ್ಟ್ರೀಯ ಕಂಪನಿಗಳ ಪ್ರಾಬಲ್ಯ ದೀರ್ಘಾವಧಿಯಲ್ಲಿ ಸಣ್ಣ ಮತ್ತು ಮಧ್ಯಮ ಉದ್ದಿಮೆಗಳಿಗೆ ನಷ್ಟದಾಯಕವೆನಿಸಲಿದೆ. ನಿರುದ್ಯೋಗ ಸಮಸ್ಯೆ ಕೂಡ ಉಲ್ಬಣಗೊಳ್ಳಲಿದೆ. ಅಂತೂ ವಿರೋಧ ಪಕ್ಷಗಳ ಒತ್ತಡಕ್ಕೆ ಮಣಿದ ಕೇಂದ್ರ ಸರ್ಕಾರ ಸದ್ಯಕ್ಕೆ ಇದನ್ನು ತಡೆಹಿಡಿದಿದೆ. ಮುಂಬರುವ ದಿನಗಳಲ್ಲಿ ಸಾಕಷ್ಟು ಚರ್ಚೆಯಾದ ಬಳಿಕ ವಿರೋಧಿಗಳ ಮನವೊಲಿಸಿ ಕೆಲವು ಬದಲಾವಣೆಗಳೊಂದಿಗೆ ಮತ್ತೊಮ್ಮೆ ಈ ಪ್ರಯತ್ನ ನಡೆಸಿದರೆ ಆಶ್ಚರ್ಯವೇನಿಲ್ಲ.

**ಡಾ|| ಜೆ. ಜಯಂತಿ**
ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಳೆಹೊನ್ನೂರು, ಶಿವಮೊಗ್ಗ ಜಿಲ್ಲೆ

## ಎಸ್. ಸಿ. ರಂಗನಾಥ್

ಬ್ರಹ್ಮಶ್ರೀ ಸದಾಶಿವಯೋಗಿಯವರು, ಕರ್ನಾಟಕದ ತುಮಕೂರು ಜಿಲ್ಲೆಯ ಗುಬ್ಬಿ ಪಟ್ಟಣದಲ್ಲಿ ಶ್ರೀಯುತ ಬಾವಿಮನೆ ನಂಜಪ್ಪಯ್ಯ ಮತ್ತು ಶ್ರೀಮತಿ ಗೌರಮ್ಮನವರಿಗೆ ತೃತೀಯ ಪುತ್ರನಾಗಿ ದಿನಾಂಕ : ೧೧-೦೭-೧೯೩೪ರಂದು ಜನಿಸಿ, ಜಿ. ಎನ್. ಸದಾಶಿವಯ್ಯ ಎಂದು ನಾಮಾಂಕಿತ ರಾದರು. ಸುಮಾರು ೧೦ ತಿಂಗಳ ಮಗುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡ ಪ್ರಯುಕ್ತ ತಂದೆಯವರು ಜವಾಬ್ದಾರಿಯುತರಾಗಿ ನೋಡಿಕೊಂಡು ಬೆಳೆಸಿದರು. ನಂಜಪ್ಪಯ್ಯನವರಿಗೆ ತನ್ನ ಮಗನನ್ನು ದೊಡ್ಡ ಅಧಿಕಾರಿ ಯನ್ನಾಗಿ ಮಾಡಬೇಕೆಂಬ ಹಂಬಲವಿತ್ತು. ಇವರ ಪ್ರಾಥಮಿಕ ವಿದ್ಯಾಭ್ಯಾಸ ಗುಬ್ಬಿ ಸಮೀಪದ ಅಮ್ಮನ ಘಟ್ಟದಲ್ಲಿ ಒಂದರಿಂದ ಮೂರನೇ ತರಗತಿಯವರೆವಿಗೂ ನಡೆಯಿತು. ಸರಿಯಾದ ಮಾರ್ಗದರ್ಶನ, ಉತ್ತಮ ಶಿಕ್ಷಣ ಸಿಕ್ಕಲೆಂದು ನಾಲ್ಕನೇ ತರಗತಿಗೆ ತುಮಕೂರಿನ ಸಮೀಪದ ಸಿದ್ಧಗಂಗಾ ಮಠದ ಶಾಲೆಗೆ ಸೇರಿಸಿದರು. ಸ್ವಚ್ಛಂದವಾಗಿ ಬೆಳೆದಿದ್ದ ಸದಾಶಿವಯ್ಯನಿಗೆ ಮಠದ ಶಿಸ್ತನ್ನು ಪಾಲಿಸಿ ಕೊಂಡು ಇರುವುದು ಕಷ್ಟವಾಯಿತು. ಆಗಾಗ್ಗೆ ಶಾಲೆಗೆ ತಪ್ಪಿಸಿಕೊಂಡು ಮನೆಗೆ ಬಂದು ಹೋಗುತ್ತಿದ್ದರು. ಇದನ್ನರಿತ ತಂದೆ ಸದಾಶಿವಯ್ಯನನ್ನು ಐದನೇ ತರಗತಿಗೆ ತಿಪಟೂರಿನಲ್ಲಿ ವೀರಶೈವ ಗುರುಕುಲಾನಂದಾಶ್ರಮಕ್ಕೆ ಸೇರಿಸಿದರು. ಅಲ್ಲಿಂದ ಪ್ರೌಢಶಿಕ್ಷಣ ಮುಗಿಯುವವರೆಗೂ ತಿಪಟೂರಿನಲ್ಲೇ ವಿದ್ಯಾಭ್ಯಾಸವಾಯಿತು. ತುಮಕೂರಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ಎರಡು ವರ್ಷದ ಪ್ರಭಾವ ಬೀರಿತು. ಅದರಂತೆ ಯಾವುದೇ ವಿಚಾರ ಬಂದರೂ ಪ್ರಶ್ನಿಸುವ ಮೂಲಕ, ತರ್ಕದ ಮೂಲಕ ಸಂಶಯಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಒಮ್ಮೆ ಪಾಠಶಾಲೆಯಲ್ಲಿ ಭೂಗೋಳದ ಶಿಕ್ಷಕರನ್ನು ''ಭೂಮಿ ತಿರುಗುತ್ತಿರುವುದು ನಿಜವೇ ಆದರೆ, ನಾವು ಮೇಲೆ ನೆಗೆದಾಗ ಭೂಮಿಯು ಮುಂದಕ್ಕೆ ಚಲಿಸಬೇಕಲ್ಲವೇ ? ಹಾಗಿದ್ದ ಪಕ್ಷದಲ್ಲಿ ನಾವು ಮತ್ತೊಂದು ಸ್ಥಳಕ್ಕೆ ನಡೆದು ಕೊಂಡು ಹೋಗುವ ಬದಲು ಆ ಊರಿನ ನೇರಕ್ಕೆ ಸರಿಯಾಗಿ ನಿಂತುಕೊಂಡು ಕುಪ್ಪಳಿಸುತ್ತಿದ್ದರೆ, ಭೂಮಿಯು ಮುಂದಕ್ಕೆ ಚಲಿಸಿ ಆ ಸ್ಥಳವು ಹತ್ತಿರ ಬರಬೇಕಲ್ಲವೇ ?'' ಎಂದು ಪ್ರಶ್ನಿಸಿದರು. ಶಿಕ್ಷಕರು ಕೋಪಗೊಂಡು ಹತ್ತಿರ ಕರೆದು 'ಫಟ್' ಎಂದು ತಲೆಗೆ ಬಡಿದು, ''ಈಗ ನಿನ್ನ ತಲೆಯು ತಿರುಗುತ್ತಿದೆ ನೋಡು, ಭಡವಾ'' ಎಂದು ಬೈದರು. ಕನ್ನಡ ಪಂಡಿತರು ರಾಮಾಯಣದ ಪಾಠ ಮಾಡುತ್ತಿದ್ದಾಗ, ''ರಾಮನು ತ್ರಿಕಾಲದರ್ಶಿಯಾದರೆ, ಸೀತೆ ಎಲ್ಲಿರುವಳು ಎಂಬ ನೆಲೆ ತಿಳಿದುಕೊಳ್ಳಲಾರದೆ ಕಾಡಿನಲ್ಲಿ ತಿರುಗು ತ್ತಿದ್ದನೇಕೆ ? ಇವನಲ್ಲಿ ರಾಮಬಾಣವಿದ್ದರೂ ವಾನರ ಸೈನ್ಯದ ಸಹಾಯ ಪಡೆದನೇಕೆ ?'' ಎಂದು ಅನೇಕ ಪ್ರಶ್ನೆ ಗಳನ್ನು ಕೇಳಿದರು. ಇವರ ಪ್ರಶ್ನೆಗಳಿಗೆ ಉತ್ತರಿಸಲಾರದೆ ಕೋಪದಿಂದ, ಬೆಂಚಿನ ಮೇಲೆ ನಿಲ್ಲುವ ಶಿಕ್ಷೆ ಕೊಟ್ಟರು. ಹೀಗಾಗಿ ಸಹಪಾಠಿಗಳೆಲ್ಲರೂ ಸದಾಶಿವಯ್ಯನನ್ನು ತರ್ಕ ವಾದಿಯೆಂದು ಗೇಲಿ ಮಾಡುತ್ತಿದ್ದರು.

ಪದವಿ ವ್ಯಾಸಂಗ ಮಾಡುತ್ತಿರುವಾಗ ಮದುವೆಯಾಗ ಬೇಕೆಂಬ ಒತ್ತಾಯ ಬಂದಾಗ ಸದಾಶಿವಯ್ಯ ಖಿನ್ನರಾಗಿ, ನವಂಬರ್ ೧೯೫೩ರಲ್ಲಿ ಯಾರಿಗೂ ಹೇಳದೆ ಕೇಳದೆ ಗುಟ್ಟಾಗಿ ತಿಪಟೂರಿನ ರೈಲ್ವೆ ಸ್ಟೇಷನ್‌ಗೆ ಹೋಗಿ ದಾವಣಗೆರೆಯಿಂದ ಬಸ್‌ನಲ್ಲಿ ಶ್ರೀಶೈಲಕ್ಕೆ ಹೋಗುತ್ತಾರೆ. ತನ್ನಲ್ಲಿದ್ದ ಹಣವನ್ನು ಭಿಕ್ಷುಕರಿಗೆ ದಾನ ಮಾಡಿ, ಪಾತಾಳ ಗಂಗೆಯ ಕಡೆಗೆ ಹೋಗಿ ತಪಸ್ಸಿಗಾಗಿ ಸೂಕ್ತ ಸ್ಥಳವನ್ನು ಆಯ್ಕೆಮಾಡಿಕೊಂಡು, ತನಗೆ ಗೊತ್ತಿದ್ದ ಶಿವ ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತಾ ತಪಸ್ಸನ್ನು ಪ್ರಾರಂಭಿಸುತ್ತಾರೆ. ರಾತ್ರಿಯಾಗುತ್ತಾ ಕತ್ತಲೆ ಆವರಿಸಿದಂತೆ ಭಯಭೀತಿಗಳು ಒಂದು ಕಡೆ, ಹಸಿವು ಇನ್ನೊಂದು ಕಡೆ, ಇವರ ತಪಸ್ಸನ್ನು ಕೆಡಿಸುತ್ತವೆ. ನಂತರ ಮಲ್ಲಿಕಾರ್ಜುನನ ದೇವಸ್ಥಾನಕ್ಕೆ ಬಂದು ತಪಸ್ಸನ್ನು ಪ್ರಾರಂಭಿಸುತ್ತಾರೆ. ಅನ್ನ ನೀರಿಲ್ಲದೆ ಕುಳಿತ ಬಾಲಕನನ್ನು ನೋಡಿ, ಓರ್ವ ಹಿರಿಯರು, ಇವರು ಬಂದ ವಿಚಾರಗಳನ್ನೆಲ್ಲಾ ಕೇಳಿ, ನೀನು ಇನ್ನೂ ಚಿಕ್ಕವಯಸ್ಸಿ ನವನು, ಊರಿಗೆ ವಾಪಸ್ಸು ಹೋಗು ಎಂದು ಬುದ್ಧಿ ಹೇಳಿ, ಬಸ್ಸಿಗೆ ದುಡ್ಡುಕೊಟ್ಟು ಊರಿಗೆ ಕಳುಹಿಸುತ್ತಾರೆ.

ಶ್ರೀಶೈಲದಲ್ಲಿ ಯಾತ್ರಿಕರು ಕೊಟ್ಟ ಸಲಹೆ ಮತ್ತು ವಿಳಾಸದ ಆಧಾರದ ಮೇಲೆ ದೇವಿದಯಾಲ್ ಸೇಲ್ಸ್ ಪ್ರೈವೇಟ್ ಲಿಮಿಟೆಡ್, ಮುಂಬೈ ಸಂಸ್ಥೆಯನ್ನು ಸಂಪರ್ಕಿಸಿದರು. ಇವರ ಚಿಜವಾಡ ಕಂಪನಿ ಕಾಕಿನಾಡ ಬಂದರಿನಲ್ಲಿ ಹಡಗುಗಳ ಮೂಲಕ ಅದಿರು ಸಾಗಾಣಿಕೆ ಮಾಡುತ್ತಿತ್ತು. ಹಡಗುಗಳ ಮೇಲ್ವಿಚಾರಕನಾಗಿ ಸದಾಶಿವಯ್ಯನಿಗೆ ಕೆಲಸ ಕೊಟ್ಟರು. ಇಲ್ಲಿ ಒಳ್ಳೆಯ

# ವೈಚಾರಿಕ ಪ್ರಜ್ಞೆ–ವೈಜ್ಞಾನಿಕ ದೃಷ್ಟಿ–ತರ್ಕವಾದಿ
# ಬ್ರಹ್ಮಶ್ರೀ ಸದಾಶಿವಯೋಗಿ

ಇಂಟರ್‌ಮೀಡಿಯಟ್ ಮುಗಿದ ನಂತರ, ಬಿ.ಕಾಂ. ಓದಲು ಬೆಂಗಳೂರಿನ ಕಾಮರ್ಸ್ ಕಾಲೇಜಿಗೆ ಸೇರಿದರು. ಸಿದ್ಧಗಂಗಾ ಮಠದಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಭಕ್ತ ಮಾರ್ಕಂಡೇಯ ನಾಟಕದಲ್ಲಿ ಇವರಿಗೆ ಬಾಲ ಮಾರ್ಕಂಡೇಯನ ಪಾತ್ರ ಕೊಟ್ಟಿದ್ದರು. ನಾಟಕ ಮುಗಿದ ಮೇಲೆ, ತಾನೂ ಸಹ ಮಾರ್ಕಂಡೇಯನಂತೆಯೇ ಆಗಬೇಕು ಎಂಬ ಹಂಬಲ ಬಂದಿತು. ಈ ಘಟನೆ ಇವರಿಗೆ ಜೀವನದ ಒಂದು ತಿರುವು ಆಯಿತು.

ಶೈವ ಸಂಪ್ರದಾಯದ ಪ್ರಕಾರ ಹತ್ತನೇ ವಯಸ್ಸಿನಲ್ಲಿ 'ಶಿವದೀಕ್ಷೆ' (ಜಂಗಮ ದೀಕ್ಷೆ)ಯಾಯಿತು. ವೀರಶೈವ ಗುರುಕುಲಾನಂದಾಶ್ರಮದ ಪಟ್ಟದ ಕರಿಬಸವ ದೇಶಿ ಕೇಂದ್ರರು ಕಾಶಿಯಲ್ಲಿ ತರ್ಕ, ನ್ಯಾಯ, ತತ್ವಶಾಸ್ತ್ರ ಅಭ್ಯಸಿಸಿ, ಕಾಶಿ ಮತ್ತು ಕಲ್ಕತ್ತ ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡಿ ವಿದ್ವತ್ ಪುರುಷರಾಗಿದ್ದರು. ಇವರ ಆಶ್ರಮದಲ್ಲಿ ಇದ್ದ ಸದಾಶಿವಯ್ಯನವರಿಗೆ ಗುರುಗಳ



ಹೆಸರನ್ನು ಗಳಿಸಿದರು. ಇದೇ ಕಂಪನಿ ಕರ್ನಾಟಕದಲ್ಲಿ ಮೈನಿಂಗ್ ಪ್ರಾರಂಭಿಸಬೇಕೆಂದು, ಸದಾಶಿವಯ್ಯನವರನ್ನು ಮೈನಿಂಗ್ ಕಂಟ್ರಾಕ್ಟರ್ ಆಗಿ ನೇಮಿಸಿಕೊಂಡರು. ಹೀಗಾಗಿ ಜಿ. ಎನ್. ಸದಾಶಿವಯ್ಯ ಮೈನಿಂಗ್ ಕಂಪನಿ ಚಿತ್ರದುರ್ಗ ಜಿಲ್ಲೆ ಸಿರಿಗೆರೆಯಲ್ಲಿ ಪ್ರಾರಂಭವಾಯಿತು. ಇಲ್ಲಿಯೂ ಸಹ ಯಶಸ್ವಿಯಾಗಿ ಕೆಲಸ ಮಾಡಿದರು. ಆದರೆ ಮನಸ್ಸಿನ ಒಂದು ಮೂಲೆಯಲ್ಲಿ ಮಾರ್ಕಂಡೇಯನಂತಾಗಬೇಕೆಂಬ ಹಂಬಲ ಇದ್ದೇ ಇತ್ತು. ಈ ಹಂಬಲ ಜಾಗೃತವಾಗಿ, ಕೆಲಸಕ್ಕೆ ತಿಲಾಂಜಲಿ ಇತ್ತು, ಮತ್ತೆ ತನ್ನ ಉದ್ದೇಶ ಸಾಧನೆಗಾಗಿ, ಹಿಮಾಲಯದತ್ತ ಮುಖ ಮಾಡಿದರು.

ಹಿಮಾಲಯದ ಹೃಷಿಕೇಶ ಮುಂತಾದ ಕಡೆ ಎಲ್ಲಾ ವಿವಿಧ ಸಾಧು, ಸನ್ಯಾಸಿ, ಯೋಗಿ, ಜೋಗಿ ಮುಂತಾದ ವರನ್ನು ಆಶ್ರಯಿಸಿ, ಅವರಲ್ಲಿರುವ ತಪಸ್ಸಿನ ಕ್ರಿಯಾ ಮರ್ಮಗಳನ್ನು ಶ್ರದ್ಧೆಯಿಂದ ಕೇಳಿ, ಕಲಿತು, ನಡೆದುದರ ಫಲ ಏನೂ ಕಾಣದೆ, ಚಿಂತಾಕ್ರಾಂತರಾಗಿ, ಪುರಾಣಗಳ

ಕಥೆ ಜ್ಞಾಪಕಕ್ಕೆ ಬಂದು, ಹಿಮಾಲಯದ ಮಾನಸ ಸರೋವರದಲ್ಲಿ ಪಾರ್ವತಿ-ಪರಮೇಶ್ವರರು ಇರುತ್ತಾರೆ ಎಂದು ಅಲ್ಲಿಗೆ ಹೋಗುತ್ತಾರೆ. ಅಲ್ಲಿ ಸುತ್ತಮುತ್ತ ನೋಡಿದಾಗ ಹಿಮದ ರಾಶಿಗಳು ಕಂಡವೇ ಹೊರತು ಪಾರ್ವತಿ-ಪರಮೇಶ್ವರ ಕಾಣಲಿಲ್ಲ. ಪುರಾಣಗಳು ಸುಳ್ಳು ಹೇಳಿವೆ ಎಂದು ಅರಿತು ನಿರಾಸೆಯಿಂದ ಹಿಂದಿರುಗಿದರು.

ಮಾನಸ ಸರೋವರದಿಂದ ಹಿಂದಿರುಗುವಾಗ ಸಾಯಂಕಾಲವಾಗಿ ಹಿಮ ಬೀಳಲು ಶುರುವಾಯಿತು. ಆ ವೇಳೆಗೆ ಕಾಡುಜನರು ತಮ್ಮ ಚರ್ಮದ ಟೆಂಟ್‌ನೊಳಗೆ ಸೇರಿಕೊಂಡು, ಇವರನ್ನು ಕೈಮಾಡಿ ಕರೆದು, ತಮ್ಮ ಡೇರೆಗೆ ಸೇರಿಸಿಕೊಂಡು ಬಾಗಿಲು ಮುಚ್ಚಿಕೊಂಡರು. ರಾತ್ರಿಯೆಲ್ಲಾ ಡೇರೆಯಲ್ಲಿದ್ದು, ಬೆಳಕಾದಾಗ ಹೊರಬಂದು, ತಮ್ಮ ಕೃತಜ್ಞತೆಯನ್ನು ಮುಗುಳುನಗೆಯಿಂದಲೇ ಸಲ್ಲಿಸಿದರು. ಇಂಥ ಪರೋಪಕಾರಿ ಬುದ್ಧಿ, ಮಾನವೀಯ ಗುಣವನ್ನು ಈ ಕಾಡುಜನರಿಗೆ ಯಾರು ಹೇಳಿಕೊಟ್ಟರು ಎಂಬ ಪ್ರಶ್ನೆ ಎದುರಾಯಿತು; ಪ್ರಕೃತಿಯೇ ಕಲಿಸಿದೆ ಎಂಬ ಉತ್ತರವೂ ಸಿಕ್ಕಿತು.

ಮಾನಸ ಸರೋವರದಿಂದ ಬರುವಾಗ ಹಿಮಕಲ್ಲುಗಳಿಂದ ಉಂಟಾದ ಕಾಲುಗಾಯವನ್ನು ಲೆಕ್ಕಿಸದೆ ನಡೆದು ಕಠ್ಮಂಡುವಿನ ಭಸ್ಮೇಶ್ವರ ತಲುಪಿದರು. ಅಲ್ಲಿದ್ದ ಪಂಡಿತ ರಾಮನಾಥ ಅಘೋರಿ ಬಾಬಾ ಆಶ್ರಮ ತಲುಪಿದರು. ಬಳಲಿದ್ದ ಇವರಿಗೆ ಔಷಧೋಪಚಾರಗಳನ್ನು ಮಾಡಿಸಿ, ತಮ್ಮ ಆಶ್ರಮದಲ್ಲಿಯೇ ಇರಲು ಹೇಳಿದರು. ಒಂದು ದಿನ ಆಶ್ರಮದಲ್ಲಿ ಹಂಸಗಳನ್ನು ನೋಡಿದರು. ಹಾಲು ಮತ್ತು ನೀರನ್ನು ಮಿಶ್ರಮಾಡಿ ಬಟ್ಟಲಿನಲ್ಲಿ ಹಂಸಗಳಿಗೆ ಕೊಟ್ಟರು. ಹಂಸಗಳು ಈ ನೀರು ಮಿಶ್ರಿತ ಹಾಲನ್ನು ಪೂರ್ತಿಯಾಗಿ ಕುಡಿದವು. ಹಂಸವು ಹಾಲನ್ನು ಮಾತ್ರ ಕುಡಿದು ನೀರನ್ನು ಬಿಡುತ್ತದೆ ಎಂಬ ಮಾತು ಜನಜನಿತವಾಗಿದೆ. ಇದಕ್ಕೆ 'ಹಂಸಕ್ಷೀರ' ನ್ಯಾಯ ಎನ್ನುತ್ತಾರೆ. ಇಲ್ಲಿ ಪರೀಕ್ಷಿಸಿದಾಗ, ಈ ಮಾತು ಸುಳ್ಳು ಎಂಬುದು ಗೊತ್ತಾಗಿ, ಹಂಸ ಜ್ಞಾನಿಯ ಸಂಕೇತವಾಗಿಯೂ, ಹಾಲು ಶ್ರೇಷ್ಠತೆಯ ಸಂಕೇತವಾಗಿಯೂ ನೀರು ಕನಿಷ್ಠತೆಯ ಸಂಕೇತವಾಗಿಯೂ ಇದೆಯೆಂದು ಅರ್ಥೈಸಿಕೊಂಡರು.

ಉಜ್ಜೈನಿಯಲ್ಲಿ, ನವರಾತ್ರಿ ಕಾಲದಲ್ಲಿ ಕಾಳಿ-ದೇವಸ್ಥಾನದ ಮುಂದೆ ಒಬ್ಬ 'ಕಾಳೀ ಭಕ್ತ' ಅನ್ನ-ನೀರನ್ನು ಬಿಟ್ಟು ಧ್ಯಾನ ಮಾಡುತ್ತಾ ಕುಳಿತಿದ್ದ. ಅವನು ಯಾರು ಏನು ಕೊಟ್ಟರೂ ತಿನ್ನದೆ ಮಹಾಕಾಳಿಯೇ ಬಂದು ಹಾಲು ಕುಡಿಸುವವರೆಗೂ ಏಳುವುದಿಲ್ಲವೆಂದು ಹಠಮಾಡಿಕೊಂಡು ಕುಳಿತು ಧ್ಯಾನಾಸಕ್ತನಾಗಿದ್ದ. ಹೀಗೆ ಅಷ್ಟಮಿಯ ದಿನ ಕಾಳಿಗೆ ಗಂಟೆ-ಜಾಗಟೆಗಳಿಂದ ಮಹಾಮಂಗಳಾರತಿಯಾಯಿತು. ಕೂಡಲೆ ಆ ಮಹಾಭಕ್ತ ಹರಿತವಾದ ಕುಡುಗೋಲೊಂದನ್ನು ಹಿಡಿದು ದೇವಾಲಯದ ಒಳಕ್ಕೆ ನುಗ್ಗಿದ; ಮಾ...ಮಾತಾ... ಎಂದು ಕೂಗಿ ಕುಡುಗೋಲಿನಿಂದ ತನ್ನ ಕುತ್ತಿಗೆಗೆ ಹೊಡೆದುಕೊಂಡ. ರಕ್ತ ಚಿಮ್ಮಿ ಸುರಿಯಲಾರಂಭಿಸಿತು. ಆ ಸಮಯದಲ್ಲಿ ಕಾಳಿ ಪ್ರತ್ಯಕ್ಷವಾಗಿ ತಡೆಯಲಿಲ್ಲ. ಕೆಲವೇ ಕ್ಷಣಗಳಲ್ಲಿ ಆ ಭಕ್ತ ನಿಸ್ತೇಜನಾದ. ಈ ಘಟನೆಯನ್ನು ನೋಡಿದ ಮೇಲೆ ಸದಾಶಿವಯ್ಯನಿಗೆ, ಈ ಪೂಜೆ, ಪುನಸ್ಕಾರಗಳೆಲ್ಲಾ ವ್ಯರ್ಥ ಪ್ರಯತ್ನಗಳೆನಿಸಿತು.

ಗುಜರಾತಿನಲ್ಲಿ ಸಂಚರಿಸುತ್ತಿದ್ದಾಗ, ಜುನಾಗಢದ 'ಗಿರ್' ಕಾಡಿನಲ್ಲಿ ಋಷಿಗಳು, ಹಗಲಿನಲ್ಲಿ ಹುಲಿವೇಷ ಧರಿಸಿ, ರಾತ್ರಿ ಕಾಲದಲ್ಲಿ ಬೆಂಕಿ ಹಾಕಿಕೊಂಡು ಮನುಷ್ಯರೂಪ ಧರಿಸಿ ಧ್ಯಾನ ಮಾಡುತ್ತಾರೆ ಎಂಬುದನ್ನು ಆ ಪ್ರದೇಶದ ಜನರಿಂದ ತಿಳಿದರು. ಅಂತಹ ಗುರುಗಳನ್ನು ಸ್ವೀಕರಿಸಿ ಸಿದ್ಧಿ ಪಡೆಯಬೇಕೆಂದು ಗಿರ್ ಕಾಡಿಗೆ ಹೋದರು. ಕಂಡ ಕಂಡ ಹುಲಿಗಳ ಹಿಂದೆ ಗುರುಬ್ರಹ್ಮ ಗುರುವಿಷ್ಣು ಗುರುಮಹೇಶ್ವರ ಎಂಬ ಮಂತ್ರವನ್ನು ಹೇಳಿಕೊಂಡು ಹೋದರೆ ಆ ಹುಲಿಗಳು ಇವರನ್ನು ನೋಡಿ ಓಡಿಹೋದುವಂತೆ! ಒಂದು ದಿನ ಮಧ್ಯಾಹ್ನ ಒಂದು ಕೊಳದ ಸಮೀಪದ ಬಂಡೆಯ ಮೇಲೆ ಹುಲಿಗಾಗಿ ಕಾದು ಕುಳಿತರು. ಹುಲಿಗಳು ಬಂದು ನೀರು ಕುಡಿದು ಹೋಗುತ್ತಿದ್ದವು. ಹುಲಿಗಳನ್ನು ಕಂಡಾಗ ಗುರುಮಂತ್ರ ಹೇಳುತ್ತಿದ್ದರು. ಒಮ್ಮೆ, ಇವರ ಬೆನ್ನ ಹಿಂದೆಯೇ ಹುಲಿ ಕುಳಿತು ಸ್ವಲ್ಪ ಕಾಲಾನಂತರ ತೇಗಿದೆ. ಆ ಬಿಸಿ ಉಸಿರು ಇವರ ಬರಿ ಮೈಗೆ ತಾಕಿ ಹಿಂದಿರುಗಿ ನೋಡಿದಾಗ, ಚಂಗನೆ ಹಾರಿ ಹೋಗಿದೆ. ಗುರು ತನ್ನನ್ನು ಪರೀಕ್ಷಿಸುತ್ತಾನೆಂದು ಆ ರಾತ್ರಿ ಕಾಡಿನಲ್ಲಿ ಎಷ್ಟು ಸುತ್ತಿದರೂ ಋಷಿಗಳು ಸಿಕ್ಕಲಿಲ್ಲ. ಜನರ ಇಂಥ ನಂಬಿಕೆಗಳೆಲ್ಲಾ ಸುಳ್ಳಿನ ಕಂತೆಗಳು ಎಂದುಕೊಂಡು ನಾಡಿನ ಕಡೆಗೆ ನಡೆದರು.

ಗುಜರಾತಿನ ಒಂದು ಹಳ್ಳಿಯ ಪಕ್ಕದಲ್ಲಿ ಒಂದು ಬೆಟ್ಟವಿತ್ತು. ಆ ಬೆಟ್ಟದಲ್ಲಿ ಒಂದು ಕೊಳವಿದೆ ಎಂತಲೂ, ಆ ಕೊಳಕ್ಕೆ ರಾತ್ರಿಕಾಲಕ್ಕೆ ದೇವತೆಗಳು ಜಲಕ್ರೀಡೆಗೆ ಬರುತ್ತಾರೆಂತಲೂ, ಅವರು ಜಲಕ್ರೀಡೆ ಆಡುವಾಗ, ಮನುಷ್ಯರನ್ನೇನಾದರು ನೋಡಿದರೆ, ಆ ಮನುಷ್ಯರು ಕಲ್ಲಾಗುತ್ತಾರೆ ಎಂತಲೂ ಆ ಹಳ್ಳಿಯ ಜನರು ಹೇಳಿದರು. ಆ ಮಾತನ್ನು ಕೇಳಿದ ಮೇಲೆ, ಆ ದೇವತೆಗಳಿಂದ ಉಪಾಯವಾಗಿ ವರ ಪಡೆಯಬೇಕೆಂದು ಯೋಚಿಸಿ, ಆ ರಾತ್ರಿ ಬೆಟ್ಟದ ಮೇಲೆ ಏರಿ, ಕೊಳದ ಸಮೀಪ ಬಚ್ಚಿಟ್ಟುಕೊಂಡರು. ದೇವತೆಗಳ ಬರುವಿಕೆಗಾಗಿ ರಾತ್ರಿಯೆಲ್ಲಾ ಕಾದರು. ಕಪ್ಪೆಗಳ ಶಬ್ದ ಕೇಳಿಸಿತೇ ಹೊರತು, ಯಾವ ದೇವತೆಗಳೂ ಬರಲಿಲ್ಲ. ಬೆಳಗಾಗಿ ಸೂರ್ಯೋದಯವಾಯಿತು. ಇಂಥ ವಿಷಯಗಳಲ್ಲಿ ಜನರು ಪರಾಮರ್ಶೆ ಮಾಡದೆ ಸುಮ್ಮನೆ ನಂಬುತ್ತಾರೆ ಎಂದುಕೊಂಡು ಮುಂದಿನ ದಾರಿ ಹಿಡಿದು ನಡೆದರು.

ಮೆಸ್‌ಮರಿಸಂ ವಿದ್ಯೆ ಕಲಿಯಬೇಕೆಂದು, ಕಲ್ಕತ್ತಾದಲ್ಲಿ ಪ್ರಸಿದ್ಧರಾದ ಪಿ. ಸಿ. ಸರ್ಕಾರ್ ಬಳಿ ಹೋಗಿ ಅವರ ಶಿಷ್ಯರಾದರು. ಚೆನ್ನಾಗಿ ಕಲಿತು ಪ್ರಾವೀಣ್ಯತೆಯನ್ನೂ ಪಡೆದರು. ಕೊನೆಗೆ ತಾನೂ ಈ ವಿದ್ಯೆಯಿಂದ ಹಣ ಸಂಪಾದಿಸಬಹುದೇ ವಿನಾ ತನ್ನ ಮೂಲ ಉದ್ದೇಶ ಈಡೇರುವುದಿಲ್ಲ ಎಂದು ಯೋಚಿಸಿ ಅಲ್ಲಿಂದ ಹೊರನಡೆದರು.

ಜ್ಯೋತಿಷ್ಯ ಶಾಸ್ತ್ರ ಕಲಿಯಬೇಕೆಂದು ಕಾಶಿಯ ಜಂಗಮವಾಡಿಗೆ ಹೋಗಿ, ಜ್ಯೋತಿಷ್ಯ ವಿದ್ವಾಂಸರಾದ ಕರಿಬಸವ ಶಾಸ್ತ್ರಿಗಳಲ್ಲಿ ಶಿಷ್ಯರಾದರು. ರೋಹಿಣಿ ನಕ್ಷತ್ರದಲ್ಲಿ ಹುಟ್ಟಿದವರೆಲ್ಲರೂ ಕೃಷ್ಣರಾಗುತ್ತಾರೆಯೇ, ಎಂದು ಕೇಳಿದರು. ಗರ್ಭಿಣಿ ಸ್ತ್ರೀಗೆ ಇಂಜೆಕ್ಷನ್ ಕೊಟ್ಟು ಒಳ್ಳೆಯ ನಕ್ಷತ್ರ ಬಂದಾಗ ಪ್ರಸವಿಸಬಹುದಲ್ಲವೆ? ತಾಯಿಯು ಗರ್ಭ ಧರಿಸಿದ ವೇಳೆಯ ನಕ್ಷತ್ರವನ್ನು ಗುರ್ತಿಸುವುದು ಹೇಗೆ? ಗ್ರಹಗಳಿಗೆ ನಮ್ಮ ಹೆಸರುಗಳು ಹೇಗೆ ಗೊತ್ತಾಗುತ್ತದೆ? ಶ್ರೀರಾಮನ ಪಟ್ಟಾಭಿಷೇಕಕ್ಕೆ ಒಳ್ಳೆಯ ಮುಹೂರ್ತವನ್ನೇ ವಸಿಷ್ಠರು ನಿಗದಿ ಮಾಡಿದ್ದರೂ, ಕಾಡಿಗೆ ಹೋಗಬೇಕಾಯ್ತು ಏಕೆ? – ಈ ಪ್ರಶ್ನೆಗಳಿಗೆ ಪಂಡಿತರಿಂದ ಸಮರ್ಪಕ ಉತ್ತರವಿರಲಿಲ್ಲ. ಅಂದಮೇಲೆ ಇದೊಂದು ಊಹೆಯ ಶಾಸ್ತ್ರ. ಕುದುರೆ ಜೂಜು ಇದ್ದಂತೆ. ಗೆದ್ದರೆ ಅದೃಷ್ಟ ಎನ್ನುತ್ತಾರೆ. ಸೋತರೆ, ಕುಜ, ರಾಹುಗಳು ಅಡ್ಡಬಂದವು ಎಂದು ನುಣಿಚಿಕೊಳ್ಳುವ ಕುತಂತ್ರ ವಿದ್ಯೆ. ಸುಳ್ಳು ಹೇಳಿಕೊಂಡು ಬದುಕುವ ವಿದ್ಯೆ ಎಂದು ಇದರಿಂದ ದೂರ ಸರಿದರು.

ಒಮ್ಮೆ ಅದೃಶ್ಯವಾಗುವ ತಂತ್ರ ಬೋಧಿಸುವ ಮಂತ್ರದ ಪುಸ್ತಕ ಮಧ್ಯಪ್ರದೇಶದ ಉಜ್ಜೈನಿಯಲ್ಲಿ ಸಿಕ್ಕಿತು. ಅದರಲ್ಲಿ ಹತ್ತು ವಿಧದ ಮೂಲಿಕೆಗಳನ್ನು ತಂದು ಕುಟ್ಟಿ ಪುಡಿ ಮಾಡಿ,



ಆ ಪುಡಿಯನ್ನು ಗೋಮೂತ್ರದಲ್ಲಿ ಅರೆದು ಅಮಾವಾಸ್ಯೆಯ ದಿನ ಮಧ್ಯರಾತ್ರಿ ನಿರ್ಜನ ಪ್ರದೇಶದಲ್ಲಿ ಬೆತ್ತಲೆಯಾಗಿ, ಪೂರ್ವಾಭಿಮುಖವಾಗಿ ನಿಂತು ಓಂ... ಐಂ... ಕ್ರೀಂ... ನಂ ಎಂದು ಮಂತ್ರ ಹೇಳುತ್ತಾ ಮೈಗೆ ಬಳಿದುಕೊಂಡರೆ ಅದೃಶ್ಯನಾಗುತ್ತಾನೆ, ಯಾರಿಗೂ ಕಾಣಿಸುವುದಿಲ್ಲ ಎಂದು ಬರೆದಿತ್ತು. ಅದರಂತೆ ಒಂಬತ್ತು ಮೂಲಿಕೆಗಳು ಬಹಳ ಸುಲಭವಾಗಿ ಸಿಕ್ಕಿದವು. ಆದರೆ ಹತ್ತನೇ ಮೂಲಿಕೆ ಎಷ್ಟು ಹುಡುಕಿದರೂ ಸಿಕ್ಕಲೇಇಲ್ಲ, ನಿರಾಸೆಯಿಂದ ಸತ್ಯವೊಂದು ಹೊಳೆಯಿತು. ಪುಸ್ತಕ ಬರೆದವನು ಈ ಪ್ರಯೋಗ ಮಾಡಿ, ಅದೃಶ್ಯನಾಗಿ ಬ್ಯಾಂಕಿನ ದುಡ್ಡು ಸುಲಭವಾಗಿ ತಂದು ಸುಖವಾಗಿರಬಹುದಾಗಿತ್ತು! ಆದರೆ ಯಾರಿಗೂ ಆಗಿಲ್ಲ, ಇಂತಹ ಪುಸ್ತಕಗಳಿಂದ ಮೋಸ ಹೋಗಬೇಡಿ ಎನ್ನುತ್ತಾರೆ.

ಉಜ್ಜೈನಿಯಲ್ಲಿ ಸಂಚರಿಸುತ್ತಿರುವಾಗ, ಕಥೆಗಳಲ್ಲಿ ಕೇಳಿದ್ದ ಬೇತಾಳನ ವಶಮಾಡಿಕೊಂಡರೆ ಏನೆಲ್ಲಾ ಸಂಪಾದಿಸಬಹುದು ಎಂದು ಹೊಳೆಯಿತು. ಕೂಡಲೇ ವಿಚಾರಿಸಿಕೊಂಡು ಬೇತಾಳವನ್ನು ವಶಪಡಿಸಿಕೊಂಡಿದ್ದ ಸ್ವಾಮೀಜಿಯ ಆಶ್ರಮಕ್ಕೆ ಬಂದು ವಿನಯದಿಂದ ಪ್ರಾರ್ಥಿಸಿ ಅವರ ಸೇವೆಯಲ್ಲಿ ತೊಡಗಿದರು. ಒಂದು ಅಮಾವಾಸ್ಯೆಯ ದಿನ ಇವರ ತಲೆ ಬೋಳಿಸಿ ಸ್ನಾನ ಮಾಡಿಸಿ ಅರಿಸಿನ ಕುಂಕುಮ ಇಟ್ಟು ಕೆಂಪು ಅಂಗಿ, ಪಂಚೆ ತೊಡಿಸಿ, ಪೂಜಾ ಸಾಮಗ್ರಿಗಳೊಂದಿಗೆ ಕ್ಷಿಪ್ರಾ ನದಿದಂಡೆಗೆ ರಾತ್ರಿ ಕರೆದುಕೊಂಡು ಬಂದು, ಇವರನ್ನು ನದಿಯಲ್ಲಿ ನಿಲ್ಲಿಸಿ ಎರಡು ಕೈ ಬೆರಳುಗಳಿಗೆ ಸೂತ್ರದಾರ ಕಟ್ಟಿ, ಆ ದಾರಗಳನ್ನು ಆ ಸ್ವಾಮಿ ತನ್ನ ಹೆಬ್ಬೆರಳಿಗೆ ಕಟ್ಟಿಕೊಂಡು ಕುಳಿತು, ಮಂಡಲ ಹಾಕಿ ಪೂಜೆ ಪ್ರಾರಂಭಿಸಿದ. ಆತನ ಪಕ್ಕದಲ್ಲಿ ಕತ್ತಿ ಸಹ ಇತ್ತು, ಆತನು ಪೂಜೆ ಮಾಡುತ್ತಿದ್ದ ವೈಖರಿ ನೋಡಿ, ಭಯಗೊಂಡು ಸದಾಶಿವಯ್ಯ ಉಪಾಯದಿಂದ ತಪ್ಪಿಸಿಕೊಂಡು ಈಜಿ ಮತ್ತೊಂದು ದಡ ಸೇರಿ ನರಬಲಿಯಾಗುವುದರಿಂದ ತಪ್ಪಿಸಿಕೊಂಡರು.

ದೇವರನ್ನು ಕಾಣಬೇಕೆಂಬ ಉದ್ದೇಶ ವಿಫಲವಾಗುತ್ತಾ ಬಂದಿತು. ನಿರಾಶಾಭಾವನೆಯಿಂದ ವಿಷ ಕುಡಿದು ಸಾಯಬೇಕೆಂದು ನಿಶ್ಚಯಿಸಿದರು. ಉಜ್ಜೈನಿಯಲ್ಲಿ ಒಂದು ದಿನ ವಿಷಕ್ಕಾಗಿ ಹುಡುಕಿದರು. ಓರ್ವ ರೈತ ತನ್ನ ಬೋರೆ ಹಣ್ಣಿನ ತೋಟಕ್ಕೆ ಫಾಲಿಡಾಲ್ ಮಿಶ್ರಿತ ದ್ರಾವಣವನ್ನು ಸಿಂಪಡಿಸುತ್ತಿದ್ದ. ಸದಾಶಿವಯ್ಯ ಆ ರೈತನ ಬಳಿಗೆ ಹೋಗಿ, ಆಶ್ರಮದ ಗಿಡಗಳಿಗೆ ಹುಳುಬಿದ್ದಿದೆ, ಸ್ವಲ್ಪ ಫಾಲಿಡಾಲ್ ಕೊಡು ಎಂದು ಕೇಳಿ ಪಡೆದ. ವಿಷ ಕುಡಿಯುವ ವೇಳೆಗೆ ದೇವರು ರಕ್ಷಿಸುತ್ತಾನೆ ಎಂಬ ನಂಬಿಕೆಯೂ ಇತ್ತು. ರಾತ್ರಿ ಹನ್ನೊಂದು ಗಂಟೆಗೆ ಸಮೀಪದ ಭೈರವ್ ಘಾಟಿಗೆ ಹೋಗಿ ದೇವರುಗಳನ್ನೆಲ್ಲಾ ಪ್ರಾರ್ಥಿಸಿ ವಿಷ ಕುಡಿದುಬಿಟ್ಟ. ಹೊಟ್ಟೆಯಲ್ಲಿ ತಳಮಳವಾಗಿ ಪ್ರಜ್ಞೆ ತಪ್ಪಿಬಿದ್ದ. ಬೆಳಗಾಯಿತು, ಸೂರ್ಯನ ಬಿಸಿಲು ಮೈಮೇಲೆ ಬಿದ್ದು, ಚುರುಗುಟ್ಟಿ ಪ್ರಜ್ಞೆ ಬರಲು ಪ್ರಾರಂಭಿಸಿತು. ನಂತರ ಕ್ಷಿಪ್ರಾ ನದಿಗೆ ನಿಧಾನವಾಗಿ ಹೋಗಿ ನೀರು ಕುಡಿದರು; ಅನೇಕ ಸಾರಿ ವಾಂತಿ-ಭೇದಿಯಾಗಿ, ಚೇತರಿಕೆಯಾಗಿ ಬದುಕಿದ. ದೇವರು ಪ್ರತ್ಯಕ್ಷವಾಗಲೇ ಇಲ್ಲ, ಕತೆಗಳನ್ನು ನಂಬಿಕೊಂಡು ಕಾರ್ಯ ಮಾಡಬಾರದು ಎಂಬ ಅರಿವು ಮೂಡಿತು.

ದೇವರ ಹುಡುಕಾಟದಲ್ಲಿ ಕಾಶ್ಮೀರದಲ್ಲಿ ತಿರುಗಾಡುತ್ತಾ ಒಂದು ಚರ್ಚಿಗೆ ಹೋದರು. ಅಲ್ಲಿ ಪಾದ್ರಿಗಳ ಪರಿಚಯವಾದ ಮೇಲೆ, ಚರ್ಚ್‌ನಲ್ಲಿ ಉಳಿದುಕೊಳ್ಳಲು ಅವಕಾಶ ಮಾಡಿಕೊಟ್ಟರು. ಪ್ರತಿ ದಿನ ಒಂದು ವ್ಯಾನ್‌ನಲ್ಲಿ ಆಹಾರ ಸಾಮಗ್ರಿಗಳನ್ನು ಬಡವರಿಗೆ ಹಂಚಲು ಬೇರೆ ಬೇರೆ ಚರ್ಚ್‌ಗಳಿಗೆ ಕಳುಹಿಸುತ್ತಿದ್ದರು. ಒಂದು ದಿನ ವ್ಯಾನ್ ಜೊತೆಯಲ್ಲಿ ಹೋಗಿ ಕೆಲವು ಚರ್ಚ್‌ಗಳಿಗೆ ಬ್ರೆಡ್, ಬಿಸ್ಕೆಟ್, ಬಟ್ಟೆ ಮುಂತಾದುವನ್ನು ಕೊಟ್ಟು ಬರಲು ಸದಾಶಿವಯ್ಯನನ್ನು ಕಳುಹಿಸಿದರು. ದಾರಿಯಲ್ಲಿ ಹೋಗುವಾಗ ಗುಡಿಸಲುಗಳನ್ನು ಮತ್ತು ಬಡಮಕ್ಕಳು ಆಟವಾಡುತ್ತಿರುವುದನ್ನು ನೋಡಿ, ವ್ಯಾನ್ ನಿಲ್ಲಿಸಿ, ವ್ಯಾನ್‌ನಲ್ಲಿದ್ದ ಆಹಾರ ಮತ್ತು ಬಟ್ಟೆಗಳನ್ನು ಅಲ್ಲಿನ ಬಡವರಿಗೆ ಹಂಚಿ ವಾಪಸ್ಸು ಚರ್ಚಿಗೆ ಬಂದರು. ಹಳ್ಳಿಯ ಪಾದ್ರಿಗಳು ತಮಗೆ ಭತ್ಯೆ ಬಂದಿಲ್ಲವೆಂದು ಫಾದರ್‌ಗೆ ತಿಳಿಸಿದರು. ಸದಾಶಿವಯ್ಯನನ್ನು ಕರೆಸಿ ವಿಚಾರಿಸಿದಾಗ, ಏನು ನಡೆದಿದೆ ಎಂಬುದು ಗೊತ್ತಾಯಿತು. ಅವರು ದೇವರಿಂದ ಶಿಕ್ಷೆಗೆ ಒಳಪಟ್ಟವರು, ಅಂಥವರಿಗೆ ಕೊಡಬಾರದು ಎಂದು ಫಾದರ್ ಹೇಳಿದರು. ಇದೇ ಏನು ಬಡವರ ಸೇವೆ, ಎಂಬ ಪ್ರಶ್ನೆ ಬಂದಿತು. ಫಾದರ್ ವರ್ತನೆ ಇವರ ಮನಸ್ಸಿಗೆ ನೋವುಂಟುಮಾಡಿತು. ಅದೇ ದಿನ ರಾತ್ರಿ ಫಾದರ್ ನಗ್ನವಾಗಿ ಓರ್ವ ನನ್ ಜೊತೆಯಲ್ಲಿ ಇದ್ದುದು ಕಂಡುಬಂದಿತು. ಇಂಥ ಅಯೋಗ್ಯ ವಾತಾವರಣದಲ್ಲಿ ಇರುವುದು ಸಮಂಜಸವಲ್ಲ ಎಂದು ಅರಿತು, ಮುಂಜಾನೆಯೇ ಚರ್ಚಿನಿಂದ ಹೊರ ಹೊರಟರು.

ಚಿಂತಾಕ್ರಾಂತರಾಗಿ ಕಾಶ್ಮೀರದಲ್ಲಿ ಅಲೆಯುತ್ತಿದ್ದಾಗ ಫಕೀರರು ಸಿಕ್ಕಿದರು. ಇವರು ಹಗಲಿನಲ್ಲಿ ಸಂಚಾರ ಮಾಡಿ, ರಾತ್ರಿ ಕಾಲದಲ್ಲಿ ಮಸೀದಿಗಳಲ್ಲಿ ಮಲಗುತ್ತಿದ್ದರು. ಮಸೀದಿಯವರು ಚಾಪೆ ಮತ್ತು ಆಹಾರ ಕೊಡುತ್ತಿದ್ದರು. ಸದಾಶಿವಯ್ಯನವರೂ ಇವರ ಜೊತೆಯಲ್ಲಿ ಮಸೀದಿಯಲ್ಲಿ ಇರುತ್ತಿದ್ದರು. ಫಕೀರರ ಜೊತೆ ಕಾಬೂಲು, ಕಾಂದಹಾರ್ ವರೆಗೂ ಹೋಗಿಬಂದರು.

ಕಾಶ್ಮೀರದಲ್ಲಿ ಒಂದು ಸೂಫಿ ಕುಟುಂಬದ ಪರಿಚಯ ವಾಯಿತು. ಅವರು ಮಸೀದಿಗೆ ಹೋಗುತ್ತಿರಲಿಲ್ಲ, ಮನೆಯಲ್ಲಿಯೇ ಪ್ರಾರ್ಥನೆ ಮಾಡುತ್ತಿದ್ದರು. ಬಡವರಾದರೂ ಅತಿಥಿ ಸತ್ಕಾರದಲ್ಲಿ ನಿಪುಣರು. ಅವರ ಮುಖ್ಯ ಉದ್ಯೋಗ ಕಸೂತಿ ಹಾಕುವುದು. ಅಂತರ್‌ಮುಖ ಧ್ಯಾನ ಮಾಡುತ್ತಿದ್ದರು.

ನಿರ್ದಿಷ್ಟ ದಾರಿ, ನಿರ್ದಿಷ್ಟ ಗುರು ಇಲ್ಲದೆ ನಿರ್ದಿಷ್ಟ ಗುರಿ ತಲುಪಲು ಸಾಧ್ಯವಿಲ್ಲ ಎಂದು ಚಡಪಡಿಸುತ್ತಿದ್ದಾಗ, ಅನುಭವಿ ಹಿರಿಯರೊಬ್ಬರು, ವಜ್ರೇಶ್ವರಿ ಸಮೀಪವಿರುವ ಗಣೇಶಪುರಿಯ ಅವಧೂತ ನಿತ್ಯಾನಂದರ ಬಳಿಗೆ ಹೋಗಲು ತಿಳಿಸಿದರು. ಆ ಹಿರಿಯರ ಸಲಹೆ ಹಾಗೂ ಅಂತರ್ ಪ್ರೇರಣೆಯಂತೆ ಸದಾಶಿವಯ್ಯ ಗಣೇಶಪುರಿಗೆ ಬಂದು, ನಿತ್ಯಾನಂದರಲ್ಲಿ ನಿವೇದಿಸಿಕೊಂಡಾಗ, ಇವರ ಆಸಕ್ತಿಯನ್ನು ಗಮನಿಸಿ 'ಸಿದ್ಧ ವಿದ್ಯಾಯೋಗ' ದೀಕ್ಷೆಯನ್ನು ಕೊಟ್ಟು ಆಶೀರ್ವದಿಸಿದರು. ಈ ಸಿದ್ಧ ವಿದ್ಯೆಯನ್ನು ಸಿದ್ಧಿಸಿಕೊಳ್ಳಲು ಹೃಷಿಕೇಶಕ್ಕೆ ತೆರಳಿದರು. ಹೃಷಿಕೇಶದಲ್ಲಿ ಯಾರೊಡನೆಯೂ ಮಾತನಾಡದೆ ಯೋಗ ಸಾಧನೆ ಮಾಡುತ್ತಿದ್ದರಿಂದ, ಅಲ್ಲಿನವರು 'ಮೌನಿಸ್ವಾಮಿ' ಎನ್ನುತ್ತಿದ್ದರು. ನಿರಂತರ ಸಾಧನೆಯಿಂದ ಸದಾಶಿವಯ್ಯ ಸದಾಶಿವಯೋಗಿಯಾದರು.

ನಂತರ ತತ್ವ ಪ್ರಚಾರಕ್ಕಾಗಿ ದೇಶ ಪರ್ಯಟನೆ ಪ್ರಾರಂಭ ಮಾಡಿದರು. ಉತ್ತರ ಪ್ರದೇಶ, ಗುಜರಾತ್, ಮಹಾರಾಷ್ಟ್ರದಲ್ಲಿ ಸಂಚರಿಸಿ, ಪುಣೆಯ ರಜನೀಶ್ ಆಶ್ರಮಕ್ಕೆ ಭೇಟಿ ಕೊಟ್ಟು, ಆತಿಥ್ಯ ಸ್ವೀಕರಿಸಿ, ಪಾಂಡಿಚೆರಿಗೆ ಬಂದು ಅರವಿಂದಾಶ್ರಮದಲ್ಲಿ ಇರಲು ಇಚ್ಛಿಸಿ ವಿಚಾರಿಸಿದಾಗ ಫಂಡ್ ಕೊಡಬೇಕು ಎಂದಿದ್ದಾರೆ. ಬರಿಕೈ ಸ್ವಾಮಿಯಾದ ಇವರು, ಅಲ್ಲಿಂದ ಆಂಧ್ರಪ್ರದೇಶದ ಕಡೆಗೆ ಸಂಚಾರ ಮಾಡಿದ್ದಾರೆ. ಸಾಲೂರಿಗೆ ಭೇಟಿಕೊಟ್ಟು ನೋಡಿದರೆ ''ಪರಮಹಂಸ'' ರಮಾನಂದರು ಕಾವಿ ತೊಟ್ಟಿದ್ದರು, ವಿಭೂತಿ ರುದ್ರಾಕ್ಷಿ ಹಾಕಿಕೊಂಡು, ಪಾದಪೂಜೆಯನ್ನು ಮಾಡಿಸಿಕೊಳ್ಳುತ್ತಿದ್ದರು. ಇದನ್ನು ಯೋಗಿಗಳು ಪ್ರಶ್ನಿಸಿದಾಗ ಅವರು ಹಾರಿಕೆ ಉತ್ತರ ಕೊಟ್ಟರು. ಅಲ್ಲಿ ಶಿಷ್ಯರ ಸಂಖ್ಯೆ ಜಾಸ್ತಿಯೂ ಆಯಿತು. ಈ ಶಿಷ್ಯರ ಕೈಗೆ ಸಿಕ್ಕಿ ಕೆಡಬಾರದೆಂದು ಯೋಚಿಸಿ, ಅಲ್ಲಿಂದ ಭಿಮ್ಮನಿ ಕಡೆಗೆ ಹೊರಟರು. ಅಲ್ಲಿದ್ದ ಸ್ವಾಮಿಯ ಶಿಷ್ಯರೊಡನೆ ಕೂಡಿ ಭಜನೆ ಮಾಡುತ್ತಿದ್ದರು. ಸಾಧನೆ ಮಾಡುವುದನ್ನು ಬಿಟ್ಟು, ಬಾಯಿ ಬಡಿದುಕೊಳ್ಳುತ್ತಿದ್ದಾರೆ ಎಂದು ಅಲ್ಲಿಂದ ಕಾಲ್ಕಿತ್ತರು.




ಮುಮ್ಮುಡಿವರಂನಲ್ಲಿ ಬಾಲಯೋಗಿಯೊಬ್ಬರು ಶಿವರಾತ್ರಿ ದಿನ ಮಾತ್ರ ಜನರಿಗೆ ದರ್ಶನ ನೀಡುತ್ತಾರೆ. ಉಳಿದ ದಿನ ಅನ್ನ ನೀರು ಇಲ್ಲದೆ ಭೂಮಿಯೊಳಗೆ ಸಮಾಧಿ ಸ್ಥಿತಿಯಲ್ಲಿ ಇರುತ್ತಾರೆ ಎಂದು ಗೊತ್ತಾಯಿತು. ಸರಿ, ಅಲ್ಲಿಗೆ ಪ್ರಯಾಣ ಬೆಳೆಸಿ, ಶಿವರಾತ್ರಿ ದಿನ ಜನರೊಂದಿಗೆ ಸಾಲಿನಲ್ಲಿ ಹೋಗಿ, ಬಾಲಯೋಗಿಯನ್ನು ಸೂಕ್ಷ್ಮವಾಗಿ ಅನೇಕ ಸಲ ಗಮನಿಸಿದರು. ಆ ವ್ಯಕ್ತಿ ಸದೃಢಕಾಯನಾಗಿದ್ದ. ಅನ್ನ ನೀರು ಬಿಟ್ಟವನು ಹೀಗಿರಲು ಸಾಧ್ಯವೇ ಇಲ್ಲ, ಅವನೊಬ್ಬ ಢೋಂಗಿ ಎಂದರಿತು ಹೊರಟರು.

ಆದಿವಾರ ಪೇಟೆಯ ಒಂದು ತೋಟದ ಗುಡಿಸಿಲಿನಲ್ಲಿ ಓರ್ವ ಅಪಾಂಗ, ಬಾಲಯೋಗಿ, ರಾಮ-ರಾಮ ಎಂದು ಜಪ ಮಾಡುತ್ತಾ ಕುಳಿತಿದ್ದ. ಅಲ್ಲಿಗೆ ಹೋಗಿ ವಿಚಾರಿಸಲಾಗಿ, ತನ್ನ ಅಸಹಾಯಕತೆಯನ್ನು ತೋಡಿಕೊಂಡು ಉಪದೇಶ ಕೊಡುವಂತೆ ಬೇಡಿಕೊಂಡ. ಅವನ ಪ್ರಾರ್ಥನೆಯನ್ನು ಮನ್ನಿಸಿ ಆ ಶಿವಬಾಲಯೋಗಿಗೆ ''ಯೋಗ ದೀಕ್ಷೆ'' ಕೊಟ್ಟು ಮುನ್ನಡೆದರು. ದಿನೇ ದಿನೇ ಪ್ರಚಾರ ಪಡೆದ ಈತನಿಗೆ ಆತನ ಶಿಷ್ಯರು ಬೆಂಗಳೂರಿನಲ್ಲಿ ದೊಡ್ಡ ಆಶ್ರಮ ಕಟ್ಟಿಸಿ
















ಕೊಟ್ಟರು. ಆದರೇನು ? ಉಪದೇಶಿಸಿದ್ದ ವಿದ್ಯೆಯನ್ನು ದುರುಪಯೋಗಪಡಿಸಿಕೊಂಡ.

ಹೀಗೆ ಆಂಧ್ರಪ್ರದೇಶದಲ್ಲಿ ಸಂಚಾರ ಮಾಡುತ್ತಾ ಕೆಲವು ಕಡೆ ಆಶ್ರಮಗಳನ್ನು ಸ್ಥಾಪಿಸಿ ಅವನ್ನು ಅಲ್ಲಿಯ ಯೋಗಾಭ್ಯಾಸಿಗಳಿಗೇ ಬಿಟ್ಟು, ಕರ್ನಾಟಕದಲ್ಲಿ ನೆಲೆ ಹುಡುಕುತ್ತಾ ಧಾರವಾಡ, ಸವದತ್ತಿ, ಸೊಗಲ, ಕೊಪ್ಪಳ ಮುಂತಾದ ಕಡೆ ಸಂಚರಿಸಿ ಹಂಪಿಗೆ ಬಂದು ಅಲ್ಲಿನ ಋಷಿಮುಖ ಪರ್ವತದ ಗುಹೆಗಳಲ್ಲಿ ವಾಸಿಸುತ್ತಿದ್ದರು. ಯಾರನ್ನೂ ಏನನ್ನೂ ಕೇಳದೆ, ಹೇಳದೆ ಒಂಟಿಯಾಗಿ ಇದ್ದು ಸಾಧನೆ ಮಾಡುತ್ತಿದ್ದ ಇವರನ್ನು ಸುತ್ತುಮುತ್ತಲಿನ ಜನ ''ಹುಚ್ಚ''ನೆಂದೇ ತಿಳಿದಿದ್ದರು.

ಹೀಗೆ ಕೆಲವು ತಿಂಗಳುಗಳ ನಂತರ, ಹಂಪೆಯ ವಿರೂಪಾಕ್ಷ ದೇವಸ್ಥಾನ ದಲ್ಲಿ ಹರಿಹರದ ನಾರಾಯಣಾಶ್ರಮದ ಸಮರ್ಥ ನಾರಾಯಣ ಮಹಾರಾಜರು ಫೆಬ್ರವರಿ ೧೯೭೧ರಲ್ಲಿ ಹತ್ತು ದಿನ ಮಹಾಯಜ್ಞ ಮಾಡಿ, ಆ ಯಜ್ಞಕುಂಡದಲ್ಲಿ ಆಂಜನೇಯ ಉದ್ಭವನಾಗುವನೆಂದು ಪ್ರಚಾರ ಮಾಡಿದರು. ಈ ಯಜ್ಞಕ್ಕಾಗಿ ಬೇಕಾದಷ್ಟು ದವಸ-ಧಾನ್ಯ-ಹಣ ಸಂಗ್ರಹವಾಯಿತು. ಯಜ್ಞದ ದಿನಗಳು ಸಮೀಪಿಸಿದಂತೆಲ್ಲಾ ಪ್ರಚಾರವೂ ಜಾಸ್ತಿಯಾಯಿತು. ಯಜ್ಞ ಪ್ರಾರಂಭವಾಯಿತು, ಯಜ್ಞಕ್ಕೆಂದು ನಾನಾ ದಿಕ್ಕುಗಳಿಂದ ಜನರು ಹಂಪಿಗೆ ಬರಲಾರಂಭಿಸಿದರು. ಈ ಜನಸಾಗರವನ್ನು ಕಂಡ ಸದಾಶಿವಯೋಗಿಯವರು, ದನ ಕಾಯುವ ಹುಡುಗರಿಂದ ಯಜ್ಞದ ವಿಷಯ ತಿಳಿದುಕೊಂಡರು. ಆಂಜನೇಯ ಉದ್ಭವವಾಗುವುದು ಅಸಂಭವ, ಇದರಲ್ಲಿ ಮೋಸ ಕೃತ್ಯವಿದೆ ಎಂದು ತುಂಗಭದ್ರ ನದಿಯನ್ನು ಈಜಿಕೊಂಡು ದಡ ಸೇರಿ, ದೇವಸ್ಥಾನದ ಬಳಿ ಬಂದು, ಯಜ್ಞ ನಡೆಸುವವರ ಬಗೆಗೆ ಅಲ್ಲಿದ್ದವರನ್ನು ವಿಚಾರಿಸಿದರು. ಅಲ್ಲಿದ್ದ ಜನರು ಕರಪತ್ರವನ್ನು ತೋರಿಸಿದರು. ಕರಪತ್ರ ಓದಿದ ಮೇಲೆ ಕಾಲಭೈರವನಂತೆ, ಯಜ್ಞಕುಂಡದಿಂದ ನಿಜವಾದ ಆಂಜನೇಯನೇ ಬರಬೇಕು ಇಲ್ಲದಿದ್ದರೆ ಇದು ಮೋಸ ಕೃತ್ಯ ಎಂದು ಆರ್ಭಟಿಸಿ, ಅಲ್ಲೇ ನಿಂತಿದ್ದ ವಿದ್ಯಾರ್ಥಿಗಳಿಂದ ಒಂದು ಹಾಳೆಯನ್ನು ಪಡೆದು, ''ಯಜ್ಞ ಸುಳ್ಳು... ಯಜ್ಞದಲ್ಲಿ ನಿಜವಾದ ಆಂಜನೇಯನೇ ಇರಬೇಕು, ಇಲ್ಲದಿದ್ದರೆ ಯಜ್ಞ ನಿಲ್ಲಿಸಿ'' ಎಂದು ಸವಾಲು ಹಾಕಿ, ಗರ್ಜಿಸಿ, ಸುಮ್ಮನೆ ನಿಂತರು. ಯಜ್ಞಕ್ಕೆ ಬಂದ ಬಹಳಷ್ಟು ಜನರು, ಇವರ ವಾದ ಸರಿಯಾಗಿದೆ, ಯಜ್ಞಕುಂಡದಿಂದ ನಿಜವಾದ ಆಂಜನೇಯನೇ ಬರಬೇಕು ಎಂದು ಕೂಗಿದರು. ಯಜ್ಞ ಮಾಡುವವರು ಯೋಗಿಗಳೊಡನೆ ರಾಜಿಗೆ ಪ್ರಯತ್ನಿಸಿದರು. ಸಾಧ್ಯವಾಗದೆ ಕಂಗಾಲಾಗಿ ಯಾಜ್ಞಿಕರು ದಿಕ್ಕಾಪಾಲಾಗಿ ಹೋದರು. ಯಜ್ಞಕುಂಡದಲ್ಲಿ ಮೊದಲೇ ಇಟ್ಟಿದ್ದ ಮೂರ್ತಿಯನ್ನು ತೆಗೆಸಿ, ಸತ್ಯ ಹೊರಹೊಮ್ಮಿಸಿದರು. ಯಜ್ಞ ನಿಂತಿತು. ಬಂದವರಿಗೆ ಪ್ರಸಾದ ಉಚಿತವಾಗಿ ಸಿಕ್ಕಿತು, ಊಟ ಮಾಡಿ ಹೊರಟರು.

ಋಷಿಮುಖ ಪರ್ವತದಿಂದ ಸದಾಶಿವಯೋಗಿಯನ್ನು ಹಂಪಿಗೆ ಕರೆದುಕೊಂಡು ಬಂದ ಕೀರ್ತಿ ಅಂದಿನ ಗ್ರಾಮ ಪಂಚಾಯತಿ ಅಧ್ಯಕ್ಷರಾಗಿದ್ದ ಶಾಂತರಾಮ್ ಸಿಂಗ್‌ಗೆ ಸಲ್ಲುತ್ತದೆ. ಸದಾಶಿವಯೋಗಿಗಳ ಇಚ್ಛೆಯಂತೆ, ವಿರೂಪಾಕ್ಷ ದೇವಸ್ಥಾನದ ಉತ್ತರ ಭಾಗಕ್ಕೆ ತುಂಗಭದ್ರ ನದಿ ದಡದಲ್ಲಿ, ಪಾಳು ಬಿದ್ದ, ದೆವ್ವದ ಗುಡಿ ಎಂದು ಕರೆಸಿಕೊಳ್ಳುತ್ತಿದ್ದ ಸ್ಥಳ ಆಶ್ರಮಕ್ಕೆ ಆಯ್ಕೆಯಾಗಿ ಒಂದು ಕುಟೀರದೊಂದಿಗೆ ಶ್ರೀ ಶಿವಾನಂದ ಯೋಗಾಶ್ರಮವಾಯಿತು. ನಿಜವಾದ ಅರ್ಥದಲ್ಲಿ ಅದು ಜಾತ್ಯತೀತ ಆಶ್ರಮವಾಯಿತು. ಜಿಜ್ಞಾಸುಗಳ ಸಂಶಯ ನಿವಾರಣ ಕೇಂದ್ರವಾಯಿತು. ''ಮಾಟ ಮಂತ್ರಗಳೆಲ್ಲ ಬರೀ ಭ್ರಮೆ, ಕೈ ಚಳಕದಿಂದ ಏನೆಲ್ಲಾ ಮಾಡುತ್ತಾರೆ! ಮಾಟದಿಂದ ಒಂದು ಇಲಿಯನ್ನು ಸಹ ಕೊಲ್ಲಲು ಸಾಧ್ಯವಿಲ್ಲ. ಆದರೆ ಹೇಗೋ ಸ್ನೇಹ ಬೆಳೆಸಿ ವಿಷಪ್ರಾಶನ ಮಾಡಿಸಿ ಸಾಯಿಸುತ್ತಾರೆ. ಇದೊಂದು ಮೋಸ ಕೃತ್ಯ. ಮಾಟ ಮಾಡುವುದು ಸತ್ಯ ಎನ್ನುವುದಾದರೆ, ಭಾರತ ಸರ್ಕಾರ ಇವರನ್ನು ಗಡಿ ಭಾಗಕ್ಕೆ ಕಳುಹಿಸಿ ಮಾಟ ಮಾಡಿಸಿ ಶತ್ರುಗಳನ್ನು ಕೊಲ್ಲಿಸಬಹುದಲ್ಲ ?'' ಎನ್ನುತ್ತಾರೆ ಸದಾಶಿವರು.

ಸಾಧುಗಳು ಬಂಗಾರ ಮಾಡುತ್ತಾರೆ ಎಂಬುದು ಶುದ್ಧ ಸುಳ್ಳು. ಮೋಸದಿಂದ ವಂಚಿಸುತ್ತಾರೆ. ನಿಜ ಎಂದು ಸಾಬೀತು ಮಾಡುವವರು ಇದುವರೆವಿಗೂ ಯಾರೊಬ್ಬರೂ

ಮುಂದೆ ಬರಲಿಲ್ಲ. ನಿಜ ಎನ್ನುವುದಾದರೆ, ಬಂಗಾರದ ಗಣಿಗಳಾಗಲಿ, ಇಂಜನಿಯರ್‌ಗಳಾಗಲಿ, ಕಾರ್ಮಿಕರಾಗಲಿ ಬೇಕಿರಲಿಲ್ಲ ಎನ್ನುವುದು ಯೋಗಿಗಳ ನಿಲುವು.

''ಅಂಜನಾ ಹಾಕಿ ನೋಡುತ್ತೇವೆ ಎನ್ನುವುದು ಮಹಾ ವಂಚನೆ. ಮುಗ್ಧ ಜನರನ್ನು ವಂಚಿಸಿ ಹಣ ದೋಚುತ್ತಾರೆ, ಅಷ್ಟೆ. ಇದು ನಿಜ ಎಂಬುದನ್ನು ಸಾಬೀತುಪಡಿಸಿದರೆ, ಭಾರತದಲ್ಲಿ ಎಲ್ಲೆಡೆ ನಡೆಯುತ್ತಿರುವ ಕೊಲೆ, ಸುಲಿಗೆ, ದರೋಡೆ ಮುಂತಾದುವನ್ನು ಪತ್ತೆಹಚ್ಚಲು ಸುಲಭವಾಗುತ್ತದೆ. ಸರ್ಕಾರ ಇವರನ್ನು ಸಿ.ಐ.ಡಿ. ಕೆಲಸಕ್ಕೆ ನೇಮಿಸಿಕೊಳ್ಳಬಹುದು. ಸಾಧ್ಯವೇ ? ಯೋಚಿಸಿ'', ಎಂಬುದು ಅವರ ಕರೆ.

ವಶೀಕರಣ ಮಂತ್ರ ಎಂಬುದು ಇಲ್ಲ, ಮಂಕುಬೂದಿ ಎರಚುವ ಜಾಲ ವಿದ್ಯೆಗಳು ಕೇವಲ ಕೈಚಳಕ. ವನಸ್ಪತಿಗಳ ಪ್ರಭಾವದಿಂದಲೂ ಭ್ರಮೆಗೊಳಿಸುತ್ತಾರೆ. ಮೋಸದಿಂದ ಅವರ ಉದ್ದೇಶ ಸಾಧಿಸಿಕೊಳ್ಳುತ್ತಾರೆ. ವಶೀಕರಣದಿಂದ ತಮಗೆ ಬೇಕಾದ ಸ್ತ್ರೀಯರನ್ನಾಗಲಿ, ಆಸ್ತಿಯನ್ನಾಗಲೀ, ಹಣವನ್ನಾಗಲಿ ವಶಮಾಡಿಕೊಂಡು ಸುಖವಾಗಿ ಬದುಕಬಹುದಲ್ಲ! ಸಾಧ್ಯವಾಗಿದೆಯೇ ? ಇದು ಅದ್ಭುತ ವಿದ್ಯೆ ಎನ್ನುವವನು, ನಿಮ್ಮಲ್ಲಿ ಯಾಚಕನಾಗಿ ಬರುತ್ತಾನೆ. ಏಕೆ ? ಎಂದು ಪ್ರಶ್ನಿಸುತ್ತಾರೆ ಅವರು.

ಕುದಿಯುವ ಎಣ್ಣೆಯಲ್ಲಿ ಕೈಯಿಟ್ಟು ಪವಾಡದಂತೆ ದೇವಿ ಭಕ್ತರು ತೋರಿಸುತ್ತಾರೆ. ಲೋಳಿಸರದಂಥ ವನಸ್ಪತಿಗಳನ್ನು ಮೊದಲೇ ಕೈಗಳಿಗೆ ಅನೇಕ ಸಾರಿ ಸವರಿಕೊಂಡು ಒಣಗಿಸಿ, ನಂತರ ಕುದಿಯುವ ಎಣ್ಣೆಗೆ ಕೈಯಿಟ್ಟರೆ ಸುಡುವುದಿಲ್ಲ ಎಂಬ ಸತ್ಯವನ್ನು ಮರೆಮಾಚಿ, ದೈವೀಶಕ್ತಿ ಎಂಬಂತೆ ಬಿಂಬಿಸಿ ಜನರಿಗೆ ದ್ರೋಹ ಬಗೆಯುತ್ತಾರೆ. ಅಗ್ನಿಕುಂಡದಲ್ಲಿ ನಡೆಯುವುದು ದೇವರ ಮಹತ್ ಏನಲ್ಲ. ಕೇವಲ ೧೫-೨೦ ಅಡಿ ಉದ್ದದ ಅಗ್ನಿಕುಂಡವನ್ನು ಕೆಲವೇ ಸೆಕೆಂಡ್‌ಗಳಲ್ಲಿ ನಡೆದುಕೊಂಡು ಹೋದರೆ ಸುಡುವುದಿಲ್ಲ, ಇದೇನು ಪವಾಡ ಅಲ್ಲ, ಭಕ್ತರಷ್ಟೇ ಅಲ್ಲ, ಯಾರು ಬೇಕಾದರೂ ನಡೆದುಹೋಗಬಹುದು, ಹೋಗುವ ಧೈರ್ಯ ಮಾಡಬೇಕಷ್ಟೆ. ಇವರ ಭಕ್ತಿ ನಿಜವೇ ಆದರೆ, ಮೂವತ್ತು ಸೆಕೆಂಡ್‌ಗಳು ಮಾತ್ರ ಕದಲದೆ ಅಗ್ನಿಕುಂಡದಲ್ಲಿ ನಿಂತು ತೋರಿಸಲಿ, ಎಂಬ ಸವಾಲು ಈ ಯೋಗಿಗಳದು.

ಸಿದ್ಧಪುರುಷರೆಂದು ಕರೆಯಲ್ಪಡುವವರು ಕೊಡುವ ಲಿಂಗ, ರುದ್ರಾಕ್ಷಿ, ವಿಭೂತಿ, ಉಂಗುರ, ಚೈನು, ಕೈಗಡಿಯಾರ ಇವೆಲ್ಲಾ ಮುಷ್ಟಿಯಲ್ಲಿ ಹಿಡಿಯುವಷ್ಟು ಮಾತ್ರವೇ ಹೊರತು ದೊಡ್ಡ ದೊಡ್ಡ ವಸ್ತುಗಳನ್ನು ಕೊಡುವುದಿಲ್ಲ ಯಾಕೆ ? ಇದು ಕೈಚಳಕ ಸಿದ್ಧಿ ಅಷ್ಟೆ, ಎಂಬ ಅನುಭವ ಸತ್ಯವನ್ನು ಅವರು ಹೇಳುತ್ತಾರೆ. ಜೀವಿಗಳ ಸೃಷ್ಟಿಗೆ ಅದರದೇ ಆದ ನಿಸರ್ಗ ನಿಯಮವಿದೆ. ಅದು ಬಿಟ್ಟು ವರಗಳಿಂದ, ಯಜ್ಞ-ಯಾಗಗಳಿಂದ ಸಾಧ್ಯವೇ ? ಇದನ್ನು ದೇವರ ಹೆಸರಿನಲ್ಲಿ ನಡೆಸುವ ಅತ್ಯಾಚಾರ ಎನ್ನಬಹುದೇ, ಎಂದು ಜಾಗೃತಿ ಮೂಡಿಸುತ್ತಾರೆ. ಆದಿಶಂಕರಾಚಾರ್ಯರ ಪರಕಾಯ ಪ್ರವೇಶವನ್ನು ಅವರು ಪ್ರಶ್ನಿಸಿದ್ದಾರೆ. ಸತ್ತ ವ್ಯಕ್ತಿಯ ಶರೀರದಲ್ಲಿ ಅನ್ಯರು ಪ್ರವೇಶ ಮಾಡಿ, ಅವನನ್ನು ಕ್ರಿಯಾಶೀಲನಾಗುವಂತೆ ಮಾಡುವುದು ಸಾಧ್ಯವಿಲ್ಲ, ಇದು ಪ್ರಕೃತಿ ನಿಯಮ, ಪರಕಾಯ ಪ್ರವೇಶ ಎಂಬುದೊಂದು ಕಟ್ಟುಕಥೆ ಅಷ್ಟೆ, ಎನ್ನುತ್ತಾರೆ ಅವರು.

ಹಕ್ಕ-ಬುಕ್ಕರು ಕನ್ನಡ ನಾಡನ್ನು ಕಟ್ಟಲು ಆರ್ಥಿಕವಾಗಿ ತೊಂದರೆಯಲ್ಲಿದ್ದಾಗ ವಿದ್ಯಾರಣ್ಯರು ತಮ್ಮ ತಪೋಬಲದಿಂದ ಸುವರ್ಣವೃಷ್ಟಿ ಮಾಡಿದರು ಎಂಬುದು ಎಷ್ಟು ಸತ್ಯ ? ಇದು ಸಾಧ್ಯವೇ ? ಸಾಧ್ಯ ಎನ್ನುವುದಾದರೆ, ಇಂದು ಭಾರತದಲ್ಲಿ ಅನೇಕ ಜಗದ್ಗುರುಗಳು, ತಪಸ್ವಿಗಳು ಇದ್ದಾರೆ. ಇವರು ಯಾರಾದರೂ ತಮ್ಮ ತಪಸ್‌ಶಕ್ತಿಯಿಂದ ಸುವರ್ಣ ವೃಷ್ಟಿಯನ್ನು ಮಾಡಿ ತೋರಿಸಿದರೆ, ಭಾರತದ ಬಡಜನರ ಕಷ್ಟವನ್ನು ನಿವಾರಣೆ ಮಾಡಬಹುದು ಎನ್ನುವ ನಿಲುವನ್ನು ಅವರು ವ್ಯಕ್ತಪಡಿಸುತ್ತಾರೆ.

ಸದಾಶಿವಯೋಗಿಯವರು ಹೃಷಿಕೇಶದಲ್ಲಿ ಇದ್ದಾಗ ದಿನಪತ್ರಿಕೆಯಲ್ಲಿ










ಒಂದು ವಿಶೇಷ ಸುದ್ದಿಯನ್ನು ಗಮನಿಸಿದರು : ರಾಜಾಸ್ಥಾನದ ಒಂದು ಹಳ್ಳಿಯ ಸಮೀಪದ ಕಾಡಿನಲ್ಲಿ, ಪಾಳುಬಿದ್ದ ದೇವಸ್ಥಾನದ ಹತ್ತಿರದಲ್ಲಿ ಓರ್ವ ಸನ್ಯಾಸಿ ತಪಸ್ಸು ಮಾಡುತ್ತಿದ್ದಾಗ, ಅವರ ಸುತ್ತ ಕುಂಬಳ ಬಳ್ಳಿ ಬೆಳೆದು ಸುತ್ತುವರೆದಿದೆ ಎಂದು. ಇದನ್ನು ನೋಡಿದ ಕೂಡಲೆ ಜಾಗೃತರಾಗಿ, ತನ್ನ ಸಹಪಾಠಿ ಸಾಧಕರಾದ ಕೃಷ್ಣಾನಂದ ಮತ್ತು ಅಚ್ಯುತಾನಂದರೊಡಗೂಡಿ ಶೋಧನೆಗೆ ಹೊರಟೇಬಿಟ್ಟರು. ಹಂತಹಂತವಾಗಿ ಪರಿಶೋಧಿಸಿದಾಗ, ಅವನೊಬ್ಬ ಪೊಲೀಸ್‌ನವರು ಹುಡುಕುತ್ತಿರುವ ಕಳ್ಳ ಎಂಬುದು ಗೊತ್ತಾಗಿ ಅವನನ್ನು ಪೊಲೀಸ್ ಸಹಾಯದಿಂದ ಠಾಣೆಗೆ ಕಳುಹಿಸಿದರು ! ಇನ್ನೊಂದು ಪ್ರಕರಣದಲ್ಲಿ, ಒಂದು ಗುಜರಾತಿ ಪತ್ರಿಕೆಯಲ್ಲಿ ಪುನರ್ಜನ್ಮದ ಬಗ್ಗೆ ಓದಿದರು. ಸೂರತ್‌ನಲ್ಲಿ ಒಬ್ಬ ವ್ಯಾಪಾರಿಯ ಹೆಂಡತಿ ಸತ್ತು ಮಹಾರಾಷ್ಟ್ರದ ರತ್ನಗಿರಿ ಸಮೀಪದ ಒಂದು ಹಳ್ಳಿಯಲ್ಲಿ ಪುನರ್‌ಜನ್ಮ ಪಡೆದಿದ್ದಾಳೆ; ಪುನಃ ಸೂರತ್‌ನ ವ್ಯಾಪಾರಿಯೊಂದಿಗೆ ವಿವಾಹವಾಗಿದ್ದಾಳೆ ಎಂಬುದೇ ಸಾರಾಂಶ. ಸದಾಶಿವಯೋಗಿಯನ್ನೊಳಗೊಂಡಂತೆ ಮೂವರು ತನಿಖೆಗಾಗಿ ಸೂರತ್ ಮತ್ತು ರತ್ನಗಿರಿ ಪಕ್ಕದ ಹಳ್ಳಿಗೆ ಹೋಗಿ ಕೂಲಂಕಶವಾಗಿ ಎಳೆಎಳೆಯಾಗಿ ಬಿಡಿಸಿ ನೋಡಿದಾಗ, ಅದು ಪೂರ್ವಯೋಜಿತ ಕಾರ್ಯ ಎಂಬುದು ಗೊತ್ತಾಯಿತು. ಹೀಗೆ ಪುನರ್ಜನ್ಮ ಎಂಬುದು ಸುಳ್ಳಿನ ಕಂತೆ ಎಂಬುದನ್ನು ಕಂಡುಕೊಂಡರು.

ಹಂಪಿಯಲ್ಲಿ ಅಯಸ್ಕಾಂತ, ಆಯುರ್ವೇದ, ನೈಸರ್ಗಿಕ, ಹೋಮಿಯೋಪತಿ, ಮಾನಸಿಕ – ಹೀಗೆ ಚಿಕಿತ್ಸೆ ಮಾಡುವುದರ ಮೂಲಕ ಸಮಾಜ ಸೇವೆ ಮಾಡುತ್ತಿದ್ದಾರೆ. ಪುಸ್ತಕ ಜ್ಞಾನಕ್ಕಿಂತ ಅವರು ಮಸ್ತಕ ಜ್ಞಾನಕ್ಕೆ ಹೆಚ್ಚು ಮಾನ್ಯತೆ ಕೊಡುತ್ತಾರೆ. ಆಸಕ್ತರಿಗೆ 'ಯೋಗ ದೀಕ್ಷೆ' ಕೊಡುತ್ತಾರೆ. ದೀಕ್ಷೆಗೆ ಮೊದಲು ''ನಾನು ಬೀಡಿ, ಸಿಗರೇಟು, ಮದ್ಯಪಾನ ಮುಂತಾದ ದುಶ್ಚಟಗಳಿಂದ ದೂರವಿರುತ್ತೇನೆ'' ಎಂದು ವಾಗ್ದಾನ ಪಡೆದು, ''ನಾನು ಕಾಯಾ-ವಾಚಾ-ಮನಸಾ ನನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿ ಪ್ರವರ್ತಕವೇ ಮಾಡುವುದಿಲ್ಲ, ಇದಕ್ಕೆ ನಿರಪರಾಧಿಯಾದ ನನ್ನ ಆತ್ಮವೇ ಸಾಕ್ಷಿ'' ಎಂಬ ಪ್ರಮಾಣ ವಚನ ಬೋಧಿಸುತ್ತಾರೆ.

ತಾನು ಮನೆ ಬಿಟ್ಟು ದೇವರನ್ನು ಹುಡುಕಲು ಹೋಗಿ, ಅನುಭವಿಸಿದ ಹಾರಾಟ - ಹೋರಾಟಗಳ ಕಥೆಯೇ 'ಭಾರತೀಯರಿಗೆ ಭಗವಂತರೆಷ್ಟು?' ಎಂಬ ಗ್ರಂಥ ಬರೆಯಲು ಅವರಿಗೆ ಪ್ರೇರೇಪಣೆಯಾಯಿತು. ತಾನು ಯೋಗ ಮಾರ್ಗದಿಂದ ಕಂಡುಕೊಂಡ ಸತ್ಯವೇ 'ಶಿರವೇ ಬ್ರಹ್ಮಾಂಡ ಜಗವೇ ಪಿಂಡಾಂಡ' ಎಂಬ ಗ್ರಂಥ. ನಿನ್ನನ್ನು ನೀನು ನೋಡಿಕೋ ಎಂಬ ತತ್ವವನ್ನು ಆಧರಿಸಿ 'ಜಗವು ನಿನ್ನೊಳಗೆ' ಎಂಬ ಗ್ರಂಥ ಹೊರಹೊಮ್ಮಿತು. 'ಶಿವ' ಎಂದರೆ, ಪ್ರತಿಯೊಬ್ಬರ ಶಿರಸ್ಸಿನಲ್ಲಿ ವಾಯುರೂಪದಲ್ಲಿ ಚಲಿಸುತ್ತಿರುವ ಚೈತನ್ಯಾತ್ಮಕ ಪ್ರಾಣವೇ ಎಂಬ ತತ್ವವನ್ನು 'ಶೈವತತ್ವ' ಎಂಬ ಗ್ರಂಥದಲ್ಲಿ ನಿರೂಪಿಸಿದ್ದಾರೆ.

ಸದಾಶಿವಯೋಗಿಗಳು ಸರಳ ಜೀವಿಗಳು. ಇವರಿಗೆ ಜ್ಞಾನವೇ ಲಾಂಛನ. ಪ್ರತಿಯೊಬ್ಬರಲ್ಲೂ ಇರುವ ಬುದ್ಧಿ, ಪ್ರಜ್ಞೆ, ಜ್ಞಾನ, ಅವನ್ನೇ ಬೇಕಾದರೆ ದೇವರು ಎಂದುಕೊಳ್ಳಬಹುದು. ಈ ದೇವರನ್ನು ಅರಿಯಲು ಮನೋ ಏಕಾಗ್ರತೆಯೊಂದೇ ಏಕೈಕ ಸಾಧನ ಎನ್ನುತ್ತಾರೆ, ಅವರು. ಅಂತರ್‌ಮುಖಿಯಾಗಿ ಏಕಾಗ್ರಚಿತ್ತರಾದರೆ, ಅರಿವಿಗೆ ಎಲ್ಲವೂ ಬರುತ್ತದೆ ಎಂಬುದೇ ಅವರ ಸ್ಪಷ್ಟೋಕ್ತಿ.

ಯಾರು ತರ್ಕಿಸುವುದಿಲ್ಲವೋ ಅವರೇ ಮತಾಂಧರು,
ಯಾರು ತರ್ಕಿಸಲಾರರೋ ಅವರೇ ಮೂರ್ಖರು,
ಯಾರು ತರ್ಕಿಸಲು ಹೆದರುತ್ತಾರೋ ಅವರೇ ಗುಲಾಮರು

– ಎನ್ನುತ್ತಾರೆ ಅವರು.

ಹಂಪಿಯ ಅವರ ಆಶ್ರಮಕ್ಕೆ ಕಾಲಿಡುತ್ತಿದ್ದಂತೆಯೇ ಒಂದು ಸೂಚನಾ ಫಲಕ ಎದ್ದು ಕಾಣುತ್ತದೆ : ''ಕಾಲಿಗೆ ಬೀಳುವ ಹೀನ ವಿಧಿ ನಮಸ್ಕಾರ ಪದ್ಧತಿಯನ್ನು ಇಲ್ಲಿ ನಿಷೇಧಿಸಲಾಗಿದೆ. ಆದ ಕಾರಣ ಇಲ್ಲಿ ಯಾರೂ ಕಾಲುಗಳಿಗೆ ಬಿದ್ದು ನಮಸ್ಕರಿಸಕೂಡದು.''

**ಎಸ್. ಸಿ. ರಂಗನಾಥ್**
ನಂ. ೯/೭, ೩ನೇ 'ಡಿ' ಮುಖ್ಯರಸ್ತೆ, ೯ನೇ ಕ್ರಾಸ್, ಸಾರಕ್ಕಿ, ಜೆ. ಪಿ. ನಗರ ೧ನೇ ಹಂತ, ಬೆಂಗಳೂರು - ೫೬೦ ೦೭೮

ನಮ್ಮ ಆಲೋಚನಾ ಕ್ರಮಗಳು ನಮ್ಮ ಅನುಭವಗಳ, ನಮಗೆ ಇಲ್ಲಿಯವರೆಗೆ ದಕ್ಕಿದ ತಿಳುವಳಿಕೆ, ಮಾಹಿತಿಗಳು ಇವುಗಳ ಬಂದಿಯಾಗಿರುತ್ತವೆ. ಹೊಸ ಸವಾಲುಗಳು ಎದುರಾದಾಗ ಅವುಗಳಿಗೆ ಪರಿಹಾರಗಳನ್ನು ಈಗಾಗಲೇ ಸಿದ್ಧವಾದ ಜ್ಞಾನದಿಂದ ಪರಿಹರಿಸಲು ಸಹಜವಾಗಿಯೇ ಮುಂದಾಗುತ್ತೇವೆ. ಹೊಸದನ್ನು ಅದರದೇ ನೆಲೆಯಿಂದ ಹೊಸದಾಗಿ ಗ್ರಹಿಸುವ ಪ್ರಯತ್ನ ಮಾಡುವುದಿಲ್ಲ. ಇದೊಂದು ರೀತಿಯ ಬುದ್ಧಿಯನ್ನು ಬಂಧಿಸುವ ತೊಡಕು. ಉದಾಹರಣೆಗೆ, ನಾವು ಈ ೭೦ರಿಂದ ೯೦ ಕೋಟಿ ಪ್ರಜಾಕೋಟಿಗೆ ಸಾಕಷ್ಟು ಸಾಧನ ಸಾಮಗ್ರಿಗಳು, ಆಹಾರ ನೀರು ಮುಂತಾದವು ಇಲ್ಲ ಎಂದು ಈಗಾಗಲೇ ಪೂರ್ವ ನಿರ್ಧಾರಕ್ಕೆ ಬಂದಿದ್ದೇವೆ. ಅದು ನಿಜವಾದರೆ ನಮ್ಮ ಮುಂದಿರುವ ಆಯ್ಕೆ ಇರುವ ಸ್ವಲ್ಪದರ ಬಹುಪಾಲು ಕಬಳಿಸಿಕೊಳ್ಳಲು ಪ್ರಾಣಿಸದೃಶ ಪೈಪೋಟಿಗೆ ಇಳಿಯುವುದು. ಈ ಪೈಪೋಟಿಯು ಹೇಗೆ ಸಾಮಾಜಿಕ ಕ್ಷೋಭೆಯಾಗುತ್ತದೆ ಎಂದು ನೋಡುತ್ತಿದ್ದೇವೆ. ಅಥವಾ ಅದು ಕೊರತೆಯಲ್ಲ ಎನ್ನುವ ಸಾಧ್ಯತೆಯನ್ನು ಹುಡುಕಬೇಕೆ ? ಆಗ ಅದನ್ನು ನಿವಾರಿಸಿಕೊಳ್ಳುವ ಮಾರ್ಗವೂ ತಿಳಿಯಬಹುದು.

ಇದನ್ನೆ ಹೀಗೂ ಗಮನಿಸಬಹುದು. ಅಮೆರಿಕದ ಆರ್ಥಿಕತೆ ಒಂದರಲ್ಲೆ ಶೇ. ೫೫-೮೭ರಷ್ಟು ಇಂಧನಶಕ್ತಿ ಅಪವ್ಯಯವಾಗುತ್ತಿದೆ. ಕಾಳು ತಿನ್ನಿಸಿ ಮಾಂಸ



# ಗೃಹೀತ ಕಲ್ಪನೆಗಳ ಅವಾಂತರ

ತಯಾರಿಸುವ ಪ್ರಕ್ರಿಯೆಯಲ್ಲೇ ಅಪಾರ ಆಹಾರ ನಾಶವಾಗುತ್ತಿದೆ. ಸುಮಾರು ೩೦೦೦ ಬೃಹದುದ್ಯಮಗಳು ಜಾಗತಿಕವಾಗಿ ೨ ಟ್ರಿಲಿಯನ್ ಡಾಲರಿನಷ್ಟು ಮೌಲ್ಯದ ಪರಿಸರ ನಾಶ - ಮಾಲಿನ್ಯ ಮಾಡುತ್ತಿವೆ. ಇವೆಲ್ಲ ಇರುವ ಸಾಧನ ಸಂಪತ್ತುಗಳ ವಿನಾಕಾರಣ ನಾಶ ಮತ್ತು ಅದೇ ಕೊರತೆಯಾಗಿ ಪರಿಣಮಿಸುತ್ತದೆ. ಇದಕ್ಕೆ ಕಾರಣವೇನು ? ನಾವು ಇರುವುದು ಮುಕ್ತ ಮಾರುಕಟ್ಟೆಯ ವ್ಯವಸ್ಥೆ ಎನ್ನುವುದು ಮತ್ತೊಂದು ಗೃಹೀತ ಚಿಂತನೆಯ ತೊಡಕು. ಇದು ನಿಜವಲ್ಲ. ನಾವು ಪ್ರಜಾಪ್ರಭುತ್ವದಲ್ಲಿದ್ದೇವೆ ಅನ್ನುವ ಇನ್ನೊಂದು ಮಿಥ್ ಕೂಡ ಇದರ ಒಳಗೆ ಸೇರಿದ್ದು. ನಾವು ಕಾಣುತ್ತಿರುವುದು ಪ್ರಜಾಪ್ರಭುತ್ವವಲ್ಲ– ಇದು ಕೆಲವೇ ಪ್ರಬಲರ ಪ್ರಭುತ್ವ-ಪ್ಲುಟೋನದು – ಸುಮಾರು ಶೇ. ೧ರಷ್ಟು ಪ್ರಬಲ ಜನ - ಶಕ್ತಿಶಾಲಿ ಬೃಹದುದ್ಯಮಗಳ ಪ್ರತಿನಿಧಿಗಳೂ - ನಮ್ಮ ಪ್ರಭುತ್ವವನ್ನು ನಿಯಂತ್ರಿಸುತ್ತಾರೆ. ಹೀಗಾಗಿ ಪ್ರಭುತ್ವವನ್ನು ಖಾಸಗಿಯಾಗಿ ನಿಯಂತ್ರಿಸಲಾಗುತ್ತಿದೆ. ಇದು ತೆಗೆದುಕೊಳ್ಳುವ ನಿರ್ಧಾರಗಳು, ತೀರ್ಮಾನಗಳು ಪಾರದರ್ಶಕವಾಗಿರುವುದಿಲ್ಲ. ಆ ತೀರ್ಮಾನಗಳು ಈ ಶೇ. ೧ರಷ್ಟು ಜನರ ಹಿತಸಾಧಕಗಳಾಗಿರುತ್ತವೆ. ಅವು, ಅದು ಕಾರಣ, ಸಾರ್ವಜನಿಕ ಹಿತವನ್ನು ಕಾಯ್ದುಕೊಳ್ಳುವುದಿಲ್ಲ. ಈ ವ್ಯವಸ್ಥೆಯ ಈ ಸ್ವರೂಪ ಬದಲಾಗಬೇಕು. ಪರಸ್ಪರ ಹೊಣೆಗಾರಿಕೆ, ಪಾರದರ್ಶಕತೆ, ಪೌರರ ಭಾಗವಹಿಸುವಿಕೆ, ಸಾರ್ವಜನಿಕ ವೆಚ್ಚದಿಂದ ಚುನಾವಣೆಗಳನ್ನು ನಡೆಸುವುದು ಇವೆಲ್ಲ ಆದಾಗ, ಪರಿಸರ ಸಂರಕ್ಷಕ ನೀತಿಗಳು ಸಾಧ್ಯ, ಇಂಥವರ, ಸಾಧನ ಸಂಪತ್ತುಗಳ ಅಪವ್ಯಯ ನಿಲ್ಲುವುದು ಸಾಧ್ಯ. ಪ್ರಜಾಪ್ರಭುತ್ವ ನೈಜವಾಗುವುದು ಸಾಧ್ಯ. ಹೀಗೆ ಹೇಳಿದಾಗಲೆಲ್ಲ ಮತ್ತೊಂದು ಗೃಹೀತ ತತ್ವದ ಭಾಷೆಯನ್ನು ನಮ್ಮ ಮೇಲೆ ಪ್ರಯೋಗಿಸಲಾಗುತ್ತದೆ. ನಾವು ಬೆಳವಣಿಗೆಯ, ಅಭಿವೃದ್ಧಿಯ ವಿರೋಧಿಗಳು ಅಂತ ಹೇಳಲಾಗುತ್ತದೆ. ಇದು ಚರ್ಚೆಯ ಮುಖ್ಯ ಗತಿಯ ಹಳಿತಪ್ಪಿಸುವ ಸಂಚು. ನಾವು ಹೇಳುತ್ತೇವೆ, ಬೆಳವಣಿಗೆಗೆ ಹೊಸ ಮೀಮಾಂಸೆ ಬರೆಯಿರಿ ಅಂತ. ಅದನ್ನು ಜಿಡಿಪಿ ಅಂತ ಹೇಳದೆ ಹೀಗೆ ಹೇಳಿದರೆ ಹ್ಯಾಗೆ ? ಇನ್ನು ಮುಂದೆ ಹೆಚ್ಚಿದ ಸಾರ್ವಜನಿಕ ಆರೋಗ್ಯ, ಸಾಮಾಜಿಕ ಸಾಮರಸ್ಯ-ಸಂತೋಷ, ಸೌಖ್ಯ, ಪರಿಸರ ಪರ ನೀತಿಗಳು, ಚಿಂತನೆ, ಸಾಧನೆ, ಪ್ರಭುತ್ವದ ಮೇಲೆ ಸಾಮಾಜಿಕ ಹಿಡಿತ ಮುಂತಾದುವುಗಳನ್ನು ಅಳೆದು, ಅಭಿವೃದ್ಧಿಯ ದರ ಲೆಕ್ಕ ಹಾಕಿದರೆ ಹೇಗೆ ?

ಮಾರುಕಟ್ಟೆ ಮುಕ್ತ ಎನ್ನುವ ಗೃಹೀತ ಕಲ್ಪನೆಗಿಂತ ಸುಳ್ಳಾದ ಗೃಹೀತ ಇನ್ನೊಂದಿಲ್ಲ. ಅದು ಸಮಾನ ಅವಕಾಶ ಇರುವವರ ನಡುವಿನ ವ್ಯವಹಾರವೇ ಅಲ್ಲ. ಬಳಕೆದಾರ ಮಾರುಕಟ್ಟೆಯನ್ನು ನಿಯಂತ್ರಿಸಲಾರ. ಬಂಡವಾಳ ವ್ಯವಸ್ಥೆ ಬಲಗೊಂಡಂತೆ, ಅದು ಏಕಸ್ವಾಮ್ಯದತ್ತ ಮುಂದುವರಿದಂತೆ ಬಳಕೆದಾರರಿಗೆ ಅವನು ಇಂಥದೇ ಸರಕು ಬೇಕೆಂದು ಒತ್ತಾಯ ಮಾಡಲಾರದಷ್ಟು ಅಸಹಾಯಕನಾಗುತ್ತಾನೆ. ಅವನು ಮುಕ್ತನಲ್ಲ. ಈ ವ್ಯವಸ್ಥೆ ಅತ್ಯಂತ ಬಲಶಾಲಿಯ ಅಧೀನವಾಗುತ್ತದೆ. ಹೀಗಾಗಿ ನಾವು ಈ ಮುಕ್ತ ಮಾರುಕಟ್ಟೆ ಎನ್ನುವ ಗೃಹೀತ ಪ್ರಣೀತದಿಂದಲೂ ಮುಕ್ತರಾಗದೆ ಇದನ್ನು ಇದು ಒಡ್ಡುವ ಸಮಸ್ಯೆಯನ್ನು ಪರಿಹರಿಸಲು, ಬದಲಾವಣೆ ತರಲು ಸಮರ್ಥರಾಗುವುದಿಲ್ಲ. ಮಾರುಕಟ್ಟೆ ಪ್ರಜಾಪ್ರಭುತ್ವಾತ್ಮಕವಲ್ಲ ಎನ್ನುವುದು ಇಂದಿನ ವಾಸ್ತವ. ತೀರದ ಆಸೆಯಿದ್ದಲ್ಲಿ ದಾರಿದ್ರ್ಯ, ತೃಪ್ತಿಯೇ ಶ್ರೀಮಂತಿಕೆ ಎನ್ನುವ ಸುಭಾಷಿತವಿದೆ. ಆದರೆ ಆಸೆಯೇ ಆರ್ಥಿಕ ಅಭಿವೃದ್ಧಿಗೆ ಪ್ರೇರಕ; ತೀರದ ಆಸೆ ನಿರಂತರ ಆರ್ಥಿಕ ಬೆಳವಣಿಗೆ ಎನ್ನುತ್ತದೆ ಆಧುನಿಕ ಬಂಡವಾಳ ವ್ಯವಸ್ಥೆಯ ಅರ್ಥಶಾಸ್ತ್ರ. ಇದೊಂದು ಗೃಹೀತ ಕಲ್ಪನೆ. ಸತ್ಯಾಂಶ ಇವೆರಡರಲ್ಲೂ ಇಲ್ಲ ಅಂತ ಅನುಭವ ಹೇಳುತ್ತದೆ. ಎಲ್ಲರ ಎಲ್ಲ ಆಸೆಗಳನ್ನು ಎಂದೂ ಪೂರೈಸಲಾಗುವುದಿಲ್ಲ. ಎಲ್ಲರ ಬಹುಮುಖ್ಯ ಅತ್ಯಗತ್ಯ ಆಸೆಗಳನ್ನು ಒಂದಿಷ್ಟು ಸಮರ್ಪಕವಾಗಿ ಪೂರೈಸುವುದು ಸಾಧ್ಯ ಎನ್ನುವುದು ವಿವೇಕದ ತಿಳಿವು. ಇದು ಸಾಧ್ಯವಾಗದಂತೆ ಅಡಚಣೆಯುಂಟಾಗುವುದು ಅಪರಿಮಿತ ಆಸೆಯ ಬೆನ್ನು ಹತ್ತಿದಾಗ ಆಗುವ ಪರಿಣಾಮಗಳಿಂದ. ಅದರಲ್ಲಿ ಬಹುಮುಖ್ಯವಾದುದು ನೆಮ್ಮದಿಯನ್ನು ಕದಡುವ ವಿಪರೀತ ಪೈಪೋಟಿ ಮತ್ತು ಸಂಪತ್ತಿನ ಕೇಂದ್ರೀಕರಣ. ಎಲ್ಲರೂ ಎಲ್ಲ ಆಸೆಗಳ ತೃಪ್ತಿಗಾಗಿ ಪೈಪೋಟಿಗೆ ಇಳಿಯುವುದು ಅನಿವಾರ್ಯ; ಕಾರಣ ಅದಕ್ಕಿರುವ ಅವಕಾಶ ಸಾಧ್ಯತೆ ಸಾಕಷ್ಟು ಎಲ್ಲರಿಗೂ ಆಗುವಷ್ಟು ಇಲ್ಲದಿರುವುದು. ಪೈಪೋಟಿಯಲ್ಲಿ ಗೆಲ್ಲುವವರು ಕೆಲವೇ ಜನ. ಆದ್ದರಿಂದ ಅವರಲ್ಲಿ ಸಂಪತ್ತಿನ ಶೇಖರಣೆ, ಕೇಂದ್ರೀಕರಣವಾಗುವುದು ಅನಿವಾರ್ಯ. ಈ ಹೆಚ್ಚು-ಕಡಿಮೆ ಸಂಪತ್ತು ಎನ್ನುವುದು ತುಲನಾತ್ಮಕವಾದುದೇ ವಿನಾ ಅದಕ್ಕೇನೂ ನಿಗದಿತ ಪ್ರಮಾಣವೇನೂ ಇಲ್ಲ, ೫ಕ್ಕೆ ಹೋಲಿಸಿದಾಗ ೧೦ ಹೆಚ್ಚು ಅನ್ನುವಂತೆ. ಈ ಕೇಂದ್ರೀಕರಣವೇ, ಅಂದರೆ ಬಹಳ ಜನಕ್ಕೆ ಅದು ದಕ್ಕದೆ ಇರುವುದೇ ಸಾಮಾಜಿಕ ಬಿಕ್ಕಟ್ಟಾಗಿ ಪರಿವರ್ತಿತವಾಗುತ್ತದೆ.

ಗೃಹೀತ ಕಲ್ಪನೆಗಳ ಹಿಂದೆ ಇರುವುದು ಚಿಂತನೆ ತನಗೆ ತಾನೇ ತೊಡಿಸಿಕೊಂಡ ಸಂಕೋಲೆ. ಅದು ಈಗಾಗಲೇ ತಿಳಿದಿರುವ ಮಾರ್ಗ, ಸಂಗತಿಗಳು, ಇಂದಿನ ಕೆಲಸವನ್ನು ಹಗುರಗೊಳಿಸುತ್ತದೆ ಎನ್ನುವ ಆಲಸ್ಯವನ್ನುಂಟುಮಾಡುತ್ತವೆ. ಹೊಸ ಸವಾಲುಗಳು, ಹೊಸ ಮಾಹಿತಿಗಳನ್ನು ಮುಂದೆ ಹಿಡಿದು ಹೊಸ ಚಿಂತನೆಗೆ ಆಗ್ರಹ ಮಾಡುತ್ತವೆ; ಒತ್ತಾಯ ಮಾಡುತ್ತವೆ. ಆ ಸವಾಲನ್ನು ಎದುರಿಸಿದರೆ ಮಾತ್ರ ಸಮಸ್ಯೆಗಳಿಗೆ ಉತ್ತಮ ಪರಿಹಾರ ದೊರಕುವುದು ಸಾಧ್ಯ. ಇಲ್ಲದಿದ್ದರೆ ನಮ್ಮ ಹಿಂದಿನವರ ತಪ್ಪುಗಳನ್ನು ಪುನಃ ಪುನಃ ಮಾಡುತ್ತಲೇ ಇರುತ್ತೇವೆ. ಪ್ರಗತಿ ಸ್ಥಗಿತಗೊಳ್ಳುತ್ತದೆ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

# ಒಲೆಯ ಸುತ್ತ

ಇತ್ತೀಚೆಗೆ ನಮ್ಮೂರ ದೇವಸ್ಥಾನಕ್ಕೆ ದರ್ಶನಾರ್ಥವಾಗಿ ಬೆಂಗಳೂರಿನಿಂದ ಬಂದಿದ್ದ ದಂಪತಿಗಳಿಗಾಗಿ ನಮ್ಮ ಸಮಿತಿಯ ಹಿರಿಯರೊಬ್ಬರು ರಾತ್ರಿ ಅಡಿಗೆ ಸಿದ್ಧ ಮಾಡುತ್ತಿದ್ದರು. ಆ ದಂಪತಿಗಳ ಪುತ್ರಿ ಅನ್ನ ಮಾಡುವುದನ್ನು ಗಾಬರಿಯಿಂದ ಬಿಟ್ಟ ಕಣ್ಣಿನಿಂದ ನೋಡುತ್ತಿದ್ದಳು. ಅದನ್ನು ಗಮನಿಸಿದ ಹಿರಿಯರು, ''ಯಾಕಮ್ಮ, ಹಾಗೆ ನೋಡ್ತಾ ಇದ್ದಿಯಾ? ಅಡುಗೆ ಮಾಡೋದು ನೋಡಿಲ್ವೆ, ಅಥವಾ ಹಸಿವೆಯಾಗಿದೆಯಾ'' ಎಂದು ಕೇಳಿದರು. ''ಅಂಕಲ್, ಅಡಿಗೆ ಈ ರೀತಿ ಮಾಡ್ತೀರಾ? ಅನ್ನ ಅದ್ಹೇಗೆ ಮಾಡ್ತೀರಿ? ವಿಸಲ್ ಕೇಳ್ತಾ ಇಲ್ಲ. ಹಿಂಗೂ ಮಾಡಬಹುದಾ'' ಎಂದು ಪ್ರಶ್ನೆ ಹಾಕಿದಳು, ಹೀಗೂ ಉಂಟೆ ಎನ್ನುವ ಧಾಟಿಯಲ್ಲಿ. ಆ ಹಿರಿಯರಿಗೆ ಅವಳಾಡಿದ ಮಾತು ಅರ್ಥವಾಗಲಿಲ್ಲ. ಅಷ್ಟರಲ್ಲಿ ಬಂದ ಅವಳ ತಾಯಿ, ''ಇಲ್ಲ ಇವರೆ, ಗ್ಯಾಸು ಕುಕ್ಕರುಗಳಿಂದ ಮಾಡುವ ಅಡಿಗೆ ನೋಡಿದ ಮಗಳಿಗೆ ಈ ಒಲೆಯ ಮೇಲೆ ಬೋಗುಣಿಯಲ್ಲಿ ಅನ್ನ ಮಾಡೋದು ಮಿರಕಲ್ ಅನಿಸುತ್ತಿದೆ'' ಎಂದು ವಿವರಣೆ ನೀಡಿದರು.

ಖರೆವ ಅದ ಅವಳ ಯೋಚನೆಯ ಧಾಟಿ. ಹಲವು ಯುಗಯುಗಾಂತರಗಳಿಂದ ಮಾನವನ ಹಸಿವನ್ನು ತಣಿಸುತ್ತ ಬಂದಿದ್ದ ಒಲೆಗಳಿಗೂ ಜಾಗತೀಕರಣದ ಕಾವು ಬಡಿಯುತ್ತಿದೆ. ಹೀಗಾಗಿ ಮಹಾನಗರಗಳಲ್ಲಿ, ಪಟ್ಟಣಗಳಲ್ಲಿ ಅವು ತಮ್ಮ ಅಸ್ತಿತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡಿವೆ. ಅಲ್ಲಲ್ಲಿ ಹೋಟೆಲ್‌ಗಳಲ್ಲಿ ಬಳಕೆಯಲ್ಲಿದ್ದರೂ ಬಹಿರಂಗವಾಗಿ ಕಾಣಬೇಕೆಲ್ಲಿ? ಇತ್ತಿತ್ತಲಾಗಿ ಹಳ್ಳಿಗಳಲ್ಲೂ ಆ ಕಾವು ಕಾಣುತ್ತಿದೆ. ಹಾಗಾಗಿ ಚಿಕ್ಕೋರಿರೋ ಕಾಲಕ್ಕೆ ಸಂತೆ ಜಾತ್ರೆಗಳಲ್ಲಿ ವಿಶೇಷವಾಗಿ ಕಾಣುತ್ತಿದ್ದ ಕುಂಬಾರನ, ಕಮ್ಮಾರನ ಒಲೆಗಳು ಬತ್ತುತ್ತಿವೆ. ರಾಜಮಹಾರಾಜರಾದಿಯಾಗಿ ಎಲ್ಲರನ್ನೂ ಒಂದು ಕಾಲಕ್ಕೆ ಸಂತುಷ್ಟಗೊಳಿಸುತ್ತಿದ್ದ ಒಲೆಗಳನ್ನು ಉಪಯೋಗಿಸುವವರು ಇಂದು ಏನೂ ಇಲ್ಲದ ಬಡವರು ಎಂದು ಭಾವಿಸುವಂತಾಗಿದೆ.

ಹಿಂದೆ ಅಡವಿಯಲ್ಲಿ ಅಥವಾ ದಾರಿಯಲ್ಲಿ ಹೋಗುತ್ತಿದ್ದವರಿಗೆ ಮನೆಯ ಒಲೆಗಳಿಂದ ಹೋಗುವ ಹೊಗೆ ದೂರದಿಂದಲೇ ಜನವಸತಿಯ ಇರುವಿಕೆಯನ್ನು ತೋರಿಸುತ್ತಿತ್ತು. ಇಂದಿಗೂ ಅರಣ್ಯಗಳಲ್ಲಿ ಕಾಡುಗಳ್ಳರನ್ನು ಹಿಡಿಯಲು, ನಕ್ಸಲರನ್ನು ಶೋಧಿಸಲು ಈ ಒಲೆಗಳೇ ಸಹಕಾರಿ. ಆದರೆ ಅದೇ ಒಲೆಗಳು ಇತಿಹಾಸದ ಪುಟ ಸೇರುತ್ತಿವೆ. ಅಡಿಗೆಮನೆ ಅಂದರೆ ಒಂದು ವಿಶಾಲವಾದ ಕೋಣೆ ಇರುತಿತ್ತು. ಅಡಿಗೆಮನೆಯಲ್ಲಿ ಒಲೆಗಳನ್ನು ವಿವಿಧ ವಿನ್ಯಾಸಗಳಲ್ಲಿ ಸಿಂಗರಿಸುತ್ತಿದ್ದರು. ಒಲೆಗಳಿಂದ ಹೊರಬರುವ ಹೊಗೆ ಮನೆಯೊಳಕ್ಕೆ ಹೊರಬಾರದಂತೆ ಕೌಶಲ್ಯಯುತ ತಂತ್ರಗಳನ್ನು ಬಳಸುತ್ತಿದ್ದರು. ಇಲ್ಲದವರು ಬೆಳಕಿಂಡಿಯ ಕೆಳಗಡೆ ಅಳವಡಿಸುತ್ತಿದ್ದರು. ವೈದಿಕರಲ್ಲಿ ಮಣ್ಣಿನ ಒಲೆಗಳನ್ನು ಬಳಸುವುದು ರೂಢಿಯಲ್ಲಿತ್ತು.

ಹಿಂದಕ ಮಣ್ಣಿನ ಚಂದನೆಯ ಮಾಳಿಗೆಗಳು ಇದ್ದವು. ಮೇಲೆ ಹತ್ತಿ ಬೆಳದಿಂಗಳ ಊಟ ಓಣಿ ಮಂದಿ ಕೂಡಿ ಮಾಡ ಸಂಭ್ರಮನ ಬ್ಯಾರೆ. ಬೆಳಿಗಿ ಕರ್ಮ ಮುಗಿಸಿದ ಮ್ಯಾಗೆ ಮಾಳಿಗೆ ಓದುವ ಸಲುವಾಗಿ ಹತ್ತಿದ್ರೆ ಮನೆಯ ಹೊಗಿಗಿಂಡಿಯಿಂದ ಮೇಲೇರಿ ಬರುತ್ತಿದ್ದ ಹೊಗೆ ಸುಂದರವಾದ ಆಕೃತಿಗಳನ್ನ ಸೃಷ್ಟಿಸಿ ಮನದಲ್ಲಿ ನೂರೆಂಟು ಭಾವನೆಗಳನ್ನು ಅರಳಿಸುತ್ತಿದ್ದವು. ಒಂದ ಮನ್ಯಾಗನ ಎರಡು ಕೋಣೆಯಿಂದ ಹೊಗಿ ಬರಾಕತಿತು ಅಂದ್ರ ಆ ಮನ್ಯಾಗ ಏನೋ ಗಡಬಡ ಆಗ್ಯಾದ ಅಂತ ಹಿರಿಯರು ಭಾವಿಸಿ, ''ಇದು ಚಂದಲ್ಲ ನೋಡಪ, ಒಂದ ಮನ್ಯಾಗ ಹಿಂಗ'' ಅಂತ ನ್ಯಾಯ ಬಗೆಹರಸಾಕ ಜನ ಹೋಗತಿದ್ರು. ಒಡೆದ ಒಲೆಗಳನ್ನ ಒಂದುಗೂಡಸಾಕ ಯತ್ನಿಸಿತಿದ್ರು. ಇಲ್ಲ ಆಗಲ್ಲಪ ಅಂದ್ರ ವೈಮನಸ್ಸು ಬರದಂಗನ ಪಾಲು ಮಾಡತಿದ್ರು. ಅವಿಭಕ್ತ ಕುಟುಂಬಗಳು ಇದ್ರಂತೂ ಮುಂಜಾನೆಯಿಂದ ರಾತ್ರಿ ತನಕ ಒಲಿಗೆ ಪುರುಸೊತ್ತ ಇರತಿರಲಿಲ್ಲ. ಆದರೆ ಈಗ ಕಾಲ ಬದಲಾಗಿದೆ ಅಂತಲ್ಲ, ಮನಸ್ಸುಗಳು ಬದಲಾಗಿವೆ.

**ಗುಂಡುರಾವ್ ದೇಸಾಯಿ ಮಸ್ಕಿ**



ನಗರದ ಶಾಲೆಯೊಂದಕ್ಕ ಭೇಟಿ ಕೊಟ್ಟಾಗ ಮಕ್ಕಳಿಗೆ ಸಹಜವಾಗಿ ಅಡಿಗೆ ಹೇಗೆ ತಯಾರಿಸುತ್ತಾರೆ, ಎಂದು ಪ್ರಶ್ನೆ ಕೇಳಿದ್ದಕ್ಕೆ ಗ್ಯಾಸಿನಿಂದ, ಸ್ಟವ್‌ನಿಂದ, ಕರೆಂಟ್‌ನಿಂದ, ಒವೆನ್‌ನಿಂದ ಎಂದರೆ ಹೊರತು ಕಟ್ಟಿಗೆ ಬಳಸಿ ಒಲೆಯಿಂದ ಅಡಿಗೆ ತಯಾರಿಸುತ್ತಾರೆ ಅಂತ ಒಂದು ಪ್ರಾಣಿಯೂ ಅನ್ನಲಿಲ್ಲ. ಇದನ್ನು ನಗರಗಳಲ್ಲಿ ಒಲೆಗೆ ಬಂದ ದೊಡ್ಡ ದುರ್ಗತಿಯೆಂದೇ ಹೇಳಬೇಕು.




ಒಲೆಯ ಮೇಲೆ ಅಡುಗೆ ಮಾಡೊದಂದ್ರೆ ಅದು ಹೆಣ್ಣು ಮಕ್ಕಳಿಗೆ ಒಂದು ತರಹನ ವ್ಯಾಯಾಮ ಆಗಿತ್ತು. ಸೌದೆ ತರಬೇಕಿತ್ತು. ಸ್ಥಿತಿವಂತರಿದ್ರೆ ಮನೆಯಲ್ಲಿ ತಂದ ಸೌದೆಯಲ್ಲಿ ಉರಿಯುವ ಯೋಗ್ಯತೆಯುಳ್ಳ ಕಟ್ಟಿಗೆ ಆಯ್ಕೆಮಾಡಿ ಒಲೆ ಹತ್ತುಸೋದು ಸಾಮಾನ್ಯನೆ ? ಕುಳ್ಳಿಗೆ ಸ್ವಲ್ಪ ಸೀಮೆಎಣ್ಣೆ ಅಥವಾ ಇನ್ನಾವುದೋ ಎಣ್ಣೆ ಹಾಕಿ ಒಲೆ ಹತ್ತಿಸುವುದಿದೆಯಲ್ಲ, ಅದು ಒಂದು ಕಲೆನ ಸರಿ. ಒಲೆ ಹಚ್ಚಲು ಬಾರದವರು ತಾಸು ಗಟ್ಟಲೆ ಒದ್ದಾಡೋರು. ಮೊನ್ನೆ ನಮ್ಮ ಜಮೀಲ ಮೇಷ್ಟ್ರು ಮಕ್ಕಳ ಲಗ್ನಕ್ಕೆ, ಅಡಿಗೆಯವನನ್ನು ರಾಯಚೂರಿನಿಂದ ಕರೆಸಿದ್ರು. ಆ ಅಡಿಗೆಯವನ ವೀಕ್‌ನೆಸ್ಸು ಒಲೆ ಮೇಲೆ ಅಡಿಗೆ ಮಾಡಲು ಬಾರದಿರುವುದು. ಆದರೆ ಅವ ಅದನ್ನ ತೋರಿಸಿಕೊಳ್ಳಾಕ ರೆಡಿ ಇಲ್ಲ. ಅವನ ಪ್ರಯತ್ನ ನೋಡತಾ ಇದ್ದೆ. ಸೀಮೆಎಣ್ಣೆ ಎಲ್ಲಾ ಖಾಲಿ ಆಯ್ತು. ಆದ್ರ ಇನ್ನೂ ಉರಿ ಹತ್ತತಾ ಇಲ್ಲ. ಸಮಯ ಆಗಕತ್ತಿತ್ತು. ಎಣ್ಣೆ ಖಾಲಿ ಆಗಿತ್ತು. ಅತ್ತಿತ್ತ ನೋಡಿದವನೆ ಒಂದು ಜಗ್ಗನ್ಯಾಗ ಅಡಿಗೆ ಎಣ್ಣೆ ಕ್ಯಾನಿನ ಡಬ್ಬವನ್ನ ಬಗ್ಗಿಸಿಕೋಂತ ಜಗ್ಗಿನ್ಯಾಗ ಹಾಕಿಕೊಂಡು ಉಗ್ಗಿದ್ದೆ ಉಗ್ಗಿದ್ದು. ನೀವು ನಂಬುತ್ತೀರೋ ಇಲ್ಲೊ, ಬರಾಬ್ಬರಿ ಎಂಟು ಜಗ್ಗ ಎಣ್ಣೆ ಉಗ್ಗಿದ್ದ. ಲಗ್ನಾ ಎಲ್ಲಾ ಮುಗಿದ ಮೇಲೆ ಮೇಷ್ಟ್ರು ಯಾರಿಗೋ ಹೇಳ್ತಿದ್ರು, ''ಏನಿಲ್ಲ, ಎಲ್ಲಾ ಲೆಕ್ಕ ಸರಿ ಸಿಗಾಕತ್ಯಾದ ಆದರ ಎಣ್ಣಿ ಲೆಕ್ಕ ಸಿಗ್ತಾ ಇಲ್ಲ'' ಅಂತ. ವಿಷಯ ಗೊತ್ತಾದ್ರೆ ನಿದ್ದಿ ಮಾಡಲ್ಲ ಅಂತ ಹೇಳಿ ಸುಮ್ಮನಾದೆನನ್ರಿ. ವಿಷಯಾಂತರಕ್ಕೆ ಕ್ಷಮೆ ಇರಲಿ. ಒಲೆ ಹಚ್ಚೋದು ಕಲೆ ಅನ್ನೋಕೆ ಇಷ್ಟೆಲ್ಲ ಹೇಳಬೇಕಾಯಿತು. ಮಾಡುವ ಪದಾರ್ಥಗಳಿಗೆ ತಕ್ಕಂತೆ ಒಲೆಯಲ್ಲಿ ಕಟ್ಟಿಗೆ ಇಡೋದಾಯ್ತು, ಕೆಂಡ ಹೊರಗ ತೆಗೆಯೋದಾಗಲಿ ಅದು ಕೌಶಲ. ಗ್ಯಾಸ ಒಲೆಯಲ್ಲಿ ಉರಿ ಹೆಚ್ಚು ಕಮ್ಮಿ ಮಾಡಿಕೊಳ್ಳಾಕ ತಿರುವುಗಳಿವೆ ಅದು ಕಷ್ಟ ಅಲ್ಲ. ಆದರ ಇದು...? ಸ್ವಲ್ಪ ಯಾಮಾರಿದ್ರೆ, ಹೊತ್ತಿರುತ್ತೆ. ಇಲ್ಲದಿದ್ರೆ ಹೊಗೆ ಸೋರಿರುತ್ತೆ. ಅದರ ಜೊತೆಯಲ್ಲಿ ಇರೋದು ಪುಟ್ಟದಾದ ಇದ್ದಲಿ ಒಲೆ. ಅದರಲ್ಲಿ ಇದ್ದಲಿಗಳನ್ನು ಹಾಕಿ ಬೇಗ ಕುದಿಯದ ಬೇಳೆ ಕಾಳು ಕಡಿಗಳನ್ನು ಬೇಯಿಸೋಕೆ ಇಡೋದು ಎಂತಹ ತಂತ್ರಜ್ಞಾನ ಅಂತೀರಾ ? ಇಷ್ಟೆಲ್ಲ ಅಡಿಗೆ ಆದ ಮೇಲೆ ಅಡಿಗೆ ಮಾಡಿದ ಸ್ಥಳವನ್ನು ಹೆಂಡಿ ಹಾಕಿ ಸ್ವಚ್ಛ ಮಾಡೋದು ಒಂದು ಕಾಯಕ. ಮಸಿ ಕುಳಿತ ಪಾತ್ರೆಗಳ ಮುಸುರಿ ತಿಕ್ಕೋದು, ತೊಳೆದು ಬಳಿಯುವುದು, ಇಷ್ಟೆಲ್ಲ ಮಾಡೋಷ್ಟರಲ್ಲಿ ಅವಳಿಗೆ ಒಳ್ಳೆ ವ್ಯಾಯಾಮ ಆಗಿರೋದು. ಈಗೆಲ್ಲಿ, ಪಾತ್ರೆ ಕಪ್ಪಾಗಿ ಮಾಡದೆ ಉರಿಸುವ ಒಲೆ ? ತೊಳೆಯೋಕೆ ಒಬ್ರು ಬಗ್ಗದಿಲ್ಲ, ದಣಕೊಳ್ಳೊದಿಲ್ಲ, ಕೆಲಸ ಹೌರಾದದಕ ದೇಹನು ಹೌಹಾರಕತದ. ಹಾಗಾಗೇ ರೋಗ ಹೆಚ್ಚಿಸಿಕೊಂಡು ವಾಕಿಂಗ್ ಅಂತ ಸ್ಟೈಲ್ ಬಡಿಯಾಕ ಹೋಗೋದು. ಅದು ಇಂಟರೆಸ್ಟ್ ಇದ್ರೂ ಇಲ್ಲದಿದ್ದರೂ...

ನಾನು ಮನೆಗೆ ಗ್ಯಾಸ ತಂದಾಗ ಎಲ್ಲರೂ ಖುಷಿಪಟ್ಟರೂ ಅತ್ತವಳು ನಮ್ಮವ್ವ. ಹೇಗೆ ಬಳಸಬೇಕೆಂಬ ಭಯದಿಂದಲ್ಲ, ಬಹುದಿನಗಳಿಂದ ಬಳಸುತ್ತ ಬಂದಿದ್ದ ಕಟ್ಟಿಗೆ ಒಲೆ ದೂರಾಗುತ್ತಲ್ಲ ಎಂಬ ಚಿಂತೆಗೆ ಒಂದು ವರ್ಷದ ತನಕ ನಿತ್ಯ ಜಗಳ. ನನಗ ಕಟ್ಟಿಗೆನ ತಂದುಕೊಡಿ ಅಂತ. ಇದು ಕೆಲಸದ ಧಾವತಿ ಕಡಿಮೆ ಮಾಡುತ್ತಿದ್ದರಿಂದ ಅವ್ವಗ ಒಂದು ರೀತಿ ಏನೋ ಕಳಕಂಡಂಗ ಆಗಿತ್ತು.

ಅಡಿಗೆ ಮಾಡಲು ಒಲೆಗಳು ಹಿಂಗ ಇರಬೇಕು, ವಿನ್ಯಾಸ ಹಾಂಗೆ ಇರಬೇಕು ಎಂದಿಲ್ಲ. ಯಾವದೋ ಜಾತ್ರೆಗೋ ದೇವಸ್ಥಾನಕ್ಕೋ ಹೋದ್ವಿ ಅಂತ ಇಟ್ಕೊಳ್ಳಿ. ಒಲೆ ಇರಲಿಕ್ಕೂ ಸಿಗು ಮೂರು ಕಲ್ಲೇ ಸಾಕು. ಎಷ್ಟು ಸರಳ ಹಾಗೂ ವೆಚ್ಚವಿಲ್ಲದ ಸಾಧನ ! ಕಾಡು ಹುಲುಸಾಗಿ ಬೆಳೆಯುತ್ತಿದ್ದುದರಿಂದ ಕಟ್ಟಿಗೆಗೆ ಬರ ಇರುತ್ತಿರಲಿಲ್ಲ. ಈಗಲೂ ಕೆಲ ಯಾತ್ರಾ ಸ್ಥಳಗಳಲ್ಲಿ ಇದೇ ಮೆಥಡ್‌ನ ಫಾಲೋ ಮಾಡತಾ ಇದ್ದಾರೆ. ಆದರೆ ಬದಲಾವಣೆ ಕಟ್ಟಿಗೆಯನ್ನ ಜೊತೆಗೆ ಒಯ್ಯೋದು. ಹಿಂಗ ಒಲೆಗಳ ಕಥಿ ಬಾಳ ದೊಡ್ಡದದ. ಒಲೆಯ ಆ ಬೂದಿ ಎಷ್ಟು ಉಪಯೋಗ ಇತ್ತು. ಈಗಿನ ವಿಮ್ ಎಕ್ಸೋಕಿಂತ ಸ್ಟ್ಯಾಂಡರ್ಡ ಮುಸುರಿ ತಿಕ್ಕೋ ಸಾಧನ ಅದಾಗಿತ್ತು. ಅದಲ್ಲದ ಹೊರಗ ದಡ್ಡಿಗೆ ಹೋದಮ್ಯಾಗ ಕೈತೊಳಕ್ಕಳ್ಳಕ ಅದು ಒಳ್ಳೆ ಕ್ಲೀನರು ಆಗುತ್ತ ಅನ್ನೋದು ಗೊತ್ತಿರಲಿಲ್ಲ. ಒಮ್ಮೆ ಧಾರವಾಡದ ಮುರುಘ ಮಠಕ್ಕೆ ಹೋಗಿದ್ದೆ. ಬಾತರೂಮ್ ಪಕ್ಕ ರಾಶಿ ಹಾಕ್ಯಾರ ಬೂದಿ. ಯಾಕ ಅಂತ ಗಾಬರಿ ಆಗಿತ್ತು. ಆದರ ಅಲ್ಲಿ ಮಕ್ಕಳು ಬಳಸುತ್ತಿದ್ದುದನ್ನು ನೋಡಿ ಅರ್ಥ ಆಯ್ತು. ಒಲೆಯ ಇದ್ದಿಲು ಹಲ್ಲಿನ ಪುಡಿಗೆ ಒಳ್ಳೆ ಪೌಡರ್ ಅಲ್ಲದೆ ಆ ಇದ್ದಲು ಹಲವಾರು ಜನರಿಗೆ ಉದ್ಯೋಗದಾತವಾಗಿದ್ವು. ಕುಲುಮೆಯವರಿಗೆ, ಬಟ್ಟೆಗಳನ್ನು ಗರಿಗರಿಯಾಗಿ ಮಾಡುವ ಇಸ್ತ್ರಿ ಮಾಡುವವರಿಗೆ, ಸೌದೆ ಒಡೆಯುವವರಿಗೆ, ಮಾರುವವರಿಗೆ ಹೀಗೆ ಒಬ್ಬರೆ, ಇಬ್ಬರೆ ಒಲೆಯಿಂದ ಉಪಕೃತರಾದವರು ! ಕಟ್ಟಿಗೆಯನ್ನು ಸುಟ್ಟು ಅಡುಗೆ ಮಾಡಿ ಉಳಿದ ಇದ್ದಿಲು ಮನೆ ಬಳಕೆಗೆ ಹೆಚ್ಚಾದಾಗ ಅದು ಆರ್ಥಿಕ ಲಾಭಕ್ಕೆ ಸಹಾಯವಾಗುತ್ತಿತ್ತು. ಆದರೆ ಗ್ಯಾಸ ಒಲೆ ಯಾವ ಪ್ರಯೋಜನಕ್ಕದ ಹೇಳಿ. ಆದರೆ ಒಲೆಗಳು ಹೋಗಿ ಸಾಂಪ್ರದಾಯಿಕ ಇಸ್ತ್ರಿ ಮಾಡುವವರು, ಕುಲುಮೆಗಾರರ ಉದ್ಯೋಗಗಳಿಗೆ ಸಂಚಕಾರ ಬಂದಿದೆ, ನಗರಗಳಲ್ಲಿ ಎಲ್ಲಿ ಸಿಗುತ್ತಿವೆ ಹೇಳಿ ಇವುಗಳು. ಅಲ್ಲದೆ, ಮನೆಯವರ ಕೈಗೆ ಸಿಗಲಾರದಂತಹ ವಸ್ತುಗಳನ್ನು ಮಂಗಮಾಯಾ ಮಾಡಕ ಎಷ್ಟು ಅನುಕೂಲ ಇದ್ದವು. ಬರೆದ ಗುಪ್ತ ಪ್ರೇಮ ಪತ್ರಗಳಿರಲಿ, ಗಂಡನನ್ನು ಹಾದಿ ತಪ್ಪಿಸುವ ಇಸ್ಪೇಟ್ ಎಲೆಗಳಿರಲಿ, ಅವುಗಳನ್ನು ಮಾಯ ಮಾಡಲು ಎಷ್ಟು ಅನುಕೂಲಕ್ಕಿತ್ತು. ಸಿಟ್ಟು ಬಂದಾಗ 'ಹೆಚ್ಚು ಮಾತಾಡಿದ್ರ ಒಲ್ಯಾಗ ಹಾಕಿ ಸುಟ್ಟುಬಿಡ್ತೀನಿ' ಎನ್ನುವಂತಹ ಮಾತುಗಳು ಕೇಳಾಕ ಇಲ್ಲದಂಗ ಆಗ್ಯಾವ.

ಒಲೆಗಳನ್ನು ಉಪಯೋಗಿಸುವಾಗ ತೋರುವ ಭಯ ಭಕ್ತಿಯನ್ನು ಅದೇ ಗ್ಯಾಸ ಸ್ಟವ್ ಒಲೆಗಳಲ್ಲಿ ಮಾಡುವಾಗ ಅಂತಹ ಬಾಂಧವ್ಯವನ್ನು ಕಾಣಲಾಗುವುದಿಲ್ಲ. ಒಂದು ಕಡೆ ಕಟ್ಟಿಗೆ ಒಲೆಯ ಮೇಲೆ ಮಾಡುವಾಗಿರುವ ಉತ್ಸಾಹ, ಪ್ರೀತಿ ಗ್ಯಾಸ ಒಲೆಗಳಲ್ಲಿ ಖಂಡಿತ ಸಿಗಲಾರವು. ಫಕ್ತಾಗಿ ನಿರ್ಮಿಸಿದ ಅಡುಗೆ ಮಾಡುವ ಸ್ಥಳಕ್ಕೆ 'ಅನ್ನಪೂರ್ಣೇಶ್ವರಿ ಪ್ರಸನ್ನ' ಅಂತ ಬರಸ್ತಾ ಇದ್ರು. ಈಗ ಮೊಬೈಲಾಗಿ ಚಲಿಸುವಂತಹ ಗ್ಯಾಸಗೆ ಏನನ್ನಬೇಕು ? ಕಟ್ಟಿಗೆ ಒಲೆಗಳು ಇವೆಲ್ಲದರ ಜೊತೆಗೆ ಎಂತಹ ಪರಿಸರ ಸ್ನೇಹಿ ! ಎಷ್ಟೇ ಕಾರ್ಬನ್ ಡೈಆಕ್ಸೈಡ್ ಬಿಟ್ಟರೂ ಹಾನಿಗೊಳಗಾದವರನ್ನು, ಅದರಿಂದ ತೊಂದರೆ ಅನುಭವಿಸಿದವರನ್ನು ನಾನು ಮಾತ್ರ ನೋಡಿಲ್ಲ. ಆದರೆ ಗ್ಯಾಸ ಹಾಗಲ್ಲ, ಸ್ವಲ್ಪ ಮೈಮರೆತರೆ ಜೀವ ತೆಗೆದುಕೊಳ್ಳುವುದರಲ್ಲಿ ಎತ್ತಿದ ಕೈ. ಒಬ್ಬರದ ಅಲ್ಲ, ಅಕ್ಕಪಕ್ಕದವರದೂ ಸೇರಿಸಿ ಬಾಕಿ ಚುಕ್ತಾ ಮಾಡಿಕೊಳ್ಳುತ್ತೆ. ಅಂತಹ ಡೇಂಜರು. ಯಾಂತ್ರೀಕರಣ ಒಲೆಯನ್ನಂತೂ ಮನೆಯಲ್ಲಿ ಈಗ ಮೂಲೆಗೆ ತಳ್ಳಿದ್ದರೂ ಹಳ್ಳಿಗಳಲ್ಲಿ ಜೀವಂತವಾಗಿದೆ, ದೊಡ್ಡ ದೊಡ್ಡ ಅಡಿಗೆಗಳಲ್ಲಿ ಬಳಕೆಯಲ್ಲಿದೆ.

ಹಿಂದಕ ಮಣ್ಣಿನ ಚಂದನೆಯ ಮಾಳಿಗೆಗಳು ಇದ್ದವು. ಮೇಲೆ ಹತ್ತಿ ಬೆಳದಿಂಗಳ ಊಟ ಓಣಿ ಮಂದಿ ಕೂಡಿ ಮಾಡ ಸಂಭ್ರಮನ ಬ್ಯಾರೆ. ಬೆಳಿಗಿ ಕರ್ಮ ಮುಗಿಸಿದ ಮ್ಯಾಗೆ ಮಾಳಿಗೆ ಓದುವ ಸಲುವಾಗಿ ಹತ್ತಿದ್ರೆ ಮನೆಯ ಹೊಗಿಗಿಂಡಿಯಿಂದ ಮೇಲೇರಿ ಬರುತ್ತಿದ್ದ ಹೊಗೆ ಸುಂದರವಾದ ಆಕೃತಿಗಳನ್ನ ಸೃಷ್ಟಿಸಿ ಮನದಲ್ಲಿ ನೂರೆಂಟು ಭಾವನೆಗಳನ್ನು ಅರಳಿಸುತ್ತಿದ್ದವು. ಒಂದ ಮನ್ಯಾಗನ ಎರಡು ಕೋಣೆಯಿಂದ ಹೊಗಿ ಬರಾಕತಿತು ಅಂದ್ರ ಆ ಮನ್ಯಾಗ ಏನೋ ಗಡಬಡ ಆಗ್ಯಾದ ಅಂತ ಹಿರಿಯರು ಭಾವಿಸಿ, ''ಇದು ಚಂದಲ್ಲ ನೋಡಪ, ಒಂದ ಮನ್ಯಾಗ ಹಿಂಗ ಅಂತ'' ನ್ಯಾಯ ಬಗೆಹರಸಾಕ ಜನ ಹೋಗತಿದ್ರು. ಒಡೆದ ಒಲೆಗಳನ್ನ ಒಂದುಗೂಡಸಾಕ ಯತ್ನಿಸಿತಿದ್ರು. ಇಲ್ಲ ಆಗಲ್ಲಪ ಅಂದ್ರ ವೈಮನಸ್ಸು ಬರದಂಗನ ಪಾಲು ಮಾಡತಿದ್ರು. ಅವಿಭಕ್ತ ಕುಟುಂಬಗಳು ಇದ್ರಂತೂ ಮುಂಜಾನೆಯಿಂದ ರಾತ್ರಿ ತನಕ ಒಲಿಗೆ ಪುರುಸೊತ್ತ ಇರತಿರಲಿಲ್ಲ. ಆದರೆ ಈಗ ಕಾಲ ಬದಲಾಗಿದೆ ಅಂತಲ್ಲ, ಮನಸ್ಸುಗಳು ಬದಲಾಗಿವೆ. ಕಾಂಕ್ರೀಟ್ ಕಟ್ಟಡಗಳು ಹುಟ್ಟಿ ಶುಭ್ರ ಗಾಳಿ ಬೆಳಕಿಗಾಗಿ ಇದ್ದ ಬೆಳಕಿಂಡಿಗಳನ್ನು ಕಸಿದಿವೆ. ಮೊದಲ ಹೇಳಿದ ಹಾಗೆ ಕಟ್ಟಿಗೆ ಉಪಯೋಗಿಸುವವರು ಬಡವರು ಅಂತ ಟ್ರೀಟ್ ಆಗತಿದಾರೆ... ಕೆಲ ವರ್ಷಗಳ ಹಿಂದ ನೀವು ಮನೆ ಹುಡಕಾಕ ಹೋದ್ರಿ ಅಂತ ಇಟ್ಟುಕೊಳ್ಳಿ. ಗ್ಯಾಸ ಇದ್ರ ಎಂಟ್ರಿ ಅಂತಿದ್ರು. ಆದ್ರ ಈಗ ಆ ಪ್ರಶ್ನೆನ ಇಲ್ಲ, ಹೊಗೆಗಿಂಡಿ ನಿರ್ಮಿಸಿದ್ದರೆ ತಾನೆ ಆ ಪ್ರಶ್ನೆ ಬರೋದು. ಇತ್ತೀಚಿಗೆ ಆ ಖಯಾಲಿ ಹೋಗ್ಯಾದ, ಯಾಕ ? ಗ್ಯಾಸು ಸರ್ವಾಂತರಯಾಮಿಯಾಗಿರುವುದರಿಂದ.

**ಗುಂಡುರಾವ್ ದೇಸಾಯಿ ಮಸ್ಕಿ**
ರಾಯಚೂರು ಜಿಲ್ಲೆ. ದೂರವಾಣಿ : ೯೭೪೦೩೪೬೩೩೮




# ಶುಕ್ರನ ನಿರ್ಗಮನ

**ಈ** ತಿಂಗಳ ಸಂಜೆಯ ಆಕಾಶದಲ್ಲಿ ಬೆಳಗುವ ಪ್ರಕಾಶಮಾನ ಚುಕ್ಕೆ ಶುಕ್ರ. ಪಶ್ಚಿಮದಲ್ಲಿ ಅತಿ ಪ್ರಖರ ಸಿರಿಯಸ್ (ಲುಬ್ಧಕ) ನಕ್ಷತ್ರವೂ ಕೂಡ ಶುಕ್ರಕ್ಕೆ ಹೋಲಿಸಿದರೆ ಮಂಕು ಎನ್ನಿಸುವುದು. ಆಗಸವನ್ನು ಗಮನಿಸುತ್ತಾ ಬನ್ನಿ. ತಿಂಗಳ ಕೊನೆಗೆ ಈ ಎರಡೂ ಪ್ರಕಾಶಮಾನ ಚುಕ್ಕೆಗಳನ್ನು ಹುಡುಕಬೇಕಾಗುವುದು. ಅವು ಸಂಜೆಗೆಂಪಿನಲ್ಲಿ ಕರಗಿಹೋಗುವುವು. ಈ ಎರಡೂ ಚುಕ್ಕೆಗಳ ನಡುವೆ ಮಹಾವ್ಯಾಧ ಪುಂಜವಿದೆ. ಅದೂ ಕೂಡ ತಿಂಗಳ ಕೊನೆಗೆ ಕಾಣೆಯಾಗುವುದು. ಮುಂದಿನ ತಿಂಗಳಲ್ಲಿ ಶುಕ್ರ ಸೂರ್ಯನ ಮುಂದೆ ಹಾದು ಹೋಗುವ ಸಂಕ್ರಮ ಎಂಬ ಘಟನೆಯ ಪೂರ್ವ ಸಿದ್ಧತೆ ಇದು. ಇದನ್ನು ಸಂಜೆ ನೋಡಲು ೨೨ರಂದು ಚಂದ್ರನ ಸಹಾಯ ಪಡೆಯಬೇಕಾಗುವುದು. ನೆತ್ತಿಯ ಮೇಲೆ ಸಿಂಹರಾಶಿಯಲ್ಲಿ ಮಂಗಳ ಇದೆ. ಮಘ ನಕ್ಷತ್ರದ ಪಕ್ಕವೇ ಹಾದುಹೋಗುವುದು. ಮಧ್ಯರಾತ್ರಿಯ ವರೆಗೂ ಕಾಣಸಿಗುವ ಇದು ೨೮ರಂದು ಚಂದ್ರನ ಪಕ್ಕದಲ್ಲಿರುವುದು.

ಪೂರ್ವದಲ್ಲಿ ಚಿತ್ರಾ ನಕ್ಷತ್ರದ ಪಕ್ಕ ಕಾಣುವುದು ಶನಿಗ್ರಹ. ಇದು ಮಧ್ಯರಾತ್ರಿಯ ನಂತರವೂ ನೋಡಲು ಸಿಗುವುದು. ೪ರಂದು ಚಂದ್ರನ ಪಕ್ಕದಲ್ಲಿರುವುದು.

ಈ ತಿಂಗಳಲ್ಲಿ ಗುರುಗ್ರಹವನ್ನು ನೋಡುವ ಅವಕಾಶ ಇಲ್ಲ. ೧೩ರಂದು ಯುತಿ ಅಂದರೆ ಅದು ಸೂರ್ಯನ ಒಡನೆಯೇ ಉದಯಿಸುತ್ತದೆ ಮತ್ತು ಅಸ್ತಮಿಸುತ್ತದೆ.

ಬುಧಗ್ರಹವನ್ನು ನೋಡುವ ಅವಕಾಶವೂ ಇಲ್ಲ. ತಿಂಗಳ ಆರಂಭದಲ್ಲಿ ಮುಂಜಾವಿನಲ್ಲಿ ಕಾಣುವ ಇದು ಸಂಜೆಗೆ ಬರುವ ಸಿದ್ಧತೆಗಾಗಿ ಸೂರ್ಯನ ಆಚೆ ಬದಿಯಿಂದ ಹಾದು ಬರುವುದು. ಈ ಬಗೆಯ ಯುತಿಗೆ ಉಚ್ಚ ಯುತಿ ಎಂಬ ಹೆಸರಿದೆ. ಇದು ೨೭ರಂದು ಸಂಭವಿಸುವುದು. (ಮುಂದಿನ ತಿಂಗಳು ಶುಕ್ರಗ್ರಹವು ಭೂಮಿ ಮತ್ತು ಸೂರ್ಯರ ನಡುವೆ ಹಾದುಹೋಗುವ ಯುತಿಗೆ ನೀಚ ಯುತಿ ಎಂದು ಹೆಸರು)

೬ರಂದು ಹುಣ್ಣಿಮೆ. ೨೦ರ ಅಮಾವಾಸ್ಯೆಯಂದು ಗ್ರಹಣವಿದೆ. ಆದರೆ ಅದು ಭಾರತದ ಈಶಾನ್ಯ ಭಾಗಗಳಿಗೆ ಮಾತ್ರ ಸೂರ್ಯೋದಯದಲ್ಲಿ ಸ್ವಲ್ಪ ಹೊತ್ತು ಗೋಚರಿಸುವುದು. ಈ ಕಂಕಣಗ್ರಹಣ ಚೀನಾದ ತೀರ ಪ್ರದೇಶಗಳು, ಜಪಾನ್ ಮತ್ತು ಅಮೆರಿಕಾದ ಪಶ್ಚಿಮದ ಕಡಲ ತೀರಗಳಿಗೆ ಕಾಣುವುದು. ನೆರಳಿನ ಹೆಚ್ಚಿನ ಭಾಗ ಸಾಗರದ ಮೇಲೆ ಬೀಳುವುದು.



*ಮೇ ೪ರ ಸಂಜೆ ಚಿತ್ರಾ–ಶನಿ–ಚಂದ್ರ*

ಉ

ಸಪ್ತರ್ಷಿ ಮಂಡಲ
ಬ್ರಹ್ಮಹೃದಯ
ವಿಜಯಸಾರಥಿ
ಶುಕ್ರ
ಸ್ವಾತಿ
ಸಿಂಹ
ಕಟಕ
ಮಿಥುನ
ಪೂ
ಪ
ಮಂಗಳ
ಕನ್ಯಾ
ಮಹಾವ್ಯಾಧ
ತುಲಾ
ಶನಿ
ಚಿತ್ರಾ
ಲುಬ್ಧಕ
ಅಜಗರ
ಮಹಾಶ್ವಾನ
ಹಸ್ತ
ಕಿನ್ನರ
ನೌಕಾಪಟ
ಅಗಸ್ತ್ಯ
ತ್ರಿಶಂಕು

ದ

ಈ ತಿಂಗಳಲ್ಲಿ ಸಾಧಾರಣವಾಗಿ ಆಕಾಶ ಅಷ್ಟೇನೂ ಶುಭ್ರವಾಗಿ ಇರುವುದಿಲ್ಲ. ಆದರೂ ಕೆಲವು ಪ್ರಕಾಶಮಾನವಾದ ಪುಂಜಗಳನ್ನು ಗುರುತಿಸಬಹುದು. ವಾಯವ್ಯದಲ್ಲಿ ಹೊಳೆಯುವ ಪ್ರಖರ ನಕ್ಷತ್ರ ಬ್ರಹ್ಮ ಹೃದಯ (ಕಪೆಲ್ಲಾ). ಇದು ವಿಜಯಸಾರಥಿ (ಆರಿಗಾ) ಪುಂಜಕ್ಕೆ ಸೇರಿದ್ದು. ಅದರ ಪಕ್ಕದಲ್ಲಿ ಮಿಥುನ, ಮಹಾವ್ಯಾಧ (ಒರೈಯನ್). ಇವು ತಿಂಗಳ ಕೊನೆಗೆ ಕಾಣದಾಗುವುವು. ರಾಶಿಚಕ್ರದ ಮಿಥುನ, ಕಟಕ, ಸಿಂಹ, ಕನ್ಯಾ ಇವುಗಳು ಕಾಣುವುವು. ಕಟಕ ಬಹಳ ಕ್ಷೀಣವಾದ ಪುಂಜ. ಪೂರ್ವದ ಅಂಚಿನಲ್ಲಿ ಕಾಣುವ ತುಲಾರಾಶಿಯೂ ಕ್ಷೀಣವೇ. ಚಿತ್ರಾ ನಕ್ಷತ್ರದ ಉತ್ತರಕ್ಕೆ ಕೆಂಪು ನಕ್ಷತ್ರ ಸ್ವಾತಿಯನ್ನು ಕಾಣಬಹುದು. ಸಪ್ತರ್ಷಿ ಮಂಡಲ ಉತ್ತರದಲ್ಲಿ ಕಾಣುವುದು. ಚಿತ್ರಾದ ದಕ್ಷಿಣದಲ್ಲಿ ಹಸ್ತಾ ಅದಕ್ಕೂ ದಕ್ಷಿಣಕ್ಕೆ ಆಗ್ನೇಯ ದಿಕ್ಕಿನಲ್ಲಿ ತ್ರಿಶಂಕು ಕಾಣುವುದು.

**ಖಗೋಳ ದಿನಚರಿ**

ಮೇ ೧ ಸಂಜೆ ಚಂದ್ರ ಮತ್ತು ಮಂಗಳ ಜೋಡಿ
೪ ಸಂಜೆ ಚಿತ್ರಾ - ಶನಿ - ಚಂದ್ರ ಪುಟ್ಟತ್ರಿಕೋಣ
೬ ಹುಣ್ಣಿಮೆ ಮುಂಜಾವು ೦೮:೦೪ಕ್ಕೆ ; ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ
೭ ಚಂದ್ರ - ಜ್ಯೇಷ್ಠಾ ಜೋಡಿ
೧೨ ಚಾಂದ್ರಮಾಸದ ಕೊನೆಯ ಪಾದ; ಚಂದ್ರೋದಯ ನಡುರಾತ್ರಿಗೆ
೧೩ ಗುರುಗ್ರಹದ ಯುತಿ
೧೫ ಶುಕ್ರಗ್ರಹದ ಹಿನ್ನಡೆ ಆರಂಭ
೧೯ ಚಂದ್ರ - ಭೂಮಿ ನಡುವೆ ಅಂತರ ಗರಿಷ್ಠ
೨೧ ಅಮಾವಾಸ್ಯೆ ೦೪:೩೦ಕ್ಕೆ
೨೨ ಶುಕ್ರ - ಚಂದ್ರ ಜೋಡಿ
೨೭ ಬುಧಗ್ರಹದ ಯುತಿ
೨೮ ಮಘ - ಚಂದ್ರ ಜೋಡಿ; ಚಾಂದ್ರಮಾಸದ ಮೊದಲ ಪಾದ

ಜೂನ್ ೬ರಂದು ನಡೆಯುವ ವಿಶೇಷ ಘಟನೆ ಶುಕ್ರಗ್ರಹದ ಸಂಕ್ರಮ ಭಾರತದ ಎಲ್ಲಾ ಭಾಗಗಳಿಂದಲೂ ಸೂರ್ಯೋದಯದಿಂದ ಸುಮಾರು ೧೦ ಗಂಟೆಯವರೆಗೂ ಕಾಣುತ್ತದೆ. ಸೂರ್ಯನನ್ನು ನೋಡಲು ಅನುಸರಿಸುವ ಎಲ್ಲಾ ಮುನ್ನೆಚ್ಚರಿಕೆ ಕ್ರಮಗಳನ್ನೂ ಕೈಗೊಂಡು ಸೂರ್ಯನ ಮೇಲೊಂದು ಕಪ್ಪು ಚುಕ್ಕೆಯನ್ನು ಕಂಡು ಆನಂದಿಸಬಹುದು. ಮುಂದಿನ ಅವಕಾಶ ೨೧೧೭ಕ್ಕೆ ಮಾತ್ರ !!

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧




## ಟಿಪ್ಪು ಸುಲ್ತಾನ

**(ಸ್ವತಂತ್ರ ಕರ್ನಾಟಕದ ಹರಿಕಾರ)**

*ಪ್ರೊ|| ಶಿವರಾಮಯ್ಯ*

**ಪುಟ : viii + ೧೬೮**

**ಬೆಲೆ : ರೂ. ೧೨೦**

**ಧಾತ್ರಿ ಪುಸ್ತಕ,** ನಂ. ೧೭೦
೩ನೇ 'ಸಿ' ಕ್ರಾಸ್
ವಿನಾಯಕ ಲೇಔಟ್
ನಾಗರಬಾವಿ ೨ನೇ ಹಂತ, ಬೆಂಗಳೂರು - ೫೬೦ ೦೭೨

*ಮೈಸೂರಿನ ಹುಲಿ ಎಂದೇ ಪ್ರಸಿದ್ಧನಾಗಿದ್ದ ಟಿಪ್ಪು ಸುಲ್ತಾನ್ ಬ್ರಿಟಿಷ್ ಆಡಳಿತಗಾರರ ನಿದ್ದೆಕೆಡಿಸಿದ ಶೂರ. ಮೊಘಲ್ ಆಡಳಿತ ಶಿಥಿಲಗೊಂಡು ಆಂಗ್ಲರ ಕೈ ಮೇಲಾಗಿ ವಸಾಹತು ಶಾಹಿ ಪ್ರಾಬಲ್ಯ ಹೆಚ್ಚಿಸಿಕೊಳ್ಳಲು ಇನ್ನಿಲ್ಲದಂತೆ ಕಸರತ್ತು ಮಾಡುತ್ತಿದ್ದ ಕಾಲವದು. ಟಿಪ್ಪುವಿನಂತೆಯೇ ಭಾರತದ ಇತರ ತುಂಡರಸರು ಸೆಟೆದು ನಿಲ್ಲುತ್ತಿದ್ದರೆ, ಒಗ್ಗಟ್ಟಾಗಿ ಇರುತ್ತಿದ್ದರೆ ಬಿಳಿಯರಿಂದ ಏನೂ ಮಾಡಲಾಗುತ್ತಿದ್ದಿಲ್ಲ ವೆಂಬುದು ಚರಿತ್ರೆ ಓದಿದ ಎಲ್ಲರಿಗೂ ಅರ್ಥವಾಗುವ ವಿಷಯವೇ. ತಾನು ನಂಬಿದವರೇ ದ್ರೋಹ ಬಗೆದದ್ದು ಕೂಡ ಟಿಪ್ಪುವಿನ ಅವಸಾನಕ್ಕೆ ಒಂದು ಪ್ರಧಾನ ಕಾರಣ. ಆತ ಧರ್ಮಾಂಧ ರಾಜನಾಗಿರಲಿಲ್ಲ; ಬಲಿಷ್ಠ ಮೈಸೂರು ಸಂಸ್ಥಾನವನ್ನು ಕಟ್ಟಲು ತುಂಬ ಶ್ರಮಿಸಿದ್ದ. ಶೃಂಗೇರಿ, ಮೇಲುಕೋಟೆ ಮಠ, ದೇವಸ್ಥಾನಗಳನ್ನು ಗೌರವಿಸುತ್ತ ಇದ್ದುದಲ್ಲದೆ ಅನೇಕ ಉಂಬಳಿಗಳನ್ನೂ ನೀಡಿದ್ದ. ಲಾರ್ಡ್ ವೆಲ್ಲೆಸ್ಲಿ ಹಾಗೂ ಕಾರ್ನ್‌ವಾಲೀಸ್‌ರವರ ಆಡಳಿತ ಕಾಲದಲ್ಲಿ ಟಿಪ್ಪು ಸುಲ್ತಾನನ ಶ್ರೀರಂಗಪಟ್ಟಣದ ಕೋಟೆಯನ್ನು ನಾನಾರೀತಿಯ ಸಂಚು ರೂಪಿಸಿ ವಶಪಡಿಸಿಕೊಂಡದ್ದಲ್ಲದೆ ಸೋತ ಟಿಪ್ಪು ಸುಲ್ತಾನನಿಗೆ ತುಂಬ ಕಿರುಕುಳ ನೀಡಿ ಪ್ರಾಣಕ್ಕಿಂತ ಪ್ರಿಯವಾಗಿದ್ದ ಅವನ ಮಕ್ಕಳನ್ನು ಒತ್ತೆಯಿರಿಸಿಕೊಂಡದ್ದಂತೂ ಮನಕಲಕುವ ಘಟನೆ. ಬ್ರಿಟಿಷರೊಂದಿಗೆ ಆತ ನಡೆಸಿದ ಮೈಸೂರು ಯುದ್ಧವು ಇತಿಹಾಸದಲ್ಲಿ ರಕ್ತರಂಜಿತವಾಗಿ ದಾಖಲಾಗಿದೆ.*

## ಅಂಚೆ ಅಂಟು ಪರದೆ ನಂಟು (ಚಲನಚಿತ್ರರಂಗದ ಪಿತಾಮಹನಿಂದ ಅಣ್ಣನವರೆಗೆ)

*ಉಮೇಶ್ ಕುಲಕರ್ಣಿ*

**ಪುಟ : ೧೦೬ + ೮೬** **ಬೆಲೆ : ರೂ. ೨೯೫**

**ಆಕೃತಿ ಪುಸ್ತಕ,** ನಂ. ೩೧/೧, ೧೨ನೇ ಮುಖ್ಯರಸ್ತೆ, ೩ನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು - ೫೬೦ ೦೧೦

*ಚಲನಚಿತ್ರರಂಗದ ಅದೆಷ್ಟೋ ಪ್ರತಿಭೆಗಳಿಗೆ ಭಾರತ ಸರಕಾರ ಬಿಡುಗಡೆಗೊಳಿಸುವ ಅಂಚೆಚೀಟಿಗಳಲ್ಲಿ ರಾರಾಜಿಸುವ ಯೋಗ ಲಭಿಸಿದೆ. ಈ ಗೌರವವನ್ನು ಪಡೆದ ಅರವತ್ತೈದು ಮಂದಿಯನ್ನು ಅವರ ಬದುಕು-ಸಾಧನೆಗಳ ಸಹಿತ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಇಲ್ಲಿ ನಟರು, ಸಂಗೀತಗಾರರು, ಗಾಯಕರು, ಚಿತ್ರಸಾಹಿತಿಗಳಷ್ಟೇ ಅಲ್ಲದೆ ಸಿನಿಮಾಗೆ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧಿಸಿದ ಕಲಾಕಾರರಿದ್ದಾರೆ. ನಾವು ಇವರೆಲ್ಲರು ದುಡಿದ ಚಲನಚಿತ್ರಗಳನ್ನು ನೋಡಿಯೇ ಇರುತ್ತೇವೆ. ತೆರೆಯ ಮೇಲೆ ಅವರ ಮನೋಜ್ಞ ಅಭಿನಯವನ್ನು ಮೆಚ್ಚಿ ಅವರ ಆರಾಧಕರಾಗುತ್ತೇವೆ. ಆದರೆ ಇವರ ಬದುಕಿನ ಹಿನ್ನೆಲೆಯ ನೋವೋ ನಲಿವೋ ನಮಗೆ ತಿಳಿದಿರುವುದಿಲ್ಲ. ಸಾಧನೆಯ ಉತ್ತುಂಗದಲ್ಲಿದ್ದು ಜನಮನ ರಂಜಿಸಿದ ಕಲಾವಿದರನ್ನು ಅವರ ಮಾನವ ಸಹಜ ದೌರ್ಬಲ್ಯಕ್ಕಾಗಿಯೋ ಜಾತಿಮತಗಳ ಕಾರಣಕ್ಕಾಗಿಯೋ ಕೇವಲವಾಗಿ ಮಾತನಾಡುತ್ತೇವೆ. ಇವರಲ್ಲಿ ಜೀವಮಾನವನ್ನೇ ಇದಕ್ಕಾಗಿ ತೇಯ್ದವರಿದ್ದಾರೆ. ಈ ಪುಸ್ತಕದಲ್ಲಿ ಚಲನಚಿತ್ರದ ಪಿತಾಮಹ ದಾದಾ ಸಾಹೇಬ್ ಫಾಲ್ಕೆಯವರಿಂದ ಪ್ರಾರಂಭಿಸಿ, ಅದೇ ಫಾಲ್ಕೆ ಪ್ರಶಸ್ತಿಯನ್ನು ಪಡೆದ ಡಾ|| ರಾಜ್‌ಕುಮಾರ್ ಅವರವರೆಗೂ ಮಾಹಿತಿ ಲಭ್ಯವಿದೆ.*




## ಇಳಿಜಾರು

*ಡಾ|| ಸಾರಾ ಅಬೂಬಕ್ಕರ್*

**ಪುಟ : v + ೧೬೪** **ಬೆಲೆ : ರೂ. ೧೨೫**

**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಸೂಕ್ಷ್ಮ ತರಂಗ ನಿಲಯ ರಸ್ತೆ
ಮಂಗಳೂರು - ೫೭೫ ೦೦೬

*ಇದೊಂದು ಕೌಟುಂಬಿಕ ಚೌಕಟ್ಟಿನೊಳಗೆ ಚಿತ್ರಿಸಲ್ಪಟ್ಟ ದೈನಂದಿನ ಕಷ್ಟ-ಕೋಟಲೆಗಳನ್ನು ತೆರೆದಿಡುವ ಕಾದಂಬರಿ. ಮೊದಲು ಹೂವಿನಂತಿದ್ದು ಮುಂದೆ ಹಾವಿನಂತೆ ಬದಲಾಗಿ ಒಂದು ಸಂಸಾರದ ನೆಮ್ಮದಿ ಕೆಡಿಸಿದ ಕಥನ. ಈ ದುರಂತಕ್ಕೆ ಮನೆಯವರಷ್ಟೇ ಅಲ್ಲದೆ ಇತರ ಜಾತಿ-ಧರ್ಮಗಳ ಜನರೂ ತಲೆತೂರಿಸಿ ತಮ್ಮ ಮಿತಿಯನ್ನು ಮೀರಿ ಕೆಡುಕನ್ನುಂಟುಮಾಡುತ್ತಾರೆ. ನಮ್ಮ ಸಂವಿಧಾನದಲ್ಲಿ ಎಲ್ಲ ಧರ್ಮೀಯರೂ ತಮ್ಮಿಚ್ಛೆಯಂತೆ ಬದುಕುವ ಅವಕಾಶ ನೀಡಿದ್ದರೂ ಯಾಕೋ ಸಮಾಜ ಅದನ್ನು ಮನಃಪೂರ್ವಕವಾಗಿ ಒಪ್ಪಿಕೊಂಡಂತಿಲ್ಲ. ಹಿಂದು-ಮುಸ್ಲಿಂ-ಕ್ರೈಸ್ತ ಮತಾನುಯಾಯಿಗಳು ಪರಸ್ಪರ ಪ್ರೀತಿ-ವಿಶ್ವಾಸ-ಗೌರವಗಳಿಂದ ಬದುಕಿರಬಾರದೆಂಬಂತೆ ಪರಸ್ಪರ ಮನಸ್ಸುಗಳನ್ನು ಅವೇ ಧರ್ಮಗಳ ಮೂಲಭೂತವಾದಿಗಳು ಕೆಡಿಸಿರುತ್ತಾರೆ. ಈ ಸಾಮಾಜಿಕ ಕೋಮು ವೈಷಮ್ಯದ ಹಿನ್ನೆಲೆಯಲ್ಲಿ ಸೌಹಾರ್ದತೆಯತ್ತ ಹೆಜ್ಜೆಯಿಡಬೇಕಾದ ಅಗತ್ಯವನ್ನು ಇಲ್ಲಿ ಒತ್ತಿ ಹೇಳಲಾಗಿದೆ. ಏರುದಾರಿ ಕಷ್ಟ; ಇಳಿಜಾರು ತುಂಬ ಸುಲಭ. ಆದರೂ ಸಮಾಜ ಮೇಲಿನ ಸ್ತರಕ್ಕೇರಬೇಕು, ಅಧಃಪತನದ ಕಡೆ ಇಳಿಯಬಾರದೆಂಬ ಚೊಕ್ಕ ಸಂದೇಶ ಇಲ್ಲಿದೆ. ವಿವೇಚನಾರಹಿತ ನಿರ್ಧಾರಗಳಿಂದಾಗಿ ಎಲ್ಲೆಂದರಲ್ಲಿ, ಚಿಕ್ಕಪುಟ್ಟ ಕಾರಣಗಳಿಗಾಗಿ ಕೋಮುಗಲಭೆ ಇಂದು ಸಾಮಾನ್ಯ. ಇವನ್ನೆಲ್ಲ ನೋಡಿ ಇಂಥ ಅನಾಹುತಗಳಿಗೆ ಮತ್ತು ಸಂತ್ರಸ್ತರಿಗೆ ಮನ ಮಿಡಿಯುವ ಮಾನವೀಯ ಸ್ವಭಾವದ ಲೇಖಕಿ ಸಾರಾ ತಮ್ಮ ಬರಹಗಳ ಮೂಲಕ ನೊಂದ ಮನಸ್ಸುಗಳಿಗೊಂದಿಷ್ಟು ತಂಪೆರೆಯುತ್ತಿದ್ದಾರೆ.*

## ಕೋಮುಹಿಂಸೆ ನಿಯಂತ್ರಣಾ ಮಸೂದೆ ೨೦೧೧

*ಫಕೀರ್ ಮುಹಮ್ಮದ್ ಕಟ್ಪಾಡಿ*

**ಪುಟ : ೭೦** **ಬೆಲೆ : ರೂ. ४೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ ಹಾಸ್ಟೆಲ್, ಗದಗ - ೫೮೨ ೧೦೧




*ಗೋಧ್ರಾ, ಮುಂಬೈ, ದೆಹಲಿ, ಸುರತ್ಕಲ್... ಇನ್ನೂ ಎಷ್ಟೋ ಹೆಸರುಗಳಿವೆ. ನೆನೆಸಿಕೊಂಡರೆ ಅವು ರಕ್ತದಲ್ಲಿ ತೊಯ್ದು ಕೆಂಪಾಗಿ ಕಾಣುತ್ತವೆ. ಇದ್ದಕ್ಕಿದ್ದಂತೆ ಭುಗಿಲೇಳುವ ಕೋಮು ಗಲಭೆಗಳನ್ನು ಹತ್ತಿಕ್ಕಲು ನಮ್ಮಲ್ಲಿ ಪ್ರಬಲವಾದ ಕಾನೂನು ವ್ಯವಸ್ಥೆ - ಕ್ರಿಮಿನಲ್ ಕಾಯ್ದೆಯ ಕೊರತೆಯಿದೆಯೆಂದು ಅನ್ನಿಸುತ್ತದೆ. ಇಲ್ಲವಾದರೆ ದಿನನಿತ್ಯ ವೆಂಬಂತೆ ನರಮೇಧ ನಡೆಯುತ್ತಿದ್ದರೂ ಯಾಕೆ ಯಾರಿಗೂ ಶಿಕ್ಷೆಯಾಗದೆ ಹಿಂಸಾಚಾರ ಮುಂದುವರಿದಿದೆ ? ಇದಕ್ಕೆ ಉತ್ತರ ಅಷ್ಟು ಸುಲಭವಾಗಿ ಸಿಗುತ್ತಿಲ್ಲ. ಇವೆಲ್ಲ ಸಂಘ ಪರಿವಾರದಂತಹ ಸಂಘಟಿತ ಶಕ್ತಿಗಳು ವ್ಯವಸ್ಥಿತವಾಗಿ ಯುವಜನತೆಯನ್ನು ಪ್ರಚೋದಿಸಿ ಹುಟ್ಟುಹಾಕಿದ ಹುನ್ನಾರಗಳೆಂದು ಎಂದೋ ಗುರುತಿಸಲಾಗಿದೆ. ಗುಂಪು ಘರ್ಷಣೆಗಳಲ್ಲಿ ಅಪರಾಧಿ ಯಾರೆಂದು ನಿಖರವಾಗಿ ಗುರುತಿಸುವುದು ಕಷ್ಟಸಾಧ್ಯ. ಬೆಂಕಿ ಇಕ್ಕಿ ಕಲ್ಲು ಹೊಡೆಯುವ ಗುಂಪು ಪೊಲೀಸರು ಬರುವಷ್ಟರಲ್ಲಿ ತರಬೇತಿ ಕೊಟ್ಟಂತೆ ಪರಾರಿಯಾಗುತ್ತದೆ. ಕಾನೂನಿನ ಕೈಯಿಂದ ನುಣುಚಿಕೊಳ್ಳುವ ಅವಕಾಶ ಶಿಕ್ಷೆ ವಿಧಿಸುವ ಕಾನೂನಿಗಿಂತ ಬಲವಾಗಿದೆ. 'ಅಪರಾಧಿ'ಯನ್ನು ಕೋರ್ಟ್‌ನಿಂದ ಬಿಡಿಸಿಕೊಳ್ಳುವ ಯಾವ ದಾರಿಗಳಿವೆಯೆಂದು 'ಲಾ' ಓದಿದ ವಕೀಲರು ಹುಡುಕುತ್ತಾರೆ. ಹಿಂದೂಗಳಲ್ಲದ ಅಲ್ಪ ಸಂಖ್ಯಾತರಿಗೆ ಇನ್ನೆಲ್ಲಿಯ ರಕ್ಷಣೆ ! ಎಲ್ಲರಿಗೂ ಬದುಕುವ ಸಮಾನ ಅವಕಾಶಗಳಿವೆಯೆಂದು ಸರಕಾರ ಹೇಳುತ್ತದೆ. ಅವರ ಹಿತದೃಷ್ಟಿಯಿಂದ ಏನೇನೋ ಮಸೂದೆಗಳು ಬರುತ್ತಿವೆ. ಈ ಬಗ್ಗೆ ಇತ್ತೀಚಿನ 'ಕೋಮುಹಿಂಸೆ ನಿಯಂತ್ರಣಾ ಮಸೂದೆ - ೨೦೧೧'ರಲ್ಲಿನ ಒಳಿತು ಕೆಡುಕುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.*

**ನಿಜಗುಣ** (ವಿಮರ್ಶಾ ಸಂಕಲನ)

*ಎಸ್. ಆರ್. ವಿಜಯಶಂಕರ*

**ಪುಟ : xx + ೨೬೦ = ೨೮೦** **ಬೆಲೆ : ರೂ. ೧೮೦**

**ಕನ್ನಡ ಸಂಘ, ಕ್ರೈಸ್ಟ್ ಯೂನಿವರ್ಸಿಟಿ,** ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯

ವಿಮರ್ಶೆ ಎಂಬುದು ಒಂದು ಮೌಲ್ಯಮಾಪನ. ಉತ್ತಮಾಂಶಗಳನ್ನು ಮೆಚ್ಚಿ ಕೃತಿಯಲ್ಲಿ ನುಸುಳಿರಬಹುದಾದ ಲೋಪದೋಷಗಳನ್ನು ವೈಮನಸ್ಯ - ಮನಸ್ತಾಪಗಳಿಗೆಡೆ ಮಾಡಿಕೊಡದಂತೆ ತಿಳಿಹೇಳುವಿಕೆ ಇದರ ಲಕ್ಷಣ. ಸುಮಾರು ಮೂವತ್ತು ವರ್ಷಗಳಷ್ಟು ದೀರ್ಘಕಾಲ ವಿಮರ್ಶಾ ಕ್ಷೇತ್ರದಲ್ಲಿ ಹೆಸರು ಮಾಡಿರುವ ಎಸ್. ಆರ್. ವಿಜಯಶಂಕರ ಹೆಚ್ಚು ಕಡಿಮೆ ಇದೇ ದಾರಿಯಲ್ಲಿ ಸಾಗಿಬಂದವರು. ಆಯಾ ಕಾಲದ ಸಂದರ್ಭಕ್ಕೆ ತಕ್ಕಂತೆ ಬರೆದ ಕೃತಿಗಳನ್ನು ಸಮಗ್ರವಾಗಿ ಓದಿ, ತನ್ನ ನೆಲೆಯಿಂದ ಮಾತ್ರವಲ್ಲದೆ ಇತರ ಓದುಗರನ್ನೂ ದೃಷ್ಟಿಯಲ್ಲಿಟ್ಟುಕೊಂಡು ವಿಮರ್ಶಕನಾದವನು ಬರೆಯಬೇಕಾಗುತ್ತದೆ. ಹಾಗೆಂದು ತನ್ನ ಸ್ವತಂತ್ರ ನಿಲುವು, ನೇರ ವಿಶ್ಲೇಷಣೆ ಮುಂತಾದುವನ್ನು ಕಡೆಗಣಿಸಿದಲ್ಲಿ ಶ್ರೇಷ್ಠ ಮಟ್ಟದ ವಿಮರ್ಶಕನ ಸ್ಥಾನವನ್ನು ಕಳೆದುಕೊಂಡಂತೆಯೇ. ಇಂಥ ಸಮತೋಲನ ಕಾಪಾಡಿಕೊಂಡ ಅಪರೂಪದ ಸಂಕಲನ ಇದು. ವಿಸ್ತಾರವಾದ ಬರವಣಿಗೆ ಇಲ್ಲಿದ್ದು, ನಾವು ಓದಿ ಅರ್ಥೈಸಿಕೊಂಡ ಅವೇ ಪುಸ್ತಕಗಳಿಗೆ ನಮಗೆ ದಕ್ಕಿರದ ಇನ್ನಷ್ಟು ಹೊಳಹುಗಳು ಸಿಗುತ್ತವೆ. ಕನ್ನಡದ ಪ್ರತಿಷ್ಠಿತ ಬರಹಗಾರರ ಕೃತಿಗಳನ್ನು ವಿಮರ್ಶೆಗೆ ಆಯ್ಕೆ ಮಾಡಲಾಗಿದೆ. ಸೃಜನಶೀಲ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಡಲಾಗಿದ್ದು, ಅವೆಲ್ಲ ಹೆಚ್ಚಿನವರು ಓದಿರುವುದೇ ಆಗಿವೆ. ಕಾವ್ಯ-ಕಥನ-ವಿಮರ್ಶೆ ಮೂರೂ ಪ್ರಕಾರಗಳನ್ನು ವಿಮರ್ಶೆಗೊಳಪಡಿಸಿದ ಬಲು ಪ್ರಯಾಸದ ಕೆಲಸವೊಂದು ಇಲ್ಲಿ ನಡೆದು ಓದುಗರಿಗೆ ನಿರಾಯಾಸವಾಗಿ ಕೈಗೆಟುಕಿ ಪುಸ್ತಕದ ಹೂರಣವನ್ನು ವಿಮರ್ಶೆಯ ಮೂಲಕ ತಿಳಿಯಲು ಅನುಕೂಲವಾಗಿದೆ.



**ಶಾಸನಶಾಸ್ತ್ರ**

*ಸಿ. ಪಿ. ಕೆ.*

**ಪುಟ : viii + ೨೧೬ = ೨೨೪** **ಬೆಲೆ : ರೂ. ೧೩೦**

**ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್**
ನಂ. ೩೪೧, ಕಾಳಮ್ಮನ ದೇವಸ್ಥಾನದ ಬೀದಿ
ಮೈಸೂರು - ೫೭೦ ೦೦೧

ತಮ್ಮ ಇರುವಿಕೆಯನ್ನು, ಸಾಧನೆಗಳನ್ನು ಮುಂದಿನ ಜನಾಂಗವೂ ತಿಳಿಯಲಿ ಎಂಬ ಕಾರಣದಿಂದ ಶಾಶ್ವತವಾಗಿ ಬಹುಕಾಲ ಬಾಳುವಂಥ ಕಲ್ಲು - ತಾಮ್ರ - ಇತರ ಲೋಹಗಳಲ್ಲಿ ಕೊರೆದು ಇಡುತ್ತಿದ್ದರು. ಇದೇ ಶಾಸನ ದೀರ್ಘಕಾಲ ಬಾಳಿ ಹಿಂದೆ ನಡೆದದ್ದನ್ನು ತಿಳಿಸುವ ಒಂದು ಸಾಧನ. ಇದು ಅನೇಕ ಸತ್ಯಗಳನ್ನು ತೆರೆದಿಟ್ಟು ಊಹಾಪೋಹಗಳಿಗೆ ತೆರೆ ಎಳೆದು ಗೊಂದಲ ನಿವಾರಣೆ ಮಾಡುತ್ತದೆ. ಶಾಸನಗಳ ಅಧ್ಯಯನ ಇಂದು ಜನಪ್ರಿಯವಾಗಿದ್ದು ಹಿಂದೆ ಆಳಿದ ರಾಜರುಗಳು, ದಾನಿಗಳು, ವೀರರು-ಶೂರರ ಪರಿಚಯವನ್ನು ಅದು ಮಾಡಿಕೊಡುತ್ತದೆ. ಲಿಪಿ ಬರುವ ಮೊದಲೇ ಇದು ರೂಢಿಯಲ್ಲಿತ್ತು. ಯಾವುಯಾವುದೋ ಸಂಕೇತಗಳನ್ನು ಬಳಸಿ ನಿರ್ಮಿಸಿದ್ದ ಎಷ್ಟೋ ಶಾಸನಗಳನ್ನು ಇಂದು ಓದಲಾಗದೆ ಪರಿಣತ ಬುದ್ಧಿವಂತರಿಗಾಗಿ ಎದುರುನೋಡುವುದು ಅನಿವಾರ್ಯವಾಗಿದೆ. ಇಂದಿನ ಪುಸ್ತಕಗಳು ನೀಡುವಷ್ಟು ಸಮೃದ್ಧ ಮಾಹಿತಿಯನ್ನೆಂದಿಗೂ ಶಾಸನಗಳು ನೀಡಲಾರವು. ಅವನ್ನು ಓದಿ ತಮ್ಮ ಬುದ್ಧಿಗೆ ನಿಲುಕುವಷ್ಟು ಮಾತ್ರ ಅಂದಾಜಿಸಬಹುದು. ಅದೂ ಒಂದೇ ಶಾಸನವನ್ನು ಹೆಚ್ಚು ಪಂಡಿತರು ಓದಿದಾಗ ಯಾವುದೇ ನಿರ್ಧಾರಕ್ಕೆ ಬರದೆ ಭಿನ್ನಾಭಿಪ್ರಾಯಗಳು ಉಂಟಾಗಬಹುದು – ಹೀಗೆ ಶಾಸನಶಾಸ್ತ್ರದ ಬಗ್ಗೆ ವಿವರವಾಗಿ ಇಲ್ಲಿ ಒಂದು ಅಧ್ಯಯನವನ್ನೇ ಮಾಡಲಾಗಿದೆ ಎಂದರೂ ತಪ್ಪಲ್ಲ. ವಿದ್ಯಾರ್ಥಿಗಳಿಗೆ, ಅಧ್ಯಯನಶೀಲರಿಗೆ ಇದೊಂದು ಆಕರಗ್ರಂಥವಾಗಿದ್ದು ಕೈಪಿಡಿಯಂತೆ ಮಾರ್ಗದರ್ಶನ ನೀಡಬಲ್ಲುದು.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

---

## ಸಾದರ ಸ್ವೀಕಾರ

**ಹೊಮೊ ಸೆಪಿಯನ್ಸ್‌ರ ಬುದ್ಧಿವಂತಿಕೆ**
ಶಾಂತಾರಾಮ ಸೋಮಯಾಜಿ
*ಪುಟ : ೧೧೦* **ಬೆಲೆ : ರೂ. ೫೦**
**ವಸಂತ ಪ್ರಕಾಶನ,** ನಂ. ೩೬೦, ೧೦ನೇ 'ಬಿ' ಮುಖ್ಯ ರಸ್ತೆ, ೩ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೧೧.

**ಹರ್ಬರ್ಟ್ ಮತ್ತು ವಾಕಿಂಗ್ ಸ್ಟಿಕ್** (ಕಥೆಗಳು)
ಶಾಂತಾರಾಮ ಸೋಮಯಾಜಿ
*ಪುಟ : ೧೫೬* **ಬೆಲೆ : ರೂ. ೮೦**
**ಹೇಮಂತ ಸಾಹಿತ್ಯ,** *ನಂ. ೯೭೨ ಸಿ, ೪ನೇ 'ಇ' ವಿಭಾಗ, ರಾಜಾಜಿನಗರ, ಬೆಂಗಳೂರು - ೧೦.*

**ಒಂದು ಮಗುವಿನ ಪ್ರಕರಣ** (ಕಿರು ಕಾದಂಬರಿ)
*ಭಾಗ್ಯ ಕೃಷ್ಣಮೂರ್ತಿ*
*ಪುಟ : vii+೮೨* **ಬೆಲೆ : ರೂ. ೪೦**

**ಮೂರನೇ ತಲೆಮಾರು** (ಕವನ ಸಂಕಲನ)
*ಎನ್. ಎಸ್. ರಘುನಾಥ್*
*ಪುಟ : vii+೭೯* **ಬೆಲೆ : ರೂ. ೪೦**

**ಚಿಂತನ ದರ್ಶನ**(ಲೇಖನಗಳ ಸಂಕಲನ) *ಎಂ. ವೀರಪ್ಪ ಮೊಯಿಲಿ*
*ಪುಟ : x+೨೩೦* **ಬೆಲೆ : ರೂ. ೫೫**

**ಪ್ರಕೃತಿ ಪ್ರಪಂಚ** *ಎಂ. ಶಶಿಧರ ಹೆಬ್ಬಾರ ಹಾಲಾಡಿ*
*ಪುಟ : ೭೮+೧೦* **ಬೆಲೆ : ರೂ. ೩೨**
ಮೇಲಿನ ನಾಲ್ಕು ಕೃತಿಗಳ ಪ್ರಕಾಶಕರು
**ಕನ್ನಡ ಸಾಹಿತ್ಯ ಪರಿಷತ್ತು,** ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦೦೧೮

**ಮಾನಸಿಕ ಅಸ್ವಸ್ಥರ ಪುನಶ್ಚೇತನ : ಏಕೆ ? ಹೇಗೆ ?**
*ಗಣೇಶ್ ರಾವ್ ನಾಡಿಗೇರ್*
*ಪುಟ : ೧೪೪* **ಬೆಲೆ : ರೂ. ೭೫**

**ನಿದ್ರೆ-ಕನಸು : ೫೦ ಪ್ರಶ್ನೆಗಳು** *ಡಾ॥ ಸಿ. ಆರ್. ಚಂದ್ರಶೇಖರ್*
*ಪುಟ : ೪೦* **ಬೆಲೆ : ರೂ. ೨೦**

**ಗೆದ್ದೇ ಗೆಲ್ಲುವೆವು** *ಬೇದ್ರೆ ಮಂಜುನಾಥ*
*ಪುಟ : ೨೧೬* **ಬೆಲೆ : ರೂ. ೧೦೦**
ಮೇಲಿನ ಮೂರು ಕೃತಿಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧.

**ನೀಳ್ಗೀತೆಗಳು** *ಡಾ॥ ದೊಡ್ಡರಂಗೇಗೌಡ*
*ಪುಟ : ೨೧೬* **ಬೆಲೆ : ರೂ. ೨೫೦**
**ಬೀರೇಶ್ವರ ಪ್ರಕಾಶನ,** ಸುದ್ದೇಕುಂಟೆ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ.

**ದುರ್ಗಾಭಿಜಾತ** *ಎಸ್. ಆರ್. ಗುರುನಾಥ್*
*ಪುಟ : xii+೧೩೨* **ಬೆಲೆ : ರೂ. ೮೦**
**ವಾಲ್ಮೀಕಿ ಸಾಹಿತ್ಯ ಸಂಪದ,** ಹರ್ತಿಕೋಟೆ - ೫೭೭ ೫೪೫

**ನಾಡೋಜ ಡಾ॥ ಚಂದ್ರಶೇಖರ ಕಂಬಾರ**
*ಡಾ॥ ವೀರೇಶ ಬಡಿಗೇರ*
*ಪುಟ : viii+೮೦* **ಬೆಲೆ : ರೂ. ೬೦**
**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಇಗೋ ಅರಿವೆ** *ವಸಂತ ಬನ್ನಾಡಿ*
*ಪುಟ : ೨೪* **ಬೆಲೆ : ರೂ. ೧೦**
**ತಿಂಗಳ ಬೆಳಕು ಪ್ರಕಾಶನ,** ಕುಂದಾಪುರ - ೫೭೬ ೨೦೧

**ನೀಲಾಕಾಶ** (ಕಥಾ ಸಂಕಲನ) ಬಿ. ಪಿ. ಶಿವಾನಂದರಾವ್
*ಪುಟ : ೧೯೨* **ಬೆಲೆ : ರೂ. ೧೪೦**
**ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ನಂ. ೭೭೭, ತಳ ಮಹಡಿ, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು - ೫೬೦ ೦೪೦

**ಪಾರಜ್ಜಿ ಮಗ** (ಆತ್ಮಕಥೆ) ಜಿ. ಬಿ. ರುದ್ರಪ್ಪ
*ಪುಟ : ೧೯೫* **ಬೆಲೆ : ರೂ. ೧೬೦**
**'ಕಮಲ',** ೩೪/೨೪೯೩, ವಿನೋಬನಗರ, ಶಿವಮೊಗ್ಗ

**ಕೆಲವು ಪ್ರಜ್ಞಾವಸ್ಥೆಗಳು** ಮೂಲ : ಆರ್. ಆರ್. ದಿವಾಕರ್
ಅನುವಾದ : *ಡಾ॥* ಸಿ. ಪಿ. ಕೃಷ್ಣಕುಮಾರ್
*ಪುಟ : ೫೫* **ಬೆಲೆ : ರೂ. ೧೦**
**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ,** ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ, ಮಲ್ಲತ್ತಹಳ್ಳಿ, ಬೆಂಗಳೂರು - ೫೬೦ ೦೫೬

**ಕೆಂಗುಲಾಬಿ** (ವೇಶ್ಯಾ ಜಗತ್ತಿನ ಅನಾವರಣ)
ಹನುಮಂತ ಹಾಲಿಗೇರಿ
*ಪುಟ : ೧೩೮* **ಬೆಲೆ : ರೂ. ೬೦**
**ಹನುಮಂತ ಹಾಲಿಗೇರಿ, ಚೆ ಪುಸ್ತಕ,** ಕೇರಾಫ್ ವಿ. ಆರ್. ಕಾರ್ಪೆಂಟರ್, ನಂ. ೩೮೯, ೨ನೇ ಮುಖ್ಯರಸ್ತೆ, ಜನತಾ ಬಡಾವಣೆ, ವೆಂಕಟಾಲ, ಯಲಹಂಕ, ಬೆಂಗಳೂರು - ೬೪

ಜನನಾಯಕರು ಜನನಾಯಕರಾಗದೆ ಜಣಜಣ(ಹಣ) ನಾಯಕರಾಗುತ್ತಿದ್ದಾರೆ. ಇದರಲ್ಲಿರುವ ಅದ್ಭುತ ಅವತಾರಿಗಳು ಜನರಿಗಾಗಿ ಮಾಡುವದೇನು ? ಅವರು ಮಾಡುವ ಕೆಲಸ ದೇವರದ್ದಾಗಿದ್ದರೆ ಜೈಲು ಸೇರುತ್ತಿದ್ದರೇಕೆ ? ಅವರಿಗೆ ನಿರ್ಲಜ್ಜರಾಗಿ ತಮ್ಮ ಕುರ್ಚಿಗಳನ್ನು ಉಳಿಸಿಕೊಳ್ಳುವ ಹುನ್ನಾರವಿರುತ್ತದೆಯೇ ವಿನಾ ಜನರ ಸಲುವಾಗಿ ಜನಶಕ್ತಿಗಾಗಿ ಅವರು ಏನೂ ಮಾಡುವದಿಲ್ಲ. ಜನಸಾಮಾನ್ಯರ ಗೋಳನ್ನು ಕೇಳುವವರಾರು ? ಅವರ ಕಣ್ಣೀರನ್ನು ಒರೆಸುವವರಾರು ? ಅವರಿಗೆ ಜನರ ಆರ್ತನಾದ, ಆರ್ತಧ್ವನಿ ಕೇಳಿದರಲ್ಲವೇ ? ಎಲ್ಲಿಯವರೆಗೆ ಪ್ರಧಾನಿ ಲಾಲ ಬಹಾದ್ದೂರ ಶಾಸ್ತ್ರೀಜಿಯವರಂತಹ ಪ್ರಾಮಾಣಿಕ, ಸಚ್ಚಾರಿತ್ರ್ಯ ಉಳ್ಳ ಮತ್ತು ಬಡವರ ಬಗ್ಗೆ ನೈಜ ಕಳಕಳಿಯುಳ್ಳವರು ನಮ್ಮ ನಾಯಕರಾಗುವದಿಲ್ಲವೋ, ಎಲ್ಲಿಯವರೆಗೆ ದೇಶಪ್ರೇಮ, ಧರ್ಮಶ್ರದ್ಧೆ ಮತ್ತು ರಾಷ್ಟ್ರಪ್ರಜ್ಞೆಯುಳ್ಳವರು ನಮ್ಮ ದೇಶವನ್ನಾಳುವದಿಲ್ಲವೋ ಅಲ್ಲಿಯವರೆಗೆ ನಮ್ಮ ದೇಶದ ಉದ್ಧಾರ ಸಾಧ್ಯವೇ ಇಲ್ಲ! ಅಣ್ಣ ಬಸವಣ್ಣನು ಹೇಳುವಂತೆ ಅವರು 'ಹೊತ್ತಿಗೊಂದು ಪರಿಯಿಪ್ಪ ಗೋಸುಂಬೆಯಂತೆ' ಇರುತ್ತಾರೆ.

# ವಿಧಾನಸೌಧದಲ್ಲಿ ನಾಯಿಗಳಿಗೆ ಸರಳ ಪ್ರವೇಶವಿದ್ದಷ್ಟು, ಮನುಷ್ಯರಿಗಿಲ್ಲ!

**ಡಾ॥ ಮಲ್ಲಿಕಾರ್ಜುನ ಕುಂಬಾರ**

'ಸರಕಾರಿ ಕೆಲಸ ದೇವರ ಕೆಲಸ' ಎಂದು ಮಹಾನುಭಾವ ಕೆಂಗಲ್ ಹನುಮಂತಯ್ಯನವರು ತಾವು ಕಟ್ಟಿದ ವಿಧಾನಸೌಧದ ಮುಖಮಂಟಪದಲ್ಲಿ ಕೆತ್ತಿದ್ದಾರೆ. ಕೆತ್ತಿದ ಈ ಅಕ್ಷರಗಳು ಇಂದು ವಂಗ್ಯವಾಗಿ, ಅಪಹಾಸ್ಯದ ಬರಹಗಳಾಗಿ ಕಾಣಿಸುತ್ತಿವೆ. ಇಂದು ಸರಕಾರಿ ಕೆಲಸಗಳು ನಿಜಕ್ಕೂ ದೇವರ ಕೆಲಸಗಳಾಗದೆ ದೆವ್ವದ ಕೆಲಸಗಳಾಗುತ್ತಿವೆ. ಜನನಾಯಕರ ತಾಣ ವಿಧಾನಸೌಧವು ನಿಧಾನಸೌಧವಾಗುವದಲ್ಲದೆ, ನಾವು ಆರಿಸಿ ಕಳಿಸಿರುವ ನಾಯಕರು ಇದನ್ನು ಕುಸ್ತಿ ಕಣವನ್ನಾಗಿ ಮಾರ್ಪಡಿಸಿ ಕೊಂಡಿದ್ದಾರೆ. ಜನನಾಯಕರು ಜನನಾಯಕರಾಗದೆ ಜಣಜಣ(ಹಣ) ನಾಯಕರಾಗುತ್ತಿದ್ದಾರೆ. ಇದರಲ್ಲಿರುವ ಅದ್ಭುತ ಅವತಾರಿಗಳು ಜನರಿಗಾಗಿ ಮಾಡುವದೇನು ? ಅವರು ಮಾಡುವ ಕೆಲಸ ದೇವರದ್ದಾಗಿದ್ದರೆ ಜೈಲು ಸೇರುತ್ತಿದ್ದರೇಕೆ ? ಅವರಿಗೆ ನಿರ್ಲಜ್ಜರಾಗಿ ತಮ್ಮ ಕುರ್ಚಿಗಳನ್ನು ಉಳಿಸಿಕೊಳ್ಳುವ ಹುನ್ನಾರವಿರುತ್ತದೆಯೇ ವಿನಾ ಜನರ ಸಲುವಾಗಿ ಜನಶಕ್ತಿಗಾಗಿ ಅವರು ಏನೂ ಮಾಡುವದಿಲ್ಲ. ಜನಸಾಮಾನ್ಯರ ಗೋಳನ್ನು ಕೇಳುವವರಾರು ? ಅವರ ಕಣ್ಣೀರನ್ನು ಒರೆಸುವವರಾರು ? ಅವರಿಗೆ ಜನರ ಆರ್ತನಾದ, ಆರ್ತಧ್ವನಿ ಕೇಳಿದರಲ್ಲವೇ ? ಎಲ್ಲಿಯವರೆಗೆ ಪ್ರಧಾನಿ ಲಾಲ ಬಹಾದ್ದೂರ ಶಾಸ್ತ್ರೀಜಿಯವರಂತಹ ಪ್ರಾಮಾಣಿಕ, ಸಚ್ಚಾರಿತ್ರ್ಯ ಉಳ್ಳ ಮತ್ತು ಬಡವರ ಬಗ್ಗೆ ನೈಜ ಕಳಕಳಿಯುಳ್ಳವರು ನಮ್ಮ ನಾಯಕರಾಗುವದಿಲ್ಲವೋ, ಎಲ್ಲಿಯವರೆಗೆ ದೇಶಪ್ರೇಮ, ಧರ್ಮಶ್ರದ್ಧೆ ಮತ್ತು ರಾಷ್ಟ್ರಪ್ರಜ್ಞೆಯುಳ್ಳವರು ನಮ್ಮ ದೇಶವನ್ನಾಳುವದಿಲ್ಲವೋ ಅಲ್ಲಿಯವರೆಗೆ ನಮ್ಮ ದೇಶದ ಉದ್ಧಾರ ಸಾಧ್ಯವೇ ಇಲ್ಲ! ಅಣ್ಣ ಬಸವಣ್ಣನು ಹೇಳುವಂತೆ ಅವರು 'ಹೊತ್ತಿಗೊಂದು ಪರಿಯಿಪ್ಪ ಗೋಸುಂಬೆಯಂತೆ' ಇರುತ್ತಾರೆ. ಜನತೆಯ ಶ್ರಮದ ಹಣದಿಂದ ಮಹಾಜನತೆಯ ಮತಗಳನ್ನು ದೋಚಿ ಆಯ್ಕೆಯಾದ ನಮ್ಮ ಮುಖಂಡರ ಮನಸ್ಸುಗಳು ಚುಣಾವಣೆಯ ನಂತರ ಜನತೆಯ ಬಗ್ಗೆ ಸ್ಪಂದಿಲಾರದಷ್ಟು ಜಡವಾಗುತ್ತವೆ. ಚುಣಾವಣೆಯ ಸಂದರ್ಭದಲ್ಲಿ ಮೆತ್ತಗೆ, ನಯನಯದಿಂದ ವರ್ತಿಸುವ ನಮ್ಮ ಮುಖಂಡರು ಚುಣಾವಣೆಯ ನಂತರ ಒಮ್ಮಿಂದೊಮ್ಮಲೇ ಬದಲಾಗುತ್ತಾರೆ. ಮತ್ತೆ ಅಧಿಕಾರವನ್ನು ಕಳೆದುಕೊಂಡಾಗ ಮೆತ್ತಗಾಗುತ್ತಾರೆ. ಸುಭಾಷಿತಕಾರರು ಹೇಳುವಂತೆ, ''ಕೈಲಾಗದವನು ಒಳ್ಳೆಯವನಾಗುತ್ತಾನೆ. ಹಣವಿಲ್ಲದವನು ಬ್ರಹ್ಮಚಾರಿಯಾಗುತ್ತಾನೆ. ರೋಗಿಗೆ ದಿಢೀರನೆ ದೇವರಲ್ಲಿ ಭಕ್ತಿ ಹುಟ್ಟುತ್ತದೆ. ಮುದಿ ಹೆಂಗಸು ಸಹಜವಾಗಿ ಪರಮ





ಪತಿವ್ರತೆಯಾಗುತ್ತಾಳೆ''. ಅಂತೆಯೇ ನಮ್ಮ ನಾಯಕರು ಕೂಡ ಅಧಿಕಾರವನ್ನು ಕಳೆದುಕೊಂಡಾಗ ಪರಮ ಪ್ರಾಮಾಣಿಕರಂತೆ ಫೋಸು ಕೊಡುತ್ತಾರೆ. ಅವರುಗಳ ಪರಸ್ಪರ ಮಿತ್ರತ್ವ, ಶತ್ರುತ್ವಗಳ ಒಳ ಒಪ್ಪಂದದ ಸಂಬಂಧಗಳು ಚಿತ್ರವಾಗಿರುತ್ತವೆ. ಜನರು ತಮ್ಮ ಅಹವಾಲನ್ನು ಕೇಳಬೇಕೆಂದರೆ ಈ ವಿಧಾನಸೌಧದಲ್ಲಿ ಸಾಮಾನ್ಯ ನಾಗರಿಕರಿಗೆ ಪ್ರವೇಶವೇ ಇಲ್ಲವಲ್ಲ, ಹಾಗಾಗಿ ಯಾರನ್ನು ಕೇಳಬೇಕು ? ಆದರೆ ಬಿಡಾಡಿ ನಾಯಿಗಳು ಮಾತ್ರ ಇಲ್ಲಿ ಯಾವುದೇ ಆತಂಕವಿಲ್ಲದೆ ಪ್ರವೇಶಿಸುತ್ತವೆ. ಆದರೆ ಜನತಾ ಜನಾರ್ದನರು ತಾವೇ ಆರಿಸಿ ಕಳಿಸಿದ ಜನನಾಯಕರನ್ನು ಅಲ್ಲಿ ಕಾಣುವದಂತೂ ಬಲು ದುಸ್ತರದ ಕೆಲಸ. ಅವರನ್ನು ಬೆತ್ತಲೆಗೊಳಿಸುವಷ್ಟನ್ನು ಬಿಟ್ಟು ತಪಾಸಿಸಿ ಒಳ ಬಿಡುವ ಪರಿಯಂತೂ ತಲೆತಗ್ಗಿಸಿ ಇನ್ನೊಮ್ಮೆ ಇತ್ತ ಸುಳಿಯದಂತೆ ಪೋಲಿಸರು ಒಳ ಹೋಗುವವರ ಜನ್ಮವನ್ನೇ ಜಾಲಾಡುತ್ತಾರೆ. ತಪಾಸಿಸುವ ಕಸರತ್ತಿನಲ್ಲಿ ಕಿರಿಕ್ ಮಾಡಿದರೆ ಏನೂ ವಿಚಾರಿಸದೆ ಕೃಷ್ಣ ಜನ್ಮಸ್ಥಾನಕ್ಕೆ ಅಟ್ಟುತ್ತಾರೆ. ಇದು ನಮ್ಮ ವ್ಯವಸ್ಥೆ, ಪ್ರಜಾಪ್ರಭುತ್ವ ! ಗಾಂಧೀಜಿಯವರು ಕಂಡ ಕನಸಿನ ರಾಮರಾಜ್ಯ ! ಗ್ರಾಮ ಸ್ವರಾಜ್ಯ ಮತ್ತು ಶಾಸನ ಮುಕ್ತ, ಶೋಷಣೆ ಮುಕ್ತ ಆಡಳಿತವಿರಬೇಕೆಂದು ಅವರು ಹೇಳಿದ್ದು ನಮ್ಮ ನಾಯಕರಿಗೆ ನೆನಪಿದ್ದಂತಿಲ್ಲ!




ಇದಕ್ಕೆ ಕಾರಣ ಭಯೋತ್ಪಾದನೆಯಂತೆ ! ಒಳಗೆ ಬರುವ ಭಯೋತ್ಪಾದಕರು ಹೀಗೆ ಹೇಳಿ ಕೇಳಿ ಡಂಗುರವನ್ನು ಸಾರಿ ಬರುತ್ತಾರೆಯೇ ? ಒಳಗಿರುವ ನಮ್ಮ ಜನನಾಯಕರು ಪ್ರಾಮಾಣಿಕರಾಗಿದ್ದರೆ, ಪಾರದರ್ಶಕರಾಗಿದ್ದರೆ ಅವರಿಗೆ ಯಾರ ಭಯವಿರುತ್ತದೆ ?, ಒಂದು ಸಣ್ಣ ಸೊಳ್ಳೆಯೂ ಕೂಡ ನುಸುಳಲು ಅಸಾಧ್ಯವಾದ ಅಭೇದ್ಯ ಕೋಟೆಯಂತಿರುವ, ಏನೆಲ್ಲಾ ತಪಾಸಣೆ ಇದ್ದರೂ ಭಯೋತ್ಪಾದಕರು ಸಂಸತ್ ಭವನದೊಳಗೆ ನುಸುಳಿದ್ದು ಹೇಗೆ?

ಅವರು ಲೋಕದ ಪ್ರಜೆಗಳ ಬಗ್ಗೆ ಅನುಕಂಪವುಳ್ಳ ತಂದೆಯಂತೆ, ದೀನರಾದವರಿಗೆ ತಾಯಿಯಂತೆ, ರಾಜಧರ್ಮವನ್ನು ಬೋಧಿಸುವ ಗುರುವಿನಂತೆ, ಅನಿಷ್ಟಗಳನ್ನು ತೊಡೆಯುವ ಅಗ್ನಿಯಂತೆ ಜನರನ್ನು ಪಾಲಿಸುವವರು, ಕಾಪಾಡುವವರು ಇರಬೇಕು. ರಾಜನೀತಿ ಹೇಳುವಂತೆ ರಾಜನು ದುಷ್ಟನಾದರೆ ಪ್ರಜೆಗಳು ದುಷ್ಟರಾಗುತ್ತಾರೆ. ಅವನು ಪಾಪಿಯಾದರೆ ಇವರೂ ಹಾಗೇ ಆಗುತ್ತಾರೆ. ಪ್ರಜೆಗಳು ರಾಜನನ್ನು ಅನುಸರಿಸುತ್ತಾರೆ. ರಾಜನಿದ್ದಂತೆ ಪ್ರಜೆಗಳು. ತಮ್ಮ ಅಧಿಕಾರದ ಗದ್ದುಗೆಯನ್ನೇರಲು ಜನರನ್ನು ಏನೆಲ್ಲಾ ಕಸರತ್ತು ಮಾಡಿ ದಾರಿ ತಪ್ಪಿಸುತ್ತಾರೆ. ಅಬ್ರಹಾಂ ಲಿಂಕನ್ ಹೇಳುವಂತೆ, ''ಅಧಿಕಾರಕ್ಕಾಗಿ ಆಶೆ ಹಚ್ಚಿಕೊಂಡು ಅದಕ್ಕಾಗಿ ಹೋರಾಡುವ ಜನರು ಸರಕಾರವನ್ನು ಅತ್ತಿತ್ತ ಹೊರಳಿಸಿ ಅದನ್ನು ಅನೀತಿಗೆ ಎಳೆದು ತರುತ್ತಾರೆ.'' ಈ ಮಾತು ನಮ್ಮ ನಾಯಕರಿಗೆ ಸರಿಯಾಗಿ ಹೊಂದುತ್ತದೆ.

ಬೆಂಗಳೂರಿನ ನಮ್ಮ ಹೆಮ್ಮೆಯ ವಿಧಾನಸೌಧಕ್ಕೆ ನಾಯಿಗಳಿಗೆ ಪ್ರವೇಶವಿದೆ. ಅವು ನಿರಾತಂಕವಾಗಿ ಯಾರದೇ ನಿರ್ಬಂಧವಿಲ್ಲದೆ ಅಡ್ಡಾಡುತ್ತವೆ, ಓಡಾಡುತ್ತವೆ, ಚೀರಾಡುತ್ತವೆ, ಹಾರಾಡುತ್ತವೆ, ಅರಚಾಡುತ್ತವೆ. ಅಲ್ಲಿ ಅವು ತಮ್ಮವರ ಜೊತೆಗೆ ಸರಸವಾಡುತ್ತವೆ, ವಿರಸವಾಡುತ್ತವೆ. ಅಲ್ಲಿ ಶ್ವಾನಗಳದ್ದೇ ಸಾಮ್ರಾಜ್ಯ. ಆದರೆ ಕುರ್ಚಿಗಾಗಿ ಅಲ್ಲ, ಅಧಿಕಾರಕ್ಕಾಗಿಯೂ ಅಲ್ಲ! ಇವೇನು ನಮ್ಮ ನಾಯಕರ ನಾಯಿಗಳಲ್ಲ! ಬೀದಿಯ ಬಿಡಾಡಿ ನಾಯಿಗಳು. ಅಲ್ಲಿ ನಿರ್ಭಯದಿಂದ ಅಡ್ಡಾಡುವ ನಾಯಿಗಳಿಗಿರುವಷ್ಟು ಸ್ವಾತಂತ್ರ್ಯವೂ, ಅಲ್ಲಿಗೆ ನಾಯಕರನ್ನಾಗಿ ಮಾಡಿ ಕಳಿಸಿದ ಪ್ರಜೆಗಳಿಗಿಲ್ಲವಲ್ಲಾ, ಎಷ್ಟು ವಿಪರ್ಯಾಸ ನೋಡಿ !

**ಡಾ|| ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ-೫೮೨೨೩೦
ತಾ||ರೋಣ, ಜಿ||ಗದಗ

# ಆಟ

ಮಕ್ಕಳು ಆಟವಾಡುತ್ತಾರೆ,
ಬದುಕು ಅವರಿಗೆ
ಆಟಿಕೆಯ ಕೊಟ್ಟಿದೆ.

ಗಲ್ಲಿ ಬೀದಿಗಳಲ್ಲಿ
ರಸ್ತೆ ರೋಡುಗಳಲ್ಲಿ
ಮನೆ ಮಹಡಿಗಳಲ್ಲಿ
ಮಕ್ಕಳದ್ದೇ ಕಲರವ,
ಕನಸು ಅವರಿಗೆ
ಉತ್ಸಾಹ ಕೊಟ್ಟಿದೆ.

ಕಾರು ಬಸ್ಸುಗಳು
ಚೆಂಡು ಬ್ಯಾಟುಗಳು
ಬೊಂಬೆ ಬಲೂನುಗಳು
ಅವರ ಬಳಿಯಿವೆ,
ಕೆಲವರಿಗೆ ಚಿನ್ನಿದಾಂಡು
ಕವಣೆ ಕಲ್ಲು ಸಿಕ್ಕಿದೆ.

ಯಾವುದೂ ಇಲ್ಲ ಮತ್ತೆ ಕೆಲವರಿಗೆ,
ಅವರು ಆಡುತ್ತಾರೆ
ಬದುಕು ಅವರಿಗೆ
ಕಷ್ಟಗಳ ಕೊಟ್ಟಿದೆ !

**ಗಣೇಶ ಹೊಸ್ಮನೆ**
ಜಾನ್ಮನೆ - ೫೮೧ ೩೧೫, ಶಿರಸಿ, ಉತ್ತರ ಕನ್ನಡ ಜಿಲ್ಲೆ

# ಭವದ ಬೆಳಕಿಂಡಿ

ಬಾಗಿಲಿಗೆ ಬಂದ ನಿನ್ನ
ಹೊರಗೆ ನಿಲ್ಲಿಸಿದರೇ... ಕನಕ !
'ಒಳಗೆ ಹೊಕ್ಕಮೇಲೆ ಹೊರಗ ಮರೆತವರು'
ಅವರೇನು ಬಲ್ಲರು – ನಿನ್ನ ಒಳ ಹೊರಗ

೧

ಒಳಗಾಗುವುದು, ಒಳಗೊಳ್ಳುವುದು
ಅಂತರಂಗದ ಮಾತು – ಅವಧಾರಣೆ ಮುದ್ರೆ
ಈ ಭೂ ಭದ್ರೆಯ ಗರ್ಭಕ್ಕೆ ಸಲ್ಲುವ
ಎಲ್ಲಾ ಬೀಜ ಟಿಸಿಲೊಡೆದು ಮೂಡಬಹುದೇ
ಮೊಳಕೆ : ಮಣ್ಣ ಪದರಿನ ಹಳಹಳಿಕೆ !

ಬಿತ್ತಿದ ಬೀಜಗಳೆಷ್ಟೋ, ಮೊಳಕೆಯೊಡೆದು
ಸಸಿ ಗಿಡವಾಗಿ ಬೆಳೆದು ಹೆಮ್ಮರ ಹೂ -
ಬಿಟ್ಟು - ಪರಾಗಸ್ಪರ್ಶಕ್ಕೆ ಕಾದಲ್ಲವೇ;
ಕುಡಿಯೊಡೆದು ಕಸುಗಾಯಿ ಹೀಚಾಗಿ, ದೋರಗಾಯಾಗಿ
ನಂತರ ಹಣ್ಣು!

ಹಣ್ಣೆಂದರೆ ಫಲಿತ; ಘಮಲು ಪಕ್ವತೆಯ
ಪುಳಕ, ನಾಳೆಯ ಹೊತ್ತ ಮತ್ತೊಂದು ಮಡಿಲ
ಬೀಜದ ಸುತ್ತ ಹೂರಣ – ಮಾಗಿದ ಫಲ

ಫಲವಂತಿಕೆಯ ಹೊರಗೆ ಬಿಟ್ಟು ಸಿಪ್ಪೆಯ
ಸ್ವೀಕರಿಸಿದವರಿಗೆ ಗೊತ್ತೇ ಕಳಿತ ಫಲ !
ಕಲಿತದ್ದೇನು ಸಹಸ್ರಮಾನದ ಘಳಿಗೆ ಬಟ್ಟಲಲಿ
ಮಿಂದು, ಬೆಳಕ ನೋಡದ
ಬಟ್ಟೆಯುಟ್ಟು - ಮರೆತು ಮಡಿ !

೨

ದಾಸನ ಮನೆಯ ದಾಸಾನುದಾಸ ಎಂದೆ ನೀ
ಕೃಷ್ಣನ ಮನೆಯ ಬಾಗಿಲಿಗೆ ಬಂದು ನಿಂದೇ
ವೈಕುಂಠ ಕಂಡವನಂತೆ - ''ಇಷ್ಟು ದಿನ ಈ
ವೈಕುಂಠ ಎಷ್ಟು ದೂರವೋ ಎನ್ನುತಲಿದ್ದೆ''
ಎಂದರಿವಿನಲಿ ಕೊಂಡಾಡಿದೆ ಕನಕ

ಬಲ್ಲರೇ ಆ ಬಲ್ಲಿದರು, ವೈಕುಂಠ ದ್ವಾರ
ಪಾಲಕರು ಅಗುಳಿಯಿಕ್ಕಿ ಆ ರಂಗ -







ನಾಥನ ಬಂಧಿಸಿದಂತೆ ಭಾವಿಸಿದವರು - ಮೂರು
ಜನ್ಮದಲ್ಲಿ ರಾಕ್ಷಸರಾಗಿ ಹರಿಯಿಂದಲೇ ವಧಿಸಿ -
ಕೊಂಡಲ್ಲದೇ ಕೈವಲ್ಯವಿಲ್ಲದ – ಆ ಜಯ ವಿಜಯರು !

ಹಿರಣ್ಯ ಗರ್ಭದ ಈ ಗಂಧವತಿ ಪೃಥ್ವಿ ಹೆತ್ತ ಸಾಸಿರ
ಸಾಸಿರ ಸಂತತಿಯಲ್ಲೂ ಕೆಲವು ಜೊಳ್ಳು,
ಹಲವು ಹುಳುಕು,




ಕೆಲವು : ಕಣ್ಣಿಲ್ಲದ, ಕನಸಿಲ್ಲದ, ಕಸುವಿಲ್ಲದ - ಕಸವರ !
ಹೊಂಬಣ್ಣವೇ ಹಿರಣ್ಯವೆನ್ನಲಾದೀತೇ ಕನಕ !?

೩

ಎಂದೂ ಮುಗ್ಗಾಗದ ಮಲಯಜ ಮಮತೆಯ
ರಾಗಿ ಧಾನ್ಯವ ಬಹು ಪ್ರಿಯ ವ್ರೀಹಿಯೊಂದಿಗೆ ತುಲನೆ :
ಮೂಡಿಸಿದ್ದು ನಿಜದ ಧಾರಣೆ, ಭವ ತಾರಿಣಿಯ
ಮೋಹನ ತರಂಗಿಣಿ ನುಡಿಸಿದ್ದು - ಮನುಕುಲದರಿವು.

ತನ್ನೊಳಗೆ ತಾನು ನೀಗದೇ ಹೊಗಲಾಗದು ಸಗ್ಗದ
ಬಾಗಿಲು, ತಿನ್ನಲಾಗದು ಹಣ್ಣ ತಿಳಿಯದೇ
ಅವನ ಇರವ
ಸರ್ವ ಅಂತರ್ಯಾಮಿಯ ಆಯಾಮ ಬಲ್ಲವ ಒಳ
ತಿಳಿವಿನ ಪ್ರಭೆಗೆ ಬೆಳಗಿದರೆ - ಕಣ್ಣು
ಕೋರೈಸಿತೇ ಕನಕ !?

ಬೆಳಕ ಒಳಗೆ ಸ್ವೀಕರಿಸದ ಅಂತರಂಗದವರ ಕಾವಳ
ಮೆತ್ತಿಕೊಂಡಲ್ಲವೇ ಕೃಷ್ಣನಾಗಿದ್ದು ಗೋಪಾಲ !
ಕೊಳಲೂದಿ, ಕೊರಳೆತ್ತಿ ಹಾಡುವ ದಾಸರ ಕರೆದವ
ಆ ಮುರಳಿಗೂ - ಬೇಕು
ಹೊರಗಿನದೆಲ್ಲದರ ಹೊದರು.

೪

ಹೊರ ಮೈ ಶೃಂಗಾರವೇ ಮಡಿ - ಮುದ್ರೆ ? ಹಣೆ
ನಾಮ ಫಲಕ, ಫಾಲದ ಪಕ್ಕಗಳಲಿ ಟಂಕಸಾಲೆ !
ಅಂತರಂಗದ ದೀಪ್ತಿ ಜ್ವಲಿಸದೇ ಹೊರ ಮೈ ಮೇಲೆ
ಎಳೆ ಇಳಿ ಬಿದ್ದ ಮಾತ್ರಕ್ಕೆ ಯಜ್ಞೋಪವೀತವೇ -
ಪರಮ ಪವಿತ್ರವೇ ?

ಒಳಗೆ ಬರಿದು ಹೊರಗೆ ಹಿರಿದು ನೋಟ
ಪಲ್ಲಟ ಪಟಪಟನೆ ಆಡುವ ಮಂತ್ರದ
ಹೂಟ ಬಲ್ಲವ ನೀ
ಎಂದೇ ಒಳ ಹೋಗದೇ ಹೊರ ನಿಂತೆಯಾ ಕನಕ ?
'ಬಾಗಿಲನು ತೆರೆದು ಸೇವೆ ಕೊಡುವ'
ಪಾಳಿ - ಹರಿಗೇ ಬಿಟ್ಟು

ನಿನ್ನೊಂದಿಗೇ ಬೆಳಕು ಬರಬಹುದೆಂದು ಭಾವಿಸಿದ್ದ ಆ
ಭಗವಂತ ಭವಿಗಳಬ್ಬರದ ಬೊಬ್ಬಿರಿದ
ಮಾತಿಗೆ ಬೆದರಿ
ಬಾಗಿಲ ತೆರೆಯಲಿಲ್ಲ! ಭವಕೆ ಮುಖ ತಿರುಗಿಸಿ, ಮಂತ್ರ
ಯಂತ್ರಗಳಿಗೆ ಬೆನ್ನ ತೋರಿ - ಗೋಡೆಯೊಡೆದು ಕಿಂಡಿ

ಅದು
ಭಗವಂತ ನಿನ್ನ ಕಂಡ ಕಿಂಡಿ
ಬೆಳಕ ಆವಾಹಿಸಿಕೊಂಡ ಬೆಳಕಿಂಡಿ

ಕನಕನೇ ಬೆಳಕೆಂದು ಅರಿತ ಕಿಂಡಿ.

**ಡಾ॥ ಆನಂದ್ ಋಗ್ವೇದಿ**
ಜಿಲ್ಲಾ ಮಲೇರಿಯಾ ಅಧಿಕಾರಿಗಳ ಕಛೇರಿ
ಆಯುಷ್ ವಿಭಾಗದ ಕಟ್ಟಡ, ಚಿಗಟೇರಿ ಜಿಲ್ಲಾ ಆಸ್ಪತ್ರೆಯ ಆವರಣ
ದಾವಣಗೆರೆ - ೫೭೭ ೦೦೪

# ‘ಸಾವಿನ ಸನ್ನಿಧಿಯಲ್ಲಿ’ ಕುರಿತು –

**ಎಸ್. ಜಿ. ಸಿದ್ಧರಾಮಯ್ಯ**




ನನ್ನ ಕಾವ್ಯ
ಎತ್ತಿಕೊಂಡವರ ಕೂಸು
ಬಿತ್ತಿದವರ ಬೆಳೆ
ಮುದ್ದಿಸಿದವರಿಗೆ ಮುಂಗಾರು ಮಳೆ
ಒಮ್ಮೊಮ್ಮೆ
ತಲೆ ತಿನ್ನುವ ಗುಂಗಿ ಹುಳ
ಇನ್ನೊಮ್ಮೆ
ಕಲ್ಲು ಎಸೆಯದ ಪ್ರಶಾಂತ ಕೊಳ

– ಎಂದು ತಮ್ಮ ಕಾವ್ಯರಚನೆಯ ಬಗ್ಗೆ ತಾವೇ ಭಾಷ್ಯ ಬರೆದುಕೊಂಡಿರುವ ಸಂಗಮೇಶ ಉಪಾಸೆಯವರು ಬರಹವನ್ನು ಒಂದು ಬದ್ಧತೆಯಾಗಿ ಸ್ವೀಕರಿಸಿದವರು. ಕಾವ್ಯ ಒಂದು ಹವ್ಯಾಸವಲ್ಲ; ಬದುಕನ್ನು ಅರಿಯುವ ಮಾರ್ಗ; ತನ್ನನ್ನೇ ತಾನು ತಿಳಿಯುವ ವಿಮರ್ಶಾ ವಿಧಿ ಎಂದು ಭಾವಿಸಿದವರು.

ನನ್ನ ಕಾವ್ಯ
ನನ್ನ ಕನಸು
ನನ್ನ ಮನಸು
ಕೆಲವೊಮ್ಮೆ
ಒಳಮನಸಿನ ಮುನಿಸು

– ಎನ್ನುತ್ತಾರೆ. ಈ ಮಾತಿಗನುಗುಣವಾಗಿಯೇ ಇವರ ಕಾವ್ಯ ರಚನೆ ಇದೆ. ಇದು ಮುಖ್ಯ ವಿಚಾರ. ಸಂಗಮೇಶ ಅವರು ವೃತ್ತಿಯಲ್ಲಿ ಕೆ.ಎಸ್.ಎ.ಎಸ್. ಅಧಿಕಾರಿ, ಪ್ರವೃತ್ತಿಯಲ್ಲಿ ನಟರು, ಕಿರುತೆರೆಗಳಲ್ಲಿ ತಮ್ಮ ನಟನಾ ಚಾತುರ್ಯದ ಮೂಲಕ ಹಾಸ್ಯ ಪ್ರಧಾನ ಗುಣದಿಂದ ಕನ್ನಡ ಮನಸ್ಸುಗಳನ್ನು ಗೆದ್ದವರು. ಇಷ್ಟರ ನಡುವೆ ಇವರು ಬರಹವನ್ನು ಒಂದು ಗಂಭೀರ ಕ್ರಿಯೆಯಾಗಿ ತೆಗೆದುಕೊಂಡಿದ್ದಾರೆ. ಕಲಾತ್ಮಕ ಕಾಳಜಿಗಿಂತ ಜನಮುಖೀ ಬದ್ಧತೆ ಬರಹಕ್ಕೆ ಮುಖ್ಯ ಎನ್ನುವ ತಾತ್ವಿಕತೆಯ ದಾರಿಯಲ್ಲಿ ಹೆಜ್ಜೆ ಹಾಕಿದವರು.

ಬದುಕು ದೊಡ್ಡದು ಸಾವಿರ ಪಾಲು
ಧರ್ಮ, ದೇವರುಗಳಿಗಿಂತ
ಮನಸ್ಸು ಕಟ್ಟುವುದು ಧರ್ಮ
ಮನಸ್ಸು ಮೆಟ್ಟುವುದು ಕರ್ಮ

– ಅಯೋಧ್ಯೆಯ ತೀರ್ಪು ಪ್ರಕಟವಾದ ಸಂದರ್ಭದಲ್ಲಿ ಪ್ರತಿಕ್ರಿಯಾತ್ಮಕ ಭಾವದಲ್ಲಿ ಬರೆದ ‘ಅಯೋಧ್ಯೆ’ ಕವನ ಇವರ ಬದುಕಿನ ಬಗೆಗಿನ ಕಾಳಜಿಯನ್ನು ಮನಗಾಣಿಸುತ್ತಿದೆ.

ನಾನು ಮನುಷ್ಯನಾಗಿ
ಮಾನವೀಯ ನೆರಳ ನೆಲೆಯಲಿ
ಬದುಕ ಬಂಡಿ ದೂಡಬೇಕೆಂದುಕೊಳ್ಳುತ್ತೇನೆ
ಜಾಲಿ ಮುಳ್ಳಾಗಿ
ಬೇವಿನ ನೆಳ್ಳಾಗಿ
ಜಾತಿಯಾಗಿ ಕಾಡಿತ್ತು ಮಾಯೆ.

– ಈ ಸಮಾಜದ ನಡುವೆ ಅಕ್ಷರ ಕಲಿತ ಮೇಲೂ ಬದುಕು ಸಾಗಿಸುವಾಗ ಅನುಭವಿಸುವ ಬೇರೆ ಬೇರೆ ಬಂಗ ಬವಣೆಗಳಿಗಿಂತ ಜಾತಿ ನೀತಿಯ ಪಿಶಾಚಿ ವರ್ತನೆ ಕೊಡುವ ನೋವು ಭಯಂಕರವಾದುದು. ಜಾತಿ ಎಂಬುದು ಕೆಲವರಿಗೆ ಮೇಲರಿಮೆಯ ರೋಗವಾದರೆ ಹಲವರಿಗೆ ಕೀಳರಿಮೆಯ ಕೆಸರು, ಇದನ್ನು ಗೆಲ್ಲುವ ಆತ್ಮ ಪ್ರತ್ಯಯವನ್ನು ರೂಢಿಸಿಕೊಳ್ಳುವುದೆಂದರೆ ವೈಚಾರಿಕವಾಗಿ ನೈತಿಕ ಬಲದ ನೆಲೆಯಲ್ಲಿ ಮನುಷ್ಯರಾಗಿ ಮನುಷ್ಯರನ್ನು ಮಾತ್ರ ಗೌರವಿಸುವಂತೆ ನಡೆಯುವುದು. ಉಪಾಸೆಯವರಿಗೆ ಈ ಅಂಶ ಚೆನ್ನಾಗಿ ಗೊತ್ತು. ಒಬ್ಬ ನಟನಾಗಿ ಜನಮಧ್ಯದಲ್ಲಿಯೇ ತನಗೆ ತನ್ನ ಕಲೆಗೆ ಒಂದು ನೆಲೆ ಬೆಲೆ ಎನ್ನುವುದನ್ನು ಅರಿತಿರುವ ಈ ಕವಿಗೆ ನಗರದ ಬದುಕು ಜನಾರಣ್ಯದ ಬದುಕಾಗಿ ಭಾಸವಾಗಿರುವುದು ಸಹಜವಿದೆ. ಇಲ್ಲಿ ಎಲ್ಲ ಕಡೆ ಜನವೋ ಜನ. ಆದರೆ ಆ ಜನದ ನಡುವೆ ಸಂಬಂಧ ಸೂಕ್ಷ್ಮ ಹೇಗೆ ಎಂಬುದನ್ನು ನೋಡಿದಾಗ,

ಇಂದು
ನಾನು ಏಕಾಂಗಿ
ಕಂಪೌಂಡಿನೊಳಗೆ
ಗೋಡೆ ಬಿದ್ದ ಗೂಡಿನ
ಮಾಳಿಗೆ ಮೇಲೆ ಕುಳಿತ
ಒಂಟಿ ಗೂಬೆ ಹಾಗೆ

– ಹೀಗೆ ಇವರಿಗೆ ನಗರದ ಬದುಕು ಭಾವ-ಬಂಧಗಳನ್ನು ಬೆಸೆಯದ ಜಗತ್ತಾಗಿದೆ. ಅದೇ ಹಳ್ಳಿ ಇವರಿಗೆ ಪ್ರೀತಿ, ವಾತ್ಸಲ್ಯ, ದ್ವೇಷ, ಮಾತ್ಸರ್ಯ, ಸಣ್ಣತನ, ದೊಡ್ಡಸ್ತಿಕೆ ಈ ಎಲ್ಲ ನೆಲೆಗಳಲ್ಲಿ ಸಂಬಂಧಗಳ ಗಾಢತೆಯಲ್ಲಿ ಕಾಡುವ ನೆನಪಾಗಿದೆ. ಇದು ಬಾಲ್ಯಾನುಭವದ ಭಾವಕೋಶದ ಜಗತ್ತಿನ ಚಿತ್ರಣ. ‘ಎಲ್ಲರೂ ಬೇಕು’ ಎಂಬ ಕವನದಲ್ಲಿ ಈ ಅನುಭವದ ನಿವೇದನೆ ಇದೆ.

ಇತ್ತೀಚಿನ ಎರಡು ದಶಕಗಳಲ್ಲಿ ಹಳ್ಳಿಗಳೆಲ್ಲ ನಗರಗಳಾಗುತ್ತಿವೆ. ಹಿಂದೆ ಅಜಗರದಂತೆ ಬೆಳೆಯುತ್ತಿದ್ದ ನಗರಗಳು ತಮ್ಮ ಸುತ್ತ ಮುತ್ತಿಕೊಂಡಂತಿದ್ದ ಹಳ್ಳಿಗಳನ್ನೆಲ್ಲ ನುಂಗಿ ಬೆಳೆಯುತ್ತಿದ್ದವು. ಒಂದು ಹೊಸ ಬಡಾವಣೆಯೆಂದರೆ ಒಂದೆರಡಾದರೂ ಹಳ್ಳಿಗಳು, ಅವುಗಳ ಜಮೀನುಗಳು ನಗರದೊಳಕ್ಕೆ ಸೇರುವುದೇ ಆಗಿತ್ತು. ಹೀಗೆ ನಗರದೊಳಕ್ಕೆ ಹಳ್ಳಿ ಸೇರಿದರೂ ಹಳ್ಳಿಯ ಸಂಸ್ಕೃತಿಯನ್ನು ನಗರದ ಬದುಕು ಉಸಿರಾಡಿ ಉಳಿಸಿಕೊಂಡಿರುತ್ತಿತ್ತು. ಆದರೆ ಇತ್ತೀಚಿನ ದಶಕಗಳಲ್ಲಿ ನಗರದೊಳಗೆ ಹಳ್ಳಿಯ ಸಂಸ್ಕೃತಿ ಉಳಿಯುವುದಿರಲಿ, ಹಳ್ಳಿಗಳಿಗೇ ನಗರ ಸಂಸ್ಕೃತಿ ಲಗ್ಗೆ ಇಟ್ಟಿದೆ. ಹಳ್ಳಿಗಳು ನಗರಗಳಾಗಿ ಪರಿವರ್ತಿತವಾಗುತ್ತಿವೆ. ಇದು ಜಾಗತೀಕರಣದ ಫಲವೋ ದೃಶ್ಯ ಮಾಧ್ಯಮಗಳ ಕೊಡುಗೆಯೋ ಅಂತೂ ಗ್ರಾಮಗಳಲ್ಲಿ ಗ್ರಾಮಸಂಸ್ಕೃತಿ ಕಣ್ಮರೆಯಾಗುತ್ತಿರುವುದು ಕಂಡುಬರುತ್ತಿದೆ. ಇದನ್ನು ಬೆಳವಣಿಗೆ ಎನ್ನುವುದಾದರೆ ಏಕಾತ್ಮಕ ಸಂಸ್ಕೃತಿಯ ಯಾಂತ್ರೀಕೃತ ವ್ಯವಸ್ಥೆಯ ವಿದ್ಯಮಾನದಲ್ಲಿ ವಿಘಟನೆ ಎಂಬುದು ಯುಗಧರ್ಮ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಈ ವಿಘಟನೆ ಮನುಷ್ಯ ಸಂಬಂಧಗಳ ಭಾವನಾತ್ಮಕ ಆರ್ದ್ರತೆಯನ್ನು ಹಾಳುಗೆಡವಿ ವ್ಯಾವಹಾರಿಕ ಲೆಕ್ಕಾಚಾರಕ್ಕೆ ಬದುಕನ್ನು ಬಲಿಕೊಡುತ್ತದೆ. ಇಂಥ ಬೆಳವಣಿಗೆ ಅಪೇಕ್ಷಣೀಯವೇ ಎಂಬುದು ಆಲೋಚಿಸಬೇಕಾದ ವಿಚಾರ ಈ ಬಗೆಯ ವಿಷಮ ಬೆಳವಣಿಗೆಯ ಸಂದರ್ಭದಲ್ಲಿ ಸಂಗಮೇಶ ಉಪಾಸೆಯವರ ಒಂದು ಪದ್ಯ ‘ನಮ್ಮ ಮನೆ ನಮ್ಮ ದೇಶ’ ಇದಕ್ಕೆ ವಿರುದ್ಧ ಭಾವದಲ್ಲಿ ಬೆಳೆದದ್ದಾಗಿ ಗಮನ

ಸೆಳೆಯುತ್ತದೆ. ಮನೆಯೊಳಗೆ ಅಪ್ಪ, ಅವ್ವ ಆಸ್ತಿಕರು. ಊರ ಸೀಮೆಯ ದೇವ ದೇವತೆಯರ ಪಟಗಳನ್ನೆಲ್ಲ ತಂದು ಮನೆ ಜಗಲಿಯ ಗೋಡೆ ಮೇಲೆ ನೇತುಹಾಕಿ ಪೂಜೆ ಪುನಸ್ಕಾರ ಮಾಡುವವರು. ಆದರೆ ಇವರ ಮಗ ಎಡಬಿಡಂಗಿ, ಅಂತೆಯೇ ಸೊಸಿ. ಹೀಗಿದ್ದೂ ಮನೆಯಲ್ಲಿ ಪ್ರೀತಿಯೇ ದೈವ, ಬಹುತ್ವದ ಸಂಸ್ಕೃತಿಗಳನ್ನೊಳಗೊಂಡ ದೇಶದ ಕಥೆಯಂತಿದೆ ಮನೆ ಎನ್ನುತ್ತಾರೆ ಉಪಾಸೆಯವರು.

ಪುಟ್ಟರಾಜ ಗವಾಯಿಗಳನ್ನು ಕುರಿತ ಒಂದು ಪದ್ಯವಿದೆ. ಕಣ್ಣಿಲ್ಲದ ಗವಾಯಿಗಳ ಬದುಕಿನ ಅಂತರಂಗದ ಕಣ್ಣಿನ ಜೀವನ ದರ್ಶನವನ್ನು ಅನಾವರಣಗೊಳಿಸಿರುವ ಪದ್ಯ ಇದು. ಕಣ್ಣುಳ್ಳವರು ಮಾಡುವ ಪಾಪಕೃತ್ಯ ಸಮಾಜ ವಿರೋಧಿ ಸ್ವಾರ್ಥಪರ ಕುಕೃತ್ಯಗಳನ್ನು ಬಯಲಿಗೆಳೆಯುತ್ತಾ ಗವಾಯಿಗಳ ಅಂತರಂಗ ಬೋಧೆಯ ಜೀವನಾದರ್ಶವನ್ನು ಈ ಕವನದಲ್ಲಿ ನಿರೂಪಿಸಲಾಗಿದೆ.

ಈ ಸಂಕಲನದಲ್ಲಿ ಸಾವನ್ನು ಕುರಿತು ಎರಡು ಪದ್ಯಗಳಿವೆ. 'ನಾನು ಸಾಯಬೇಕು' ಎಂಬುದು ಒಂದು ಪದ್ಯ. ಕವಿ ಸಾಯಬೇಕು ಎಂದು ಬಯಸುವುದು ಯಾಕೆ ? ಇದಕ್ಕೆ ಕವಿ ಕೊಡುವ ಉತ್ತರ, ತನ್ನ ಸಾವಿಗೆ ತಾನು ಕಾರಣನಲ್ಲ ಎಂಬ ಕಾರಣಗಳ ಸರಮಾಲೆ. ಅಂದರೆ ಬದುಕಿನ ಎಲ್ಲ ಕ್ಷೇತ್ರಗಳಲ್ಲಿಯೂ ಭ್ರಷ್ಟತೆ, ಲೂಟಿ, ದುರಾಸೆ ಹೇಗೆ ಹಬ್ಬಿವೆ ಎಂಬುದನ್ನು ಕವಿ ಪರೋಕ್ಷಭಾವದಲ್ಲಿ ಹೇಳುತ್ತಿದ್ದಾರೆ. ಹೀಗೆ ಹೇಳುತ್ತಲೆ ಇಂಥದ್ದರ ನಡುವೆ ಬಾಳಲಾರದ ಪ್ರಜ್ಞಾವಂತನ ಸ್ಥಿತಿ ಸಾವನ್ನು ಬಯಸುತ್ತದೆ ಎಂದು ನಿರೂಪಿಸುತ್ತಾರೆ.

ಸಾಯುವುದಕ್ಕೆ ಅಸಹನೀಯ ವಾತಾವರಣ ಕಾರಣವೆನ್ನುವುದು ವ್ಯಂಗ್ಯಾತ್ಮಕ ನೆಲೆಯಲ್ಲಿ ಸಮಾಜ ವಿಮರ್ಶೆಯಂತೆ ಭಾಸವಾದರೂ ಸತ್ತು ಪುನರ್ಜನ್ಮವಿದ್ದರೆ ಮತ್ತೆ ರಾಮರಾಜ್ಯದಲ್ಲಿ ಬಾಳಬೇಕೆಂಬ ಆಸೆ ವ್ಯಕ್ತಪಡಿಸುತ್ತಾರೆ. ಇದು ಎಷ್ಟು ಸರಿ, ಎಂಬ ಪ್ರಶ್ನೆ ಏಳುತ್ತದೆ. ಏಕೆಂದರೆ ಸಾಮಾಜಿಕ ಸಮಸ್ಯೆಗಳಿಗೂ ಕವಿಯ ವೈಯಕ್ತಿಕ ಹೊಣೆಗಾರಿಕೆಗೂ ಯಾವುದೇ ಸಂಬಂಧವಿಲ್ಲವೇ ? ಪಲಾಯನ ಕವಿಗೆ ಎಷ್ಟು ಸರಿ, ಎನ್ನುವ ಪ್ರಶ್ನೆ ಹುಟ್ಟುತ್ತದೆ. ವ್ಯಂಗ್ಯದ ಛಾಪು ಕವಿತೆಗೆ ಇದ್ದಿದ್ದರೆ ಇಡೀ ಚಿಂತನೆಯ ದಿಕ್ಕು ಬದಲಾಗುತ್ತಿತ್ತು. ಆದರೆ ಹಾಗಾಗಿಲ್ಲ.

ಎಲ್ಲರೂ
ಈಚಲು ಮರದ
ಕೆಳಗೆ ಕುಳಿತ ಬುದ್ಧರೇ
ಹೇಳುವುದು ತತ್ವ
ತಿನ್ನೋದು ಬದನೆಕಾಯಿ

– ಈ ರೀತಿಯ ಕೆಲವು ಸಾಲುಗಳು ಲೋಕರೂಢಿಯ ಬಳಕೆ ಮಾತುಗಳಾಗಿಯೂ ಕವನದ ಬಂಧದಲ್ಲಿ ಗಮನ ಸೆಳೆಯುತ್ತವೆ.

ಸರ್ಕಾರಿ ನೌಕರನಾಗಿ ಕೆಲಸ ಮಾಡುವಾಗ ವ್ಯಕ್ತಿ ಸ್ವಾತಂತ್ರ್ಯದ ಹರಣವಾಗಿದೆ ಎಂಬ ಭಾವದ ಪ್ರತಿಕ್ರಿಯೆ 'ನಾನು ಮಾರಾಟವಾಗಿದ್ದೇನೆ' ಪದ್ಯದಲ್ಲಿ ನಿರೂಪಿತವಾಗಿದೆ. ಇಲ್ಲಿ ಕಾಯಕ ಗೌರವಕ್ಕಿಂತ




ಕಾಯಕ ನಿರ್ವಹಣೆಗೆ ಇರುವ ಇಕ್ಕಟ್ಟುಗಳ ಬಗ್ಗೆ ಕವಿಯ ಭಾವದ ತುಡಿತವಿದೆ.

'ನನ್ನವರು' ಎಂಬ ಪದ್ಯದಲ್ಲಿ ಉಪಾಸೆಯವರು ಊರಿನ ಜನರ ಬದುಕಿನ ಬಂಗಬವಣೆಗಳನ್ನು ಕುರಿತು ಹೇಳುತ್ತಾರೆ. ಪಂಚನದಿಗಳ ನಾಡಿನ ಜನರಾಗಿ ಮಳೆಯಾಧಾರಿತ ಕೃಷಿ ಮಾಡುವಾಗ ಆ ಕೃಷಿ ಬದುಕಿನ ಏಳುಬೀಳುಗಳ ಬಗ್ಗೆ ಮಾತನಾಡಿದ್ದಾರೆ. ದಕ್ಷಿಣ ಕರ್ನಾಟಕದ ಅಣೆಕಟ್ಟುಗಳನ್ನು ನೆನೆದು,

ಕರ್ನಾಟಕ ದಕ್ಷಿಣದಲಿ
ಹುಟ್ಟಿದ ವಿಶ್ವೇಶ್ವರಯ್ಯ
ಕಾವೇರಿ ನೀರು ಕಟ್ಟಿ
ಮಾಡಿದ ನಂದನವನ
ಕರ್ನಾಟಕ ಉತ್ತರದಲಿ
ವಿಶ್ವೇಶ್ವರಯ್ಯ ಹುಟ್ಟಿಬಾರಯ್ಯ
ಮಾಡಲು ಬರಡು ಚಂದನ

– ಎಂದು ಹೇಳುತ್ತಾರೆ. ಇಲ್ಲಿ ಇತಿಹಾಸದ ಅರಿವಿನ ಬಗ್ಗೆ ಇತಿಹಾಸದ ಸತ್ಯ ಮತ್ತು ದಾಖಲೀಕರಣದ ಅನ್ಯಾಯಗಳ ಬಗ್ಗೆ ಎರಡು ಮಾತು ಬರೆಯಲೇ ಬೇಕಾಗಿದೆ.

ಇತಿಹಾಸ ಪ್ರಜ್ಞೆ ಎಂಬುದು ಇತಿಹಾಸವನ್ನು ಬರೆದವರ ಮಾಹಿತಿ ಆಧಾರದಲ್ಲಿ ರೂಪಿತವಾಗುವುದು ಅಕ್ಷರ ಪರಂಪರೆಯ ವಿದ್ಯಮಾನ. ಈ ವಿದ್ಯಮಾನ ಎಷ್ಟೋ ಸಾರಿ ವಾಸ್ತವಿಕ ಸತ್ಯವನ್ನು ಮರೆಮಾಚಿರುತ್ತದೆ. ವಿಶ್ವೇಶ್ವರಯ್ಯನವರ ಪ್ರತಿಭೆಯ ಬಗ್ಗೆ ಗೌರವಾದರ ಭಾವಗಳನ್ನು ಇಟ್ಟುಕೊಂಡೂ ಇಲ್ಲಿ ಮುಚ್ಚಲ್ಪಟ್ಟಿರುವ ಸತ್ಯವನ್ನು ಗಮನಿಸುವುದು ಮುಖ್ಯ. ಮೈಸೂರು ಸಂಸ್ಥಾನವನ್ನು ಹೆಚ್ಚು ಪ್ರಗತಿಶೀಲ ಸಂಸ್ಥಾನವಾಗಿ ರೂಪಿಸಿದವರು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು. ಪ್ರಜಾಪ್ರಭುತ್ವ ಇಲ್ಲದಿದ್ದಾಗಲೂ ತಾವೇ ನಾಡ ಪ್ರಭುವಾಗಿದ್ದಾಗ ಪ್ರಜಾಪ್ರತಿನಿಧಿ ಮಂಡಳಿಯನ್ನು ರೂಪಿಸಿ ಪ್ರಜಾಪ್ರಭುತ್ವದ ಮಾದರಿಯಲ್ಲಿ ಆಡಳಿತ ನಡೆಸಿದ್ದ ನಾಡಪ್ರಭು ಅವರಾಗಿದ್ದರು. ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಕರ್ನಾಟಕದಲ್ಲಿ ಮೊದಲು ಜಾರಿಗೆ ತಂದ ಪ್ರಭು ಅವರಾಗಿದ್ದರು. ಕನ್ನಂಬಾಡಿಯನ್ನು ಕಟ್ಟಿಸುವುದಕ್ಕೆ ಅವರು ಕಾರಣೀಭೂತರೆಂಬ ಇತಿಹಾಸದ ಸತ್ಯ ಕಳೆದು ಹೋಗಲು ಕಾರಣವಾಗಿರುವ ಸಾಂಸ್ಕೃತಿಕ ರಾಜಕಾರಣದ ಹುನ್ನಾರವನ್ನು ಕವಿ ಉಪಾಸೆಯವರು ಮನಸ್ಸಿಗೆ ತಂದುಕೊಂಡಿದ್ದರೆ ಮೇಲಿನ ಸಾಲುಗಳನ್ನು ಬರೆಯುವಾಗ ಅವು ಹೀಗೆ ಇರುತ್ತಿರಲಿಲ್ಲ ಅನ್ನಿಸುತ್ತಿದೆ. ನಮ್ಮಲ್ಲಿ ಎಂಜಿನಿಯರ್‌ಗಳು ಸರ್ಕಾರದ ಸೇವಕರಾಗಿರುತ್ತಾರೆ. ಅವರ ಬುದ್ಧಿಮತ್ತೆ ಕಾರ್ಯರೂಪಕ್ಕೆ ಬರಬೇಕಾದರೆ ರಾಜಕೀಯ ಇಚ್ಛಾಶಕ್ತಿ ಕ್ರಿಯೆಯ ಹಿಂದಿನ ಒತ್ತಾಸೆಯಾಗಿ ಇರುತ್ತದೆ. ಮೂಲತಃ ಈ ರಾಜಕೀಯ ಇಚ್ಛಾಶಕ್ತಿ ಇಲ್ಲದೆ ಹೋದರೆ ಬುದ್ಧಿಮತ್ತೆಗೆ ನೆಲೆ, ಬೆಲೆ ಎರಡೂ ಇರುವುದಿಲ್ಲ. ಸಾಮಾಜಿಕ ಮೀಸಲಾತಿ ನೀತಿಯನ್ನು ಕರ್ನಾಟಕದಲ್ಲಿ ಮೊದಲು ಜಾರಿಗೆ ತಂದ ಪ್ರಭು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು. ಈ ಮೀಸಲಾತಿಯನ್ನು ವಿರೋಧಿಸಿದವರು ಸರ್. ಎಂ. ವಿಶ್ವೇಶ್ವರಯ್ಯನವರು. ಮೀಸಲಾತಿಯಿಂದ ಗುಣಾತ್ಮಕತೆ ಹಾಳಾಗುತ್ತದೆ; ಪ್ರತಿಭೆಗೆ ಮನ್ನಣೆ ಕೊಡಬೇಕು ಎಂದು ಪಟ್ಟುಹಿಡಿದ ಸರ್ ಎಂ. ವಿಶ್ವೇಶ್ವರಯ್ಯನವರು ನಾಲ್ವಡಿಯವರ ರಾಜಕೀಯ ಇಚ್ಛಾಶಕ್ತಿಯ ಎದುರು ಏನೂ ಮಾಡಲಾಗಲಿಲ್ಲ, ತಾವೇ ರಾಜಿನಾಮೆ ಕೊಟ್ಟು ಹೊರಬಂದರು. ಇಂಥ ನಾಲ್ವಡಿಯವರ ಜನಪರ ಕಾರ್ಯಗಳನ್ನು ದಾಖಲಿಸುವಲ್ಲಿ ಅಕ್ಷರ ಜಗತ್ತಿನ ಇತಿಹಾಸಜ್ಞರು ಅನ್ಯಾಯ ಮಾಡಿದ್ದಾರೆ. ಇತಿಹಾಸದ ಇಂಥ ಪ್ರಮಾದಗಳಿಗೆ ಹೊಣೆ ಯಾರು ? ಹೀಗಾಗಿ ಉಪಾಸೆಯವರು ಸ್ಥಾಪಿತ ಇತಿಹಾಸದ ಹೇಳಿಕೆಗಳಿಗೆ ಮಾರುಹೋಗಿ ಈ ರೀತಿ ಬರೆದಿದ್ದಾರೆ, ಅಷ್ಟೆ.

ಕವಿ ಸಂಗಮೇಶ ಉಪಾಸೆಯವರ ಸಾಮಾಜಿಕ ಪ್ರಜ್ಞೆ ಹೆಚ್ಚು ಜಾಗೃತವಾಗಿರುವುದು. ಸದ್ಯದ ವಿದ್ಯಮಾನಗಳ ಬಗ್ಗೆ ಅವರು ಅಷ್ಟೇ ನಿಖರವಾಗಿ ಪ್ರತಿಸ್ಪಂದಿಸುತ್ತಾರೆ. ಜನಲೋಕಪಾಲ ಸಮಿತಿಯ ಬಗ್ಗೆಯೂ ಅವರು ಕಾವ್ಯ ಬರೆಯುತ್ತಾರೆ. ವೈಯಕ್ತಿಕ ಬದುಕಿನ ಅನುಭವ ಜಗತ್ತಷ್ಟೇ ಅಲ್ಲದೆ ಸಾಮಾಜಿಕ ವ್ಯಾಪ್ತಿಯ ಚಿಂತನೆಗಳಿಗೂ ಇವರ ಕಾವ್ಯದ ಪುಟಗಳು ಕಣ್ಣಾಗಿರುವುದು ಗಮನಿಸಬೇಕಾದ ವಿಚಾರ. ಕಾವ್ಯ ಕರ್ಮ ಪ್ರತಿಕ್ರಿಯಾತ್ಮಕ ಮಾರ್ಗ ಹಿಡಿದಾಗಲೂ ಪ್ರತಿಮಾತ್ಮಕ ಉತ್ತಮ ಸಂವೇದನಾಶೀಲತೆಯನ್ನು ಮೈಗೂಡಿಸಿಕೊಂಡಾಗ ಅದಕ್ಕೆ ತಾಳಿಕೆಯ ಗುಣ ಪ್ರಾಪ್ತವಾಗುತ್ತದೆ. ಈ ದಾರಿಯಲ್ಲಿ ಉಪಾಸೆಯವರು ಇನ್ನೂ ಹೆಚ್ಚಿನ ಗಟ್ಟಿ ಹೆಜ್ಜೆಗಳನ್ನು ಇಟ್ಟು ನಡೆಯಲಿ ಎಂದು ಆಶಿಸುತ್ತೇನೆ.

**ಎಸ್. ಜಿ. ಸಿದ್ಧರಾಮಯ್ಯ**
ಎಸ್-೧೩೨, ದೀಪ್ತಿ ಅಪಾರ್ಟ್‌ಮೆಂಟ್ಸ್
ಎಫ್-೨, ಕಿರ್ಲೋಸ್ಕರ್ ಕಾಲೋನಿ
೧ನೇ ಅಡ್ಡರಸ್ತೆ, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯

## ‘ಬ್ರಿಕ್ಸ್’ ದೆಹಲಿ ಶೃಂಗಸಭೆ – ಮಹತ್ವದ ಹೆಜ್ಜೆ

ನವದೆಹಲಿಯಲ್ಲಿ ಕೆಲದಿನಗಳ ಹಿಂದೆ ಜರುಗಿದ ಐದು ರಾಷ್ಟ್ರಗಳ -ಬ್ರೆಜ್ಹಿಲ್, ರಷ್ಯಾ, ಇಂಡಿಯಾ, ಚೀಣಾ, ದಕ್ಷಿಣ ಆಫ್ರಿಕಾ - ಶೃಂಗಸಭೆ ಅಂಗೀಕರಿಸಿದ ತೀರ್ಮಾನಗಳು ಅತ್ಯಂತ ಮಹತ್ವಪೂರ್ಣವಾದದ್ದು ಅದರ ಅಸ್ತಿತ್ವದ ಇತಿಹಾಸದಲ್ಲಿ. ಇಂಗ್ಲಿಷಿನಲ್ಲಿ ಸಂಕ್ಷೇಪವಾಗಿ ‘ಬ್ರಿಕ್ಸ್’ ಎಂದು ಕರೆಯುವ ಈ ಕೂಟ ಆರು ವರ್ಷಗಳಲ್ಲಿ ಒಂದು ಹೆಜ್ಜೆ ಮುಂದಿರಿಸಿದೆ ಎನ್ನಬೇಕು. ಅಂಗೀಕೃತವಾಗಿರುವ ಘೋಷಣೆಯಲ್ಲಿರುವ ಅಡಕವಾಗಿರುವ ಅಂಶಗಳು ಕಾರ್ಯಗತವಾದರೆ ಬಹುದೊಡ್ಡ ಸಾಧನೆ ಯಾಗುವುದು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಪಾಶ್ಚಾತ್ಯ ರಾಷ್ಟ್ರಗಳ ಏಕಸ್ವಾಮ್ಯಕ್ಕೆ ಪರ್ಯಾಯವಾಗುವ ಶಕ್ತಿಸಾಮರ್ಥ್ಯವಿರುವುದು ಈ ತಂಡದ ದೇಶಗಳಿಗೆ ಮಾತ್ರ. ಸಿರಿಯ ಮತ್ತು ಇರಾನಿನ ವಿಷಯಗಳಲ್ಲಿ ಬ್ರಿಕ್ಸ್ ಅಮೇರಿಕಾಕ್ಕೆ ಭಿನ್ನವಾದ ನಿಲುವನ್ನು ತಳೆದು, ಮಾತುಕತೆಗಳಿಗೆ ಹೆಚ್ಚು ಒತ್ತು ನೀಡಿರುವುದು ಬಹುಮುಖ್ಯ. ಇದಕ್ಕೆ ಮೊದಲು ವಿಶ್ವಸಂಸ್ಥೆಯಲ್ಲಿ ರಷ್ಯ, ಚೀಣಾಗಳ ವೀಟೋ ಸಿರಿಯದಲ್ಲಿ ಲಿಬಿಯ ಮಾದರಿಯ ಮಿಲಿಟರಿ ಹಸ್ತಕ್ಷೇಪವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಹೆಚ್ಚು ಕಡಿಮೆ ಸೋವಿಯೆತ್ ಒಕ್ಕೂಟದ ಪತನಾನಂತರ ವಿಶ್ವಸಂಸ್ಥೆಯಲ್ಲಿ ಅಮೇರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಪಾರುಪತ್ಯವೇ ಮೇಲುಗೈ ಪಡೆದುಕೊಂಡಿದೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಅವು ತುಳಿದದ್ದೆ ರಾಜಮಾರ್ಗ. ಇದಕ್ಕೊಂದು ಪರ್ಯಾಯ ಜರೂರು ಅಗತ್ಯ. ಅದನ್ನು ಈ ಪಂಚರಾಷ್ಟ್ರಗಳಾದ ಬ್ರಿಕ್ಸ್ ಒದಗಿಸಬಲ್ಲದು. ಅಂಥದ್ದಾಗಲಿ ಎನ್ನುವುದೇ ನಮ್ಮ ಬಯಕೆ.




ಬಹಳ ಹಿಂದೆ ರಷ್ಯಾದ ಮಹಾಕ್ರಾಂತಿಯ ನಾಯಕ ಲೆನಿನ್ ರಷ್ಯ, ಚೀಣಾ ಮತ್ತು ಭಾರತಗಳು ಒಟ್ಟುಗೂಡಿದರೆ ಜಗತ್ತಿನ ಚಹರೆಯನ್ನೇ ಬದಲಿಸಬಲ್ಲವು ಎಂದು ಹೇಳಿದ್ದ. ಅದು ಮುಂದೆ ನನಸಾದರೆ ಒಳ್ಳೆಯದು. ಬ್ರಿಕ್ಸ್ ತಂಡದಲ್ಲಿರುವ ಐದು ದೇಶಗಳೂ ಅಭಿವೃದ್ಧಿರತ ರಾಷ್ಟ್ರಗಳು. ಪ್ರಪಂಚದ ಶೇ. ೪೩.ರಷ್ಟು ಜನಸಂಖ್ಯೆಯನ್ನು ಪ್ರತಿನಿಧಿಸುವ ಈ ದೇಶಗಳ ವಾಣಿಜ್ಯ ವಹಿವಾಟು ಶೇ. ೧೮ರಷ್ಟು ಮತ್ತು ಜಾಗತಿಕ ಬಂಡವಾಳದಲ್ಲಿ ಶೇ. ೫೩.ರಷ್ಟನ್ನು ಆಕರ್ಷಿಸುತ್ತಿವೆ. ಆದರೆ ಈ ದೇಶಗಳು ಆರ್ಥಿಕವಾಗಿ ಇನ್ನೂ ಅಮೇರಿಕ ಮತ್ತು ಪಾಶ್ಚಾತ್ಯ ದೇಶಗಳ ಮೇಲೆ ಅವಲಂಬಿತ. ಈಚಿನ ವರ್ಷಗಳಲ್ಲಿ ಬ್ರಿಕ್ಸ್ ದೇಶಗಳ ಮಧ್ಯೆ ಪರಸ್ಪರ ಆರ್ಥಿಕ ಸಹಕಾರ ಹೆಚ್ಚಾಗಿದ್ದರೂ ಅದು ಇನ್ನೂ ಅಂಬೆಗಾಲಿಡುತ್ತಿವೆ. ಐಎಂಎಫ್ ಮತ್ತು ವರ್ಲ್ಡ್ ಬ್ಯಾಂಕ್‌ಗಳ ಹಿಡಿತದಿಂದ ಬಿಡುಗಡೆಯಾಗುವುದು ಸಾಧ್ಯವಾಗದು. ಪಾಶ್ಚಾತ್ಯರ ಪಾರುಪತ್ಯವೇ ಇರುವ ಈ ಹಣಕಾಸಿನ ಸಂಸ್ಥೆಗೆ ಪರ್ಯಾಯ ಇಲ್ಲವಾಗಿದೆ. ಅದನ್ನು ಪೂರೈಸುವ ದೃಷ್ಟಿಯಿಂದಲೇ ರೂಪುಗೊಂಡಿರುವುದು ಬ್ರಿಕ್ಸ್‌ನ ಬ್ಯಾಂಕೊಂದರ ಸ್ಥಾಪನೆಯ ಯೋಜನೆ. ಇದು ಇನ್ನೂ ಚಿಂತನೆಯ ಮಟ್ಟದಲ್ಲಿಯೇ ಇದೆ. ಆದಾಗ್ಯೂ ಇದು ಸಾಧುವಾದ ಸ್ವಾಗತಾರ್ಹ ಯೋಜನೆ. ಇಂಥ ಒಂದು ವಿಚಾರ ಪ್ರಕಟವಾಗುತ್ತಿದ್ದಂತೆ ಪಾಶ್ಚಾತ್ಯ ರಾಷ್ಟ್ರಗಳು ಎಚ್ಚೆತ್ತುಕೊಂಡಿವೆ. ಅದಕ್ಕೆ ತಣ್ಣೀರೆರಚಲು ನೋಡುತ್ತಿವೆ. ಬ್ರಿಕ್ಸ್‌ನ ಈ ಅಭೀಪ್ಸೆ ಎಷ್ಟೇ ಪರಿಮಿತವಾದ್ದಾಗಿದ್ದರೂ ಕೈಗೂಡಿದರೆ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಮಹತ್ವದ ಬೆಳವಣಿಗೆಯಾಗುತ್ತದೆ ಮತ್ತು ಅಭಿವೃದ್ಧಿಶೀಲ ದೇಶಗಳಿಗೆ ವರದಾನವಾಗುತ್ತದೆ.

ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಹೊಸದಾಗಿ ಸ್ವತಂತ್ರಗೊಂಡ ದೇಶಗಳು ಪರಿಣಾಮಕಾರಿಯಾಗಿದ್ದ ಕಾಲವೊಂದಿತ್ತು. ಅದು ಅಂದು ಪ್ರಬಲವಾಗಿದ್ದ ಅಲಿಪ್ತ ರಾಷ್ಟ್ರಗಳ ಕೂಟ. ಅದು ನೂರೊಂದು ದೇಶಗಳ ಪ್ರಾತಿನಿಧ್ಯ ಹೊಂದಿದ್ದ ಸಂಘಟನೆಯಾಗಿತ್ತು. ಶೀತಲಯುದ್ಧದ ಅಂದಿನ ದಿನಗಳಲ್ಲಿ ಸಮಾಜವಾದಿ ಮತ್ತು ಸಾಮ್ರಾಜ್ಯಶಾಹಿ ಬಣಗಳ ನಡುವೆ ಅಲಿಪ್ತ ಚಳುವಳಿಯು ರಾಜಕೀಯದಲ್ಲಿ ಬಹುಮುಖ್ಯವಾದ ಪಾತ್ರ ನಿರ್ವಹಿಸಿತ್ತು. ಈಗ ಸ್ಥಿತಿ ಬದಲಾಗಿದೆ. ಪ್ರಾದೇಶಿಕ ಕೂಟಗಳಿಗೆ ಪ್ರಾಶಸ್ತ್ಯ ಬಂದಿದೆ. ಈಚಿನ ವರ್ಷಗಳಲ್ಲಿ ಅಂಥ ಒಂದು ವ್ಯವಸ್ಥೆ ರೂಪುಗೊಂಡಿದ್ದು ದಕ್ಷಿಣ ಅಮೇರಿಕಾ ಖಂಡದಲ್ಲಿ. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಬೇರೆ ಇತರ ಪ್ರಾದೇಶಿಕ ಸಂಘಟನೆಗಳಿದ್ದರೂ ಅವು ಹೆಚ್ಚಾಗಿ ಅಮೇರಿಕಾದ ಪ್ರಭಾವದಲ್ಲಿ ಇರುವಂಥ ಔಪಚಾರಿಕ ಸಂಸ್ಥೆಗಳು. ಆದರೆ ಅಮೇರಿಕದ ಗ್ಲೋಬಲೈಸೇಶನ್, ಲಿಬರಲೈಸೇಶನ್ ಮುಂತಾದವುಗಳನ್ನು ಎದುರಿಸಿ ಪ್ರಾದೇಶಿಕ ಸಹಕಾರಕ್ಕೆ ನಿಜವಾದ ಒತ್ತುಕೊಟ್ಟದ್ದು ದಕ್ಷಿಣ ಅಮೇರಿಕದ ದೇಶಗಳು. ಅದೇ ರೀತಿಯಲ್ಲಿ ಈಗ ಅಸ್ತಿತ್ವದಲ್ಲಿರುವುದು ಬ್ರಿಕ್ಸ್ ದೇಶಗಳು. ಪರಸ್ಪರ ಸಹಕಾರದಿಂದ ಫಲದಾಯಕ ಸಂಬಂಧಗಳನ್ನು ರೂಪಿಸಿ ಈ ದೇಶಗಳು ಬಹು ದೂರ ಸಾಗಬಹುದು. ದೆಹಲಿಯಲ್ಲಿ ಇರಿಸಿದ ಹೆಜ್ಜೆ ಇನ್ನೂ ನಾಲ್ಕನೆಯದು. ‘‘ಜಾಗತಿಕ ಭದ್ರತೆ, ಸುರಕ್ಷೆ ಮತ್ತು ಸಮೃದ್ಧಿಗಾಗಿ ಬ್ರಿಕ್ಸ್ ಸಹಭಾಗಿತ್ವ’’ ಇದು ಶೃಂಗಸಭೆಯ ಘೋಷ ವಾಕ್ಯ. ಈ ಕೂಟ ಅಸ್ತಿತ್ವಕ್ಕೆ ಬಂದದ್ದು ನ್ಯೂಯಾರ್ಕ್‌ನಲ್ಲಿ ೨೦೦೬ರಲ್ಲಿ ವಿಶ್ವಸಂಸ್ಥೆಯ ಸರ್ವಸದಸ್ಯರ ಸಭೆ ಜರುಗುತ್ತಿದ್ದ ಸಮಯದಲ್ಲಿ, ಆಗ ಬ್ರೆಜಿಲ್, ಇಂಡಿಯ, ಚೀಣಾ ಮತ್ತು ರಷ್ಯಾದ ವಿದೇಶಾಂಗ ಸಚಿವರುಗಳು ಸೇರಿ ಸಮಾಲೋಚನೆ ನಡೆಸಿ ಪರಸ್ಪರ ಸಹಕರಿಸಲು ತೀರ್ಮಾನಿಸಿದರು. ೨೦೧೧ರಲ್ಲಿ ದಕ್ಷಿಣ ಆಫ್ರಿಕಾ ಇದರಲ್ಲಿ ಸೇರಿಕೊಂಡಿತು. ಇನ್ನೂ ಶೈಶವಾವಸ್ಥೆಯಲ್ಲಿರುವ ಈ ಪ್ರಾದೇಶಿಕ ಸಮೂಹ ಇನ್ನೂ ಗಟ್ಟಿಗೊಳ್ಳಬೇಕಾಗಿದೆ ಸಂಘಟನಾತ್ಮಕವಾಗಿ. ಯಾವ ವಿಧವಾದ ನಿರ್ದಿಷ್ಟವಾದ ಸಂಘಟನಾ ಸ್ವರೂಪ, ಶಾಶ್ವತ ಕಛೇರಿ ಹೊಂದಿಲ್ಲದ ಈ ತಂಡ ಆಗಾಗ್ಗೆ ನಡೆಸುವ ಶೃಂಗಸಭೆಗಳೇ ಜೀವಾಳ. ದೆಹಲಿ ಸಭೆ ಎಲ್ಲ ರೀತಿಯಲ್ಲಿಯೂ ಮಹತ್ವದ್ದು ಮತ್ತು ಮುನ್ನಡೆ.

**ಸೀಯಾರ್ಕೆ**



ಐದು ರಾಷ್ಟ್ರಗಳ -ಬ್ರೆಜ್ಹಿಲ್, ರಷ್ಯಾ, ಇಂಡಿಯಾ, ಚೀಣಾ, ದಕ್ಷಿಣ ಆಫ್ರಿಕಾ - ಶೃಂಗಸಭೆ

## ಮಾನವ ಹಕ್ಕುಗಳ ಉಲ್ಲಂಘನೆ ಎಂಬುದರ ಹಿಂದೆ

ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಸಂಸ್ಥೆಯ ಛೀಮಾರಿಗೆ ಗುರಿಯಾಗಿರುವ ಇತ್ತೀಚಿನ ದೇಶ ಶ್ರೀಲಂಕಾ. ಪಾಶ್ಚಾತ್ಯ ದೇಶಗಳ ಜೊತೆಗೆ ಭಾರತವೂ ಈ ವಿಷಯದಲ್ಲಿ ಮೀನಾಮೇಷ ಎಣಿಸಿ ಕೈಜೋಡಿಸಿದೆ. ಇದು ಎಲ್ಲಿಗೆ ಒಯ್ದೀತು ಎಂಬುದನ್ನು ಮುಂದೆ ನೋಡೋಣ. ಎಲ್‌ಟಿಟಿಇ (ತಮಿಳು ಹುಲಿಗಳು)ಯ ಮೇಲೆ ಸಾಧಿಸಿದ ವಿಜಯದ ಸಮಯದಲ್ಲಿ ಶ್ರೀಲಂಕಾ ಸೇನೆ ನಡೆಸಿದ ಅತ್ಯಾಚಾರಗಳು, ಹಿಂಸಾಚಾರಗಳೇ ಮಾನವ ಹಕ್ಕುಗಳ ಛೀಮಾರಿಗೆ ಮೂಲ. ಸುಮಾರು ಇಪ್ಪತ್ತು ವರ್ಷಗಳ ಅಂತರ್ಯುದ್ಧದ ಕಾಲದಲ್ಲಿ ನಡೆದ ಹಿಂಸಾಚಾರಗಳೆಷ್ಟೋ. ಎರಡೂ ಕಡೆ ನಡೆದಿದೆ. ಆದರೆ ಯುದ್ಧದಲ್ಲಿ



***ಗ್ವಾಂಟನಾಮೋ ಕಾರಾಗಾರದಲ್ಲಿ ಅಮೆರಿಕದ ಸೇನೆ ನಡೆಸಿದ ದೌರ್ಜನ್ಯ***

ವಿಜಯಿಯಾದ ಸೇನೆ ಅತ್ಯಾಚಾರದಲ್ಲಿ ತೊಡಗುವುದು ಯಾವತ್ತೂ ನಡೆಯುವಂಥದ್ದು. ಇದು ಹಿಂದಿನಿಂದಲೂ ಬಂದದ್ದೆ, ಎಷ್ಟೇ ಹೀನವಾದ್ದಾಗಿದ್ದರೂ. ಮಾನವ ಹಕ್ಕುಗಳ ವಿಚಾರದಲ್ಲಿ ಅತಿ ಹೆಚ್ಚು ಬೊಬ್ಬೆ ಹಾಕುವುದು ಅಮೆರಿಕ. ಶೀತಲಯುದ್ಧದ ಕಾಲ ನೆನಪಿಸಿಕೊಂಡರೆ ಸೋವಿಯೆತ್ ಒಕ್ಕೂಟ ಮತ್ತು ಸಮಾಜವಾದಿ ದೇಶಗಳ ಮೇಲೆ ಮಾಡುತ್ತಿದ್ದ ಒಂದು ಆರೋಪ ಮಾನವ ಹಕ್ಕುಗಳ ಉಲ್ಲಂಘನ. ಅಮೆರಿಕ ಇತರ ದೇಶಗಳ ಮೇಲೆ ಆರೋಪ ಮಾಡುವುದರಲ್ಲಿ ಯಾವತ್ತೂ ಮುಂದು, ಆದರೆ ಅದು ತನ್ನ ಅತ್ಯಾಚಾರಗಳನ್ನು ಮಾತ್ರ ನೆನಪಿಸಿಕೊಳ್ಳುವುದಿಲ್ಲ. ಅಂತರ್ಯುದ್ಧದ ಕಾಲಕ್ಕೂ ಮುಂಚೆ, ಅಮೆರಿಕದ ಮೂಲ ನಿವಾಸಿಗಳ ಕಗ್ಗೊಲೆಗಳು ಮಾನವ ಹಕ್ಕುಗಳ ಉಲ್ಲಂಘನೆ ಅಲ್ಲವೆ ? ಹಾಗೆಯೇ ಅದು ಕಪ್ಪು ಜನರನ್ನು ನಡೆಸಿಕೊಂಡ ರೀತಿಯೂ ಅಷ್ಟೇ. ಕೇವಲ ಇತ್ತೀಚೆಗೆ ಅಮೆರಿಕ ಆಫ್ಘಾನಿಸ್ತಾನದಲ್ಲಿ, ಇರಾಕಿನಲ್ಲಿ ನಡೆಸಿರುವ ಅತ್ಯಾಚಾರಗಳು ಮಾನವ ಹಕ್ಕುಗಳ ಉಲ್ಲಂಘನೆ ಅಲ್ಲವೆ ? ಗ್ವಾಂಟನಾಮೋ ಕಾರಾಗಾರದಲ್ಲಿ ಅಮೆರಿಕದ ಸೇನೆ ನಡೆಸಿದ ದೌರ್ಜನ್ಯಗಳು ಇನ್ನೂ ನೆನಪಿನಲ್ಲಿ ಹಸಿರಾಗಿಯೇ ಇದೆ. ಹಾಗಿರುವಾಗ ಈಗ ಶ್ರೀಲಂಕಾದ ವಿಷಯದಲ್ಲಿ ತರಾತುರಿ ಏಕೆ ?

ಮಾನವ ಹಕ್ಕುಗಳನ್ನು ಉಲ್ಲಂಘಿಸದಿರುವ ದೇಶವೇ ಇಲ್ಲ. ಒಂದಲ್ಲ ಒಂದು ಸಂದರ್ಭದಲ್ಲಿ ಅಂಥ ಉಲ್ಲಂಘನೆ ಸಾಮಾನ್ಯ ಎನ್ನುವಂತಾಗಿದೆ. ಹಾಗೆ ನೋಡಿದರೆ ಮಾನವ ಹಕ್ಕುಗಳನ್ನು ಎತ್ತಿಹಿಡಿಯುವ ಏಕೈಕ ದೇಶ ತಾನು ಎಂದು ಕೊಚ್ಚಿಕೊಳ್ಳುವ ಅಮೆರಿಕ ನಡೆಸಿರುವಷ್ಟು ಹಿಂಸಾಚಾರವನ್ನು ಬೇರಾವ ದೇಶವೂ ಮೀರಿಸಲಾರದು. ಭಾರತ ಸಹಮತ ವ್ಯಕ್ತಪಡಿಸುವ ಬದಲು ತಟಸ್ಥವಾಗಿದ್ದಿದ್ದರೆ ಸಮರ್ಪಕ ವಾಗಿರುತ್ತಿತ್ತು. ಇದರ ಪರಿಣಾಮಗಳನ್ನು ಸರಿಯಾಗಿ ವಿವೇಚಿಸದೆ ವಿದೇಶಾಂಗ ಸಚಿವಾಲಯ ನಿರ್ಧಾರ ಕೈಗೊಂಡಿದೆ ಎನ್ನಬೇಕು. ಮಾನವ ಹಕ್ಕುಗಳ ಆಯೋಗದ ನಿರ್ಣಯದಿಂದ ಕ್ರುದ್ಧವಾಗಿರುವ ಶ್ರೀಲಂಕಾ ಈಗಾಗಲೆ ತಮಿಳುನಾಡಿನಲ್ಲಿರುವ ಕೂಡಂಕುಲಮ್ ಪರಮಾಣು ವಿದ್ಯುತ್ ಕೇಂದ್ರದಿಂದ ಒದಗಬಹುದಾದ ಆಪತ್ತಿನ ಬಗ್ಗೆ ಕ್ಯಾತೆ ತೆಗೆದಿದೆ. ಅಂತರರಾಷ್ಟ್ರೀಯ ಪರಮಾಣು ಆಯೋಗದ ಮುಂದೆ ತನ್ನ ತಕರಾರನ್ನು ಈ ಬಗ್ಗೆ ಮಂಡಿಸಲು ಅದು ಸಿದ್ಧವಾಗುತ್ತಿದೆ. ಭಾರತದ ಮಟ್ಟಿಗೆ ಮಾನವಹಕ್ಕುಗಳ ಉಲ್ಲಂಘನೆಯ ತೂಗು ಕತ್ತಿ ಇದ್ದೇ ಇದೆ. ಕಾಶ್ಮೀರ, ನಕ್ಸಲರು, ಆದಿವಾಸಿಗಳು, ವಿಚಾರಣಾಧೀನ ಖೈದಿಗಳು, ಎನ್‌ಕೌಂಟರುಗಳು, ಹೀಗೆ ನೂರಾರು ಆರೋಪಗಳಿವೆ. ಹಾಗಾಗಿ ಮಾನವಹಕ್ಕುಗಳ ಉಲ್ಲಂಘನೆಯಿಂದ ಯಾವ ದೇಶವೂ ಹೊರತಾಗಿಲ್ಲ. ಮಾನವಹಕ್ಕುಗಳ ರಕ್ಷಣೆ ಮಾನವೀಯತೆಯ ದೃಷ್ಟಿಯಿಂದ ಬಹುಮುಖ್ಯವಾದ್ದು. ಬದುಕುವ ಹಕ್ಕು ಮಾನವನ ಮೂಲಹಕ್ಕು. ಅದನ್ನು ಕಾಪಾಡಲು ಮಾನವಕುಲ ಒಂದು ಸೂಕ್ತ ವ್ಯವಸ್ಥೆ ರೂಪಿಸುವುದು ಅಗತ್ಯ. ಅದರ ಉಲ್ಲಂಘನೆಯ ವಿಚಾರದಲ್ಲಿ ಛೀಮಾರಿ ಹಾಕುವುದು ನೈತಿಕ ಸಂಸ್ಕಾರವೇ ಹೊರತು ಪರಿಹಾರವಲ್ಲ. ಅದು ನಡೆಯದಂತೆ ತಡೆಯುವುದುದೀಗ ಮುಖ್ಯ.


**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್

ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್

ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫


# ಒಂಟಿ – ಜೀವ




**ಬೋ**ಳಾಗಿ ಒಂಟಿಯಾಗಿದ್ದರೂ
ಬೇರಿದ್ದ ಜೀವ ನಾನು
ನೆಲದಾಳಕ್ಕೆ ಹೋಗಿ
ನೀರ ನೆಲೆಯ ಕಂಡುಹಿಡಿದು
ಸಾರ ಹೀರಿ, ತಂಪನೀಯಲು
ಮತ್ತೆ ಚಿಗುರಿ,
ಎಲೆ, ಕಾಯಿಗಳನೆಲ್ಲ ಹೊತ್ತು
ಹತ್ತು ಜೀವಿಗಳಿಗೆ ಉಣಬಡಿಸಿ,
ಸಂತಸದಿ ಹೊಯ್ದಾಡಬೇಕೆಂಬ
ಆಸೆ ಹೊಂದಿದ ಜೀವ ನನ್ನದು !

ಚಿವುಟಿದರೂ ಚಿಗುರುವೆ,
ಕಡಿದರೂ ಒಡಮೂಡುವೆ
ನಾಗರಿಕ ಕ್ರೂರತೆ ಹೆಚ್ಚಾಗಿ
ಕಡಿದರೂ, ರೆಂಟೆ-ಕುಂಟೆಯಾಗಿಯೋ,
ಬಾಗಿಲು-ಕಿಟಕಿಯಾಗಿಯೋ, ಕೊನೆಗೆ
ಬಡವರ ಒಲೆಯ ಉರವಲಾಗಿಯೋ,
ರೈತ-ನಾಗರಿಕ, ಶಿಕ್ಷಿತ-ಅಶಿಕ್ಷಿತರಿಗೆಲ್ಲ
ಸಮನಾಗಿ ಸದುಪಯೋಗವಾಗಬೇಕೆಂಬ
ಆಸೆ ಹೊಂದಿದ ಜೀವ ನನ್ನದು !

ತಾಯಿ ಬೇರಿನ ಜೊತೆ
ಹಲವು ಉಪ ಬೇರಿನೊಂದಿಗೆ
ಗಟ್ಟಿಯಾಗಿ ನೆಲದಲ್ಲಿ ಊರಿದ್ದರೂ
ಕಾಲಮಿತಿಯ ಅರಿವುಂಟು
ಹೊಸ ಬೀಜ ಮೊಳಕೆ ಒಡೆದು,
ಬೇರು ಬಿಟ್ಟು ಚಿಗುರಲಿದೆ
ಎಂಬ ವಿವೇಕದಿಂದ, ಅದು
ಬೆಳೆಯಲೆಂಬ ಆಸೆ ಹೊಂದಿದ ಜೀವ ನನ್ನದು !

ಹೊಸ ಹುಟ್ಟಿಗೆ ಅವಕಾಶ ಕೊಟ್ಟು
ಸಮಚಿತ್ತದಲಿ ಅಡಿಯಿಂದ -
ಮುಡಿಯವರೆಗೆ ಒಣಗಿ
ನಿರಾಳವಾಗಿ ಬಯಲಲ್ಲಿ ನಿಂತ
ನಿರ್ಭೀತ ನಿರಾತಂಕ ನಿರ್ಲಿಪ್ತತೆ
ಹೊಂದಿದ ಜೀವ ನಾನು.


**ಸುಹಾಸ ಅ. ದೇಶಪಾಂಡೆ**

ನಂ. ೪೫, ೬ನೇ ಮುಖ್ಯರಸ್ತೆ, ಕೆಎಸ್‌ಆರ್‌ಟಿಸಿ ಲೇಔಟ್

ಬೆಂಗಳೂರು - ೫೬೦ ೦೬೧

**ಧನಂಜಯ ದಿಡಗ**




ಕಾಂಪಣ್ಣನಿಗೀಗ ೫೦ ವರ್ಷ. ಊರೂ ಕೂಡ ಬದಲಾಗಿ ಹೋಗಿತ್ತು. ಕಾಂಪಣ್ಣನ ಬಗೆಗಿದ್ದ ಭಯ ಬೀಭತ್ಸ ಸ್ಥಿತಿ ತಲುಪಿತ್ತು. ಕಾಂಪಣ್ಣನೂ ನಿಶಾಚರಿಯಂತೆ ರಾತ್ರಿ ಮಾತ್ರ ಅಡ್ಡಾಡುತ್ತಾ ಎದುರು ಮಾತಾಡಿದವರ ಕೈಕಾಲು ಮುರಿಯುತ್ತಾ , ಅವರಿವರ ತೋಟದಲ್ಲಿ ತೆಂಗಿನಕಾಯಿ, ಕುರಿ, ಎಮ್ಮೆಗಳನ್ನು ಕದ್ದು ಮಾರಿ ಹೊಟ್ಟೆ ಹೊರೆಯುತ್ತಿದ್ದ. ಪಂಚಾಯತಿಯ ಛೇರ್ಮನ್ ಕೃಷ್ಣಪ್ಪಣ್ಣ ಕಾಂಪಣ್ಣನ ಹಿತಚಿಂತಕನಾಗಿದ್ದವನು. ಕಾಂಪಣ್ಣನ ಪುಂಡಾಟದ ಸುದ್ದಿ ಪೋಲೀಸರಿಗೆ ಗೊತ್ತಾದರೆ, ಆ ವಿಷಯವನ್ನು ತೀರ್ಮಾನ-ರಾಜಿ ಪಂಚಾಯತಿ ಮಾಡಿ ಬರಖಾಸ್ತು ಮಾಡುತ್ತಿದ್ದವನು ಈ ಕೃಷ್ಣಪ್ಪನೇ.

೧

ಹುಚ್ಚು ಹಿಡಿದಿದೆ ಎಂದು ಊರವರೆಲ್ಲ ಮಾತಾಡಿಕೊಳ್ಳುತ್ತಿರುವ ಹೊತ್ತಿನಲ್ಲಿ ಖೂನಿ ಪರಮಣ್ಣನ ಮಗ ಕಾಂಪಣ್ಣನ ಜಬರ್ದಸ್ತಿಕೆ, ಜೋರು-ಜರ್ಬುಗಳೆಲ್ಲ ನಗೆಪಾಟಲಿಗೀಡಾಗಿ ಇತಿಹಾಸವಾಗಿ ಹೋಗಿದ್ದವು. ಅವನ ಕಣ್ಣಿನ ಕ್ರೂರತೆ, ಮುಖದ ಬಿಗುಪು, ಕುಣಿಕೆ ಹಾಕಿಕೊಂಡಂತಿರುತ್ತಿದ್ದ ಹುಬ್ಬುಗಳು, ಮುಂದೊತ್ತಿದ ಎದೆ, ಗಂಭೀರದ ನಡಿಗೆಗಳ್ಯಾವುವೂ ಇಲ್ಲದೆ ಸಾದಾ ಸೀದಾ ಮಾಮೂಲಿ ಮನುಷ್ಯನಾಗುತ್ತಿರಬೇಕಾದ ಹೊತ್ತಿನಲ್ಲೇ, ಅವನ ತಲೆಗೆ ಹುಚ್ಚನ್ನು ಆರೋಪಿಸಿ ನಗುತ್ತಿದ್ದ ಜನರು ಅವನ ಮಾಮೂಲಿತನವನ್ನು ಒಪ್ಪಿಕೊಳ್ಳಲಾಗದೆ ಒದ್ದಾಡುತ್ತಿದ್ದರು. ಬದುಕಿದ್ದಾಗಲೇ ಇತಿಹಾಸವಾಗಿಹೋಗಿದ್ದ ಅವರಪ್ಪನ ಖೂನಿ ದಂತಕತೆಗಳ ರಮ್ಯಲೋಕದಿಂದ ಅವನ ಮಗ ಕಾಂಪಣ್ಣನನ್ನು ಹೊರಕ್ಕೊಗೆದು ಅವನನ್ನು ಮಾಮೂಲಿ ಮನುಷ್ಯನನ್ನಾಗಿ ನೋಡಲು ಯಾರೂ ತಯಾರಿರಲಿಲ್ಲ, ಅವನ ಹೆಸರಿಗಂಟಿಕೊಂಡಿದ್ದ 'ಖೂನಿ'ಯನ್ನು ಬಿಟ್ಟು ಅವನ ಹೆಸರಿಗೊಂದು ಅಸ್ತಿತ್ವವೇ ಇಲ್ಲದಂತಾಗಿತ್ತು.

ಇವರಜ್ಜ ಮೈಸೂರು ಸಂಸ್ಥಾನದಲ್ಲೆಲ್ಲೋ ಮುಖ್ಯ ಖೂನಿಗಾರನಾಗಿದ್ದನಂತೆ. ಅರಸೊತ್ತಿಗೆ ಹೇಳಿದ ಯಾರನ್ನೇ ಆಗಲಿ ನಿರ್ಭಿಡೆಯಿಂದ ಕೊಂದು ಅವರ ತಲೆಯ ಸಮೇತ ಬಂದು ನಿಂತ ಕೂಡಲೇ ಸ್ವತಃ ಮಹರಾಜರ ಕೈಯಿಂದಲೇ ಆ ತಲೆಗೆ ಇನಾಮಾಗಿ ಒಂದು ಚಿನ್ನದ ಪದಕ ಇವನ ಕುತ್ತಿಗೆಗೇರುತ್ತಿತ್ತಂತೆ. ಅದೆಷ್ಟೋ ಪಾಳೇಗಾರರನ್ನು, ಅರಸೊತ್ತಿಗೆಗೆ ವಿರುದ್ಧವಾಗಿ ಮಸಲತ್ತು ಮಾಡುತ್ತಿದ್ದವರನ್ನು ಹಿಡಿದು ಕೊಂದು ತಲೆ ತಂದೊಪ್ಪಿಸಿ ಸ್ವತಃ ಮಹಾರಾಜರಿಂದಲೇ ಶಹಬಾಷ್‌ಗಿರಿ ಪಡೆದ ಇವರಪ್ಪನದೊಂದು ಆಸೆ, ತಾನು ನೂರು ಖೂನಿಗಳನ್ನು ಮಾಡಿ ಸಾಧನೆ ಮಾಡಬೇಕು, ಅದಕ್ಕಾಗಿ ತನ್ನ ಹೆಸರು ಆಚಂದ್ರಾರ್ಕವಾಗಬೇಕು ಎಂದು. ಕೊನೆಯವರೆಗೂ ಖೂನಿ ತನ್ನ ಧರ್ಮವೆಂದೇ ನಂಬಿಕೊಂಡು ಮಾಡುತ್ತಾ ಬಂದಿದ್ದ ಅಪ್ಪನನ್ನು ಸಾಯುವ ಕಡೇ ಗಳಿಗೆಯಲ್ಲೂ ಕಾಡಿದ್ದು, ತನ್ನ ಕೈಯಲ್ಲಿ ನೂರು ಖೂನಿಗಳನ್ನು ಮಾಡಲಾಗಲಿಲ್ಲವಲ್ಲಾ ಎಂದು. ಸಾಯುವ ಕಡೇ ಗಳಿಗೆಯಲ್ಲಿ ತನಗೆ ಬಹುಮಾನವಾಗಿ ಬಂದಿದ್ದ ತೊಂಬತ್ತು ಚಿನ್ನದ ಪದಕಗಳನ್ನು ಅಭಿಮಾನದಿಂದ ತನ್ನ ಎದೆಗೊತ್ತಿಕೊಂಡು, ಕಾಂಪಣ್ಣನನ್ನು ಹತ್ತಿರ ಕೂರಿಸಿಕೊಂಡು ಅವನ ಕಿವಿಯಲ್ಲಿ ಪಿಸುಗುಟ್ಟಿದನಂತೆ, ''ಕೊಲ್ಲೋದು ಕಷ್ಟಾ ಮಗಾ, ಕೊಂದು ಗೆದ್ದು, ರಾಜನಂಗೆ ಬಾಳೋ ತಾಕತ್ತು ಯಾರಿಗೂ ಬರೋದಿಲ್ಲಾ... ನನ್ನ ತೊಂಬತ್ತು ವರ್ಷದ ಆಯಸ್ಸಿನಲ್ಲಿ ತೊಂಬತ್ತು ಖೂನಿ ಮಾಡಿ 'ಖೂನಿ ಪರಮಣ್ಣ' ಅಂತ ಮಹರಾಜರಿಂದಲೇ ಬಿರುದು ತಗಂಡವನು ನಾನು... ಈಗ ನಾನು ಸಾಯೋ ವಯಸ್ಸಿನಲ್ಲಿ ನಿನಗೆ ಆ ಹೆಸರನ್ನಷ್ಟೇ ಬಿಟ್ಟು ಹೋಗ್ತಾ ಇದ್ದೀನಿ. ನಾನು ಸತ್ತ ಮೇಲೆ ನನ್ನ ಈ ತೊಂಬತ್ತು ಪದಕಗಳು ಈ ಗೋಡೆಯಮೇಲೆ ಫಳ ಫಳ ಹೊಳೀತಿರ್ಬೇಕು ಮಗಾ. ನನ್ನ ಪಟ್ಟಕ್ಕೆ ನೀನೇ ಉತ್ತರಾಧಿಕಾರಿ. ಬಾಳಿದ್ರೆ ನನ್ನ ಹಾಗೇ ಬಾಳು ನೀನು. ಯಾರಿಗೂ ಬಾಗೋಕೆ ಹೋಗಬೇಡ ಕಂದಾ...'' ಎಂದು ಹೇಳಿ ಪ್ರಾಣ ಬಿಟ್ಟನಂತೆ.

ಅಂದಿನಿಂದ ಕಾಂಪಣ್ಣ ಖೂನಿ ಪರಮಣ್ಣನ ಉತ್ತರಾಧಿಕಾರಿಯಾಗಿ ಆ ಊರಿನಲ್ಲಿ ಆಡಳಿತ ಶುರುಮಾಡಿದ್ದು. ಆ ಊರಿನ ಜನರಿಗೆ ಹೊಸ ಉತ್ತರಾಧಿಕಾರಿ ಬಂದದ್ದಕ್ಕೆ ಸಂಭ್ರಮವಲ್ಲದ್ದೊಂದು ಸಂಭ್ರಮ. ತಿಂಗಳೊಳಗೇ ಹತ್ತಾರು ಮೂಟೆ ದವಸ ಧಾನ್ಯಗಳು, ಕೋಳಿ ಕುರಿಗಳು, ಕಾಂಪಣ್ಣನ ಸೇವೆಗೆ ಮೀಸಲಾಗಿ ಅವನ ಮನೆಯ ಮುಂದೆ ಬಂದು ಬಿದ್ದವು. ಕಾಂಪಣ್ಣನಿಗೆ ಅಚ್ಚರಿ ! ಜನ ಹೆದರುವುದು ಯಾರಿಗೆ ? ಹೆದರಿದವರನ್ನೇ ಆಧರಿಸುವುದು ಯಾತಕ್ಕಾಗಿ ? ಖೂನಿಯ ರಮ್ಯತೆಗೆ, ಅದರ ರೋಮಾಂಚನಕ್ಕೆ, ಸಾಮಾನ್ಯನ ಎದೆಯೊಳಗೂ ಒಂದು ಪೈಶುನ್ಯತೆ ಹೆಡೆಯೆತ್ತಿ ಕಾದಿರುತ್ತದೆಯೋ.. ಮಕ್ಕಳಿಗೆ ರಾತ್ರಿ ಬೆಳದಿಂಗಳಿನಲ್ಲಿ ಹೇಳುವ ಖೂನಿ ಕತೆಗಳ ಸ್ವಾರಸ್ಯದಲ್ಲಿ ಬಿದ್ದು, ಖೂನಿಗಾರರನ್ನು ಅತಿಮಾನುಷನನ್ನಾಗಿ ಮಾಡುವ ಖುಷಿಯ

ಉದ್ದೀಪ್ತಿಗೆ ಜನ ಬಿದ್ದುಹೋಗಿದ್ದಾರೆಯೇ? ಕಾಂಪಣ್ಣನ ಬದುಕು ಸುಲಭ ಎನಿಸಿತು. ಇವನು ಬೀದಿಗೆ ಕಾಲಿಟ್ಟೊಡನೆ, ಜನ ಹೆದರುತ್ತಿದ್ದರು. ಇವನಿಗೆ ಖುಷಿಯಾಗುತ್ತಿತ್ತು. ಕೆಲವರು ಕೈ ಮುಗಿಯುತ್ತಿದ್ದರು. ಶುರುವಿಗೆ ಅವರ ಹೆದರಿಕೆಯ ಸತ್ಯಾಸತ್ಯತೆಯನ್ನು ಗುರುತಿಸಲು ಕಾಂಪಣ್ಣ ಪ್ರಯತ್ನಿಸುತ್ತಿದ್ದ, ಅವರು ನಿಜವಾಗಿಯೂ ಹೆದರುತ್ತಿದ್ದಾರೋ ಅಥವಾ ಹೆದರಿದಂತೆ ನಟಿಸುತ್ತಿದ್ದಾರೋ ಎಂದು. ನನಗೇ ಹೆದರುತ್ತಿದ್ದಾರೋ... ನನ್ನ ಹೆಸರಿನ ಹಿಂದಿರುವ ಖೂನಿಗೆ ಹೆದರುತ್ತಿದ್ದಾರೋ ಎಂದು ಯೋಚಿಸುತ್ತಿದ್ದ. ಅಂತೂ ಜನ ಯಾಕೋ ಹೆದರುತ್ತಿದ್ದರು. ಆ ಹೆದರಿಕೆಯನ್ನೇ ಅವರು ಚೆಂದವಾಗಿ ಆಸ್ವಾದಿಸುತ್ತಿದ್ದುದು ಕಾಣುತ್ತಿತ್ತು. ಹೆದರಿಕೆಯೂ ಸಂತೋಷದಂತೆ ಒಂದು ಉದ್ದೀಪನದ ಮದ್ದೇ.

ರಾತ್ರಿ ಬೆಳದಿಂಗಳಿನಲ್ಲಿ ಕಂಕುಳಲ್ಲಿ ಮಗುವನ್ನು ಇರುಕಿಕೊಂಡು ಮಗುವಿನ ಬಾಯಿಗೆ ತುತ್ತು ಗಿಡುಗುತ್ತಿದ್ದ ಅಮ್ಮಂದಿರ್ಯಾರೂ ಚಂದ್ರನನ್ನು ತೋರಿಸದೆ, ''ಮಗಾ... ಖೂನಿ ಕಾಂಪಣ್ಣ ಬರ್‍ತಾನೆ, ಉಣ್ಣು ಮಗಾ... ಇದೊಂದೇ ತುತ್ತು... ಖೂನಿ ಕಾಂಪಣ್ಣ ಬಂದು ಗೋಣೀ ಚೀಲಕ್ಕೆ ತುಂಬಿಕೊಂಡು ಹೋಗ್ತಾನೆ ನೋಡೂ...'' ಎನ್ನುತ್ತಿದ್ದರು. ಅದನ್ನು ಹೇಳುವಾಗ ಸ್ವತಃ ಖೂನಿಯನ್ನು ಕಣ್ಣಾರೆ ಕಂಡಂತೆಯೂ, ದೊಡ್ಡದಾಗಿ ಕಣ್ಣರಳಿಸಿಕೊಂಡು ಏದುಸಿರುಬಿಡುತ್ತಾ ಹೇಳುತ್ತಿದ್ದರೆ ಮಗು ಹೆದರಿದಂತೆ, ಅಮ್ಮ ಗಿಡುಗಿದ ಅಷ್ಟೂ ತುತ್ತನ್ನು ಬಾಯಲ್ಲಿ ತುಂಬಿಕೊಂಡು ಕಣ್ಣರಳಿಸುತ್ತಿತ್ತು. ಇನ್ನು ರಾತ್ರಿ ಕಳ್ಳರು ಯಾರೂ ಕಾಂಪಣ್ಣನ ಭಯದಿಂದ ಊರಿನ ಕಡೆ ತಲೆ ಹಾಕುತ್ತಿರಲಿಲ್ಲ. ನಿದ್ರೆಬಾರದ ಬೊಚ್ಚು ಬಾಯಿಯ ಮುದುಕರು, ಕಫ ಕ್ಯಾಕರಿಸಲೋ, ಒಂದಾ ಮಾಡಲೋ ಎದ್ದು ಹೊರಗೆ ಹೋದಾಗ, ಗಂಡುಗೊಡಲಿ ಹಿಡಿದು ಊರನ್ನು ಕಾವಲು ಕಾಯುತ್ತಿದ್ದ ಕಾಂಪಣ್ಣನನ್ನು ಕಂಡದ್ದಾಗಿಯೂ, ಅವನು ರಾತ್ರಿ ಪೂರ ನಿದ್ದೆ ಮಾಡದೆ ಊರನ್ನು ಕಾಯುತ್ತಾನೆಂದು, ಬೆಳಗೆದ್ದಾಗ ಅರಳಿ ಕಟ್ಟೆಯ ಮೇಲೆ ಸ್ವಾರಸ್ಯವಾಗಿ ಬಣ್ಣಿಸಿ ಹೇಳುತ್ತಿದ್ದಾಗ ಎಲ್ಲರೂ ಕಣ್ಣರಳಿಸಿಕೊಂಡು ಕೇಳುತ್ತಾ ಮೈಮರೆಯುತ್ತಿದ್ದ ವಿಷಯ ಸಾಮಾನ್ಯವಾಗಿತ್ತು. ಆದರೆ ಕಾಂಪಣ್ಣ ಮನೆಯಲ್ಲಿ ಸೊಗಸಾಗಿ ನಿದ್ರೆ ಹೊಡೆದು ಎದ್ದಿರುತ್ತಿದ್ದ. ಏನನ್ನೋ ಮಾಡಿಕೊಂಡು ತಿಂದು, ಹೊರಗೆ ಹೊರಡುತ್ತಿದ್ದ. ಎಲ್ಲರ ಕೈ ಮುಗಿಯುವಿಕೆ, ಹೆದರಿಕೆಯನ್ನು ಸ್ವೀಕರಿಸಿದ ನಂತರ ಮತ್ತೆ ಮನೆಗೆ ಬರುತ್ತಿದ್ದ. ಮನೆಯಲ್ಲಿ ಅವನಪ್ಪನ ಚಿನ್ನದ ಪದಕಗಳು ಫಳ ಫಳ ಹೊಳೆದಂತೆ ಭಾಸವಾಗುತ್ತಿದ್ದವು. ಈ ಕೆಲಸ ಕಾಂಪಣ್ಣನಿಗೆ ಖುಷಿ ಕೊಡುತ್ತಿತ್ತು. ಬದುಕು ಸುಲಭ ಎನ್ನಿಸುತ್ತಿತ್ತು. ಆ ತೆರನಾದ ಬಯಸದೇ ಬರುತ್ತಿದ್ದ ಮರ್ಯಾದೆ-ಸನ್ಮಾನಗಳಿಂದ ಕಾಂಪಣ್ಣ ಹುರುಪಿತನಾಗುತ್ತಿದ್ದ. ಅವನಪ್ಪನ ಬಗ್ಗೆ ಹೆಮ್ಮೆ ಎನಿಸುತ್ತಿತ್ತು. ರಾತ್ರಿ ತಾಲ್ಲೂಕು ಪೊಲೀಸ್ ಠಾಣೆಯಿಂದ ಪೊಲೀಸಿನವರು ಬಂದು ಮಾತಾಡಿ, ''ತಾವು ಈ ಊರಲ್ಲಿರೋದ್ರಿಂದಲೇ ಇಲ್ಲಿ ಕಳ್ಳತನ, ಅಪರಾಧಗಳು ನಡಿತಾ ಇಲ್ಲ, ನಿಮ್ಮಿಂದಾಗಿ ಈ ಊರಿಗೆ ತುಂಬ ಉಪಯೋಗವಾಗ್ತಿದೆ, ನಿಮ್ಮೂರು ನಮ್ಮ ಲಿಸ್ಟ್‌ನಲ್ಲಿ ಇನ್ನೂ ಗ್ರೀನ್ ಮಾರ್ಕಿನಲ್ಲೇ ಇದೆ. ನಿಮ್ಮ ಅಪ್ಪಾವರ ಕಾಲದಿಂದಲೂ ಹೌದು'' ಎಂದು ಶಹಬಾಷ್‌ಗಿರಿ ಕೊಟ್ಟು ಹೋಗುತ್ತಿದ್ದರು.

ಸ್ವಲ್ಪ ಸಮಯದಲ್ಲೇ ಇದು ಕಾಂಪಣ್ಣನಿಗೆ ಬೇಸರವಾಗತೊಡಗಿತು. ಈ ತರಹದ ಮರ್ಯಾದೆ, ಭಯಗಳು ಸಾಕು ಎನ್ನಿಸತೊಡಗಿದವು. ಇವನಿಗೆ ಕೈಮುಗಿಯುತ್ತಿದ್ದ ಜನ ಇವನನ್ನ ಕಂಡರೆ ಹೆದರುತ್ತಿದ್ದರು, ನಿಜ. ಆದರೆ ಎಂದೂ ಆಪ್ತವಾಗಿ ಮಾತಾಡುತ್ತಿರಲಿಲ್ಲ. ಖೂನಿಗಾರನ ಜೊತೆ ಯಾಕಾದರೂ ಮಾತಾಡುತ್ತಾರೆ? ತಂದೆಯಂತೆಯೇ ಇವನದೂ ಭಯಂಕರ ರೂಪವೇ... ಹೆದರಿಕೆ ಹುಟ್ಟಿಸುವಂಥದ್ದು. ಸಣ್ಣ ಮಕ್ಕಳಂತೂ ಇವನನ್ನು ಕಂಡರೆ ಹೆದರಿ ನಡುಗುತ್ತಿದ್ದರು. ಇವನಿಗೋ ಎಲ್ಲರ ಜೊತೆ ಮಾತಾಡಬೇಕೆನ್ನಿಸುತ್ತಿತ್ತು. ಆದರೆ ಇವನು ಯಾರೊಡನೆಯಾದರೂ ಮಾತಾಡಬೇಕೆಂದು ಆಸೆ ಹುಟ್ಟಿದೊಡನೆಯೇ ಜನಗಳು ಏನು ಗತಿ ಕಾದಿದೆಯೋ ಎಂದು ಹೆದರಿ ಮಾಯವಾಗಿಬಿಡುತ್ತಿದ್ದರು. ಮದುವೆಯಾಗಬೇಕೆಂಬ ಬಯಕೆಯೂ ಹುಟ್ಟಿ ಏನು ಮಾಡಬೇಕೆಂದು ಗೊತ್ತಾಗದೆ ತೊಳಲಾಡುತ್ತಿದ್ದ. ದಿನವೂ ತಾನೇ ಬೇಯಿಸಿಕೊಂಡು ತಿನ್ನುವುದು ಸಾಕಾದಂತೆನಿಸುತ್ತಿತ್ತು. ಅಪ್ಪನ ಈ ಕಸುಬಿನ ಬಗ್ಗೆ ಅಸಹ್ಯವೂ ಒಂದು ರೀತಿಯ ಪರಿತಾಪವೂ ಹುಟ್ಟಿ ಅವನನ್ನು ಒಳಗೊಳಗೇ ಬೇಯಿಸತೊಡಗಿತ್ತು. ಒಂದು ತರಹ ಮೂಕನಂತಾಗಿಬಿಟ್ಟ ಕಾಂಪಣ್ಣ. ಬೀದಿಯಲ್ಲಿ ನಡೆದು ಹೋಗುವಾಗ ಬಲವಂತದ ಗಂಭೀರತೆಯಲ್ಲಿ, ಹೆಜ್ಜೆಯನ್ನು ದಾಪಿಡುತ್ತಾ, ಕಣ್ಣನ್ನು ಕ್ರೂರವಾಗಿಸಿಕೊಂಡು ನಡೆಯತೊಡಗಿದ. ಯಾರಾದರೂ ಹೆಂಗಸು ಕಂಡೊಡನೆ ಎದೆಯ ರಕ್ತವೆಲ್ಲಾ ಸೀದುಹೋದಂತಾಗಿ ಉಸಿರು ಬಿಸಿಯಾಗುತ್ತಿತ್ತು. ಕಣ್ಣರಳಿಸಿ ನೋಡುತ್ತಲೇ ಆ ಹೆಂಗಸು ಸೆರಗು ಮರೆಮಾಡಿಕೊಂಡು ಹೋಗಿಬಿಡುತ್ತಿದ್ದಳು. ಆಗ ಭಯಂಕರವಾದ ಯಾತನೆಯಲ್ಲಿ ಬೇಯುತ್ತಿದ್ದ. ತಾನು ನಮ್ಮಪ್ಪನ ಮಗನಾಗಿ ಹುಟ್ಟಬಾರದಿತ್ತೆನಿಸುತ್ತಿತ್ತು. ಇದೇ ನೋವು ಯಾತನೆಯಾಗಿ, ಯಾತನೆ ರೋಗವಾಗಿ, ರೋಗ ಕ್ರೂರತೆಯಲ್ಲಿ ಪರ್ಯಾವಸಾನವಾಗತೊಡಗಿದಾಗ, ಆ ಊರಿನಲ್ಲಿ ಮೊಟ್ಟಮೊದಲ ಅವಘಡ ನಡೆದುಹೋಯಿತು. ಬೆಳಗೆದ್ದಾಗ ಕಬ್ಬಿನ ಗದ್ದೆಯ ತಡಿಯಲ್ಲಿ ಹೆಂಗಸೊಬ್ಬಳು ಅತ್ಯಾಚಾರಕ್ಕೊಳಗಾಗಿ ಸಾವು ಬದುಕಿನ ಮಧ್ಯೆ ಬಿದ್ದು ನರಳಾಡುತ್ತಿದ್ದಳು. ಸುದ್ದಿಯೂ ಪೊಲೀಸರ ತನಕ ಹೋಗದೆ ನಿಶ್ಶಬ್ದವಾಯಿತು. ಅಂದಿನವರೆಗೂ ರಮ್ಯಾದ್ಭುತ ವ್ಯಕ್ತಿಯಾಗಿದ್ದ ಕಾಂಪಣ್ಣ ಇದ್ದಕ್ಕಿದ್ದಂತೆ ರಾಕ್ಷಸನಾಗಿ ಹೋಗಿದ್ದ. ಭಯವನ್ನು ಆಸ್ವಾದಿಸುತ್ತಾ ಸಂತೋಷಪಡುತ್ತಿದ್ದ ಜನರು ವಿಚಿತ್ರವಾದ ಸಂಕಟದಲ್ಲಿ ತೊಳಲಾಡಲಾರಂಭಿಸಿದರು.

೨

ಕಾಂಪಣ್ಣನಿಗೀಗ ೫೦ ವರ್ಷ. ಊರೂ ಕೂಡ ಬದಲಾಗಿ ಹೋಗಿತ್ತು. ಕಾಂಪಣ್ಣನ ಬಗೆಗಿದ್ದ ಭಯ ಬೀಭತ್ಸ ಸ್ಥಿತಿ ತಲುಪಿತ್ತು. ಕಾಂಪಣ್ಣನೂ ನಿಶಾಚರಿಯಂತೆ ರಾತ್ರಿ ಮಾತ್ರ ಅಡ್ಡಾಡುತ್ತಾ ಎದುರು ಮಾತಾಡಿದವರ ಕೈಕಾಲು ಮುರಿಯುತ್ತಾ, ಅವರಿವರ ತೋಟದಲ್ಲಿ ತೆಂಗಿನಕಾಯಿ, ಕುರಿ, ಎಮ್ಮೆಗಳನ್ನು ಕದ್ದು ಮಾರಿ ಹೊಟ್ಟೆ ಹೊರೆಯುತ್ತಿದ್ದ. ಪಂಚಾಯತಿಯ ಛೇರ್ಮನ್ ಕೃಷ್ಣಪ್ಪಣ್ಣ ಕಾಂಪಣ್ಣನ ಹಿತಚಿಂತಕನಾಗಿದ್ದವನು. ಕಾಂಪಣ್ಣನ ಪುಂಡಾಟದ ಸುದ್ದಿ ಪೊಲೀಸರಿಗೆ ಗೊತ್ತಾದರೆ, ಆ ವಿಷಯವನ್ನು ತೀರ್ಮಾನ-ರಾಜಿ ಪಂಚಾಯತಿ ಮಾಡಿ ಬರಖಾಸ್ತು ಮಾಡುತ್ತಿದ್ದವನು ಈ ಕೃಷ್ಣಪ್ಪನೇ. ಛಳಿಯಾದಾಗೊಮ್ಮೆ ಕಾಂಪಣ್ಣನನ್ನು ಬರಹೇಳಿ ಏನಾದರೂ ವ್ಯವಸ್ಥೆ ಮಾಡಬೇಕೆಂದು ಕೇಳುತ್ತಿದ್ದ ಕೃಷ್ಣಪ್ಪ ಮಾರ್ವಾಡರ ಲಕುಮಿಯನ್ನು ಕರೆತರಲು ಹೇಳುತ್ತಿದ್ದ. ಒಂದು ದಿನ ಕಾಂಪಣ್ಣ ಮಾರ್ವಾಡರ ಲಕುಮಿ ಸಿಗಲಿಲ್ಲವಾಗಿ ಕೆರೆಬದಿಗೆ ಹೊಂಟಿದ್ದ ಯಾವುದೋ ಒಂದು ಹೆಂಗಸನ್ನು ಹಿಡಿದು ಗೋಣೀಚೀಲಕ್ಕೆ ತುಂಬಿ ಕೃಷ್ಣಪ್ಪನ ಮುಂದೆ ತಂದು ಒಗೆದು ಬೀಡಿ ಸೇದುತ್ತಾ ನಿಂತಿದ್ದ. ಕೃಷ್ಣಪ್ಪ ಆತುರಾತುರವಾಗಿ ಗೋಣೀಚೀಲವನ್ನು ಬಿಚ್ಚಿದಾಗ ದಿಗ್ಗನೆ ಎದ್ದು ನಿಂತ ಸ್ವತಃ ಕೃಷ್ಣಪ್ಪನ ಹೆಂಡತಿಯೇ ಆದ ಶಾಂತವ್ವ ಕೃಷ್ಣಪ್ಪನ ಮುಖಕ್ಕೇ ಬಡಿದು ಹಲ್ಲುದುರಿಸಿದಳು. ನಿಧಾನವಾಗಿ ಜಾಗ ಖಾಲಿ ಮಾಡಿ ದಾಸಣ್ಣನ ಹೊಟೇಲಿನಲ್ಲಿ ಗೋಟೀ ಸಾರು ಉಂಡು ಮನೆಗೆ ಹೋಗಿ ಮಲಗಿಕೊಂಡ ಕಾಂಪಣ್ಣ.

ಇಂತಹ ಕಾಂಪಣ್ಣನಿಗೆ ಊರಿನ ಜನರೆಲ್ಲ ಹುಚ್ಚು ಹಿಡಿದಿದೆ ಎಂದು ಹೇಳುವುದಕ್ಕೆ ಕಾರಣವಾದರೂ ಏನು? ಸುದ್ದಿಯ ಉಗಮವಾದದ್ದು ದಾಸಣ್ಣನ ಹೊಟೇಲಿನಲ್ಲೇ. ಅಲ್ಲಿ ಕೆಲಸವಿಲ್ಲದೆ ಕುಳಿತಿರುತ್ತಿದ್ದ ಮುದಿಯರೆಲ್ಲ ದಾಸಣ್ಣ ಮಾಡುತ್ತಿದ್ದ ರುಚಿಕಟ್ಟಾದ ಕಡ್ಲೇಬೇಳೆ ವಡೆಯನ್ನೂ, ಟೀಯನ್ನೂ ಕೈಯಲ್ಲಿ ಹಿಡಿದು ಮಾತು ಶುರು ಮಾಡಿದರು. ''ಲೇ, ಕಾಂಪಣ್ಣನಿಗೆ ಕ್ರಾಕು ಹಿಡ್ದಿದೆ ಕಣ್ರೋ'' ಅಂತಾ ಒಬ್ಬನೆಂದರೆ, ''ಅಂತಾ ಖೂನಿ ಪರಮಣ್ಣನ ಹೊಟ್ಟೇಲಿ ಇಂತಾ ಮಗಾ ಹುಟ್ಬಾರ್‍ದಿತ್ತು ಕಣ್ರೋ...'' ಎಂದು ಮತ್ತೊಬ್ಬನೆನ್ನುತ್ತಿದ್ದ. ಮುದಿಯನೊಬ್ಬ, ''ಕಾಂಪಣ್ಣನ ಸಾವಾಸ್ದಾಗ ಗಾಂಧಿ ಕೆಟ್ಟ ಕಣ್ರೋ, ಈ ಕಾಂಪಣ್ಣ ತಾನು ಕೆಡೋದಲ್ದೆ ಗಾಂಧಿ ಮಾತ್ಮರನ್ನೂ ಕುಲಗೆಡುಸ್ತಾವ್ನೆ'' ಎಂದ. ಹೆದರಿ ನಡುಗುತ್ತಿದ್ದ ಜನ ಕಾಂಪಣ್ಣನ ವಿಷಯವಾಗಿ ಹೊಟೇಲೊಂದರಲ್ಲಿ ಸಾರ್ವಜನಿಕವಾಗಿ ಮಾತಾಡತೊಡಗಿದರು.

ಇಷ್ಟಕ್ಕೂ ಆದದ್ದಾದರೂ ಏನಪ್ಪಾ ಅಂದ್ರೆ... ಆ ದಿನ ಅಕ್ಟೋಬರ್ ೨, ಗಾಂಧಿ ಮಹಾತ್ಮರ ಹುಟ್ಟಿದ ಹಬ್ಬ. ಗಾಂಧಿ ನಗರದ ಮಿಡ್ಲ್ ಸ್ಕೂಲಿನಲ್ಲಿನ ಹೆಡ್ಮಾಸ್ಟರ್ ಸೋಮಣ್ಣನವರು ಮಕ್ಕಳನ್ನೆಲ್ಲಾ ಬೆಳಗ್ಗೆ ಎದ್ದು ಬೇಗನೆ ಬರಬೇಕೆಂದು, ಶುಚಿಯಾದ ಸಮವಸ್ತ್ರ ಧರಿಸಿರಬೇಕೆಂದು, ತಲೆಯ ಮೇಲೆ ಗಾಂಧಿ ಟೊಪ್ಪಿಗೆ ಧರಿಸಿ ಶಿಸ್ತಾಗಿ

## ''ಮರ''

ಪೂಜೆಯನೆಂದೂ
ಮಾಡದ
ಧರ್ಮದ ಕದವನೆಂದೂ
ತಟ್ಟದ
ಮರ ಇರುವಲ್ಲಿಯೇ
ಮಣ್ಣ
ಕಣ-ಕಣಗಳಲ್ಲೂ
ಬೆರೆತು
ಪಡೆದ ಬೆಳಕಲ್ಲಿ
ಹಸಿರುಸಿರಿಗೆ
ಜೀವಜಲ ಧಾರೆಯೆರೆಯುವ
ಮರ್ಮ
ಎಲ್ಲವನೂ ಮೀರಿದ ಧರ್ಮ

**ಗಂಗಾಧರ ಕೊಡ್ಲಿಯವರ**
ಶಾಲ್ಮಲೀ, ೬ನೇ ಕ್ರಾಸ್, ಮುನ್ಸಿಪಲ್ ಲೇಔಟ್
ಸಿದ್ದಗಂಗಾ ಬಡಾವಣೆ, ತುಮಕೂರು.

ಬರಬೇಕೆಂದು ವಿಧಿಸಿದ್ದರು. ಮಕ್ಕಳೆಲ್ಲಾ ಬಹಳ ಹುರುಪಿನಿಂದ ಮನೆಗೆ ಹೋಗಿ ರಾತ್ರಿಯಾಗುವುದನ್ನೇ ಕಾದಿದ್ದು, ಗಂಟೆಗೊಂದು ಸಲ ಬೆಳಗಾಯಿತಾ ಎಂದು ನೋಡುತ್ತಾ, ಕೋಳಿ ನಿದ್ದೆ ಮಾಡಿ, ಐದು ಗಂಟೆಗೇ ರೆಡಿಯಾಗಿ ಶಾಲೆಗೆ ಬಂದಿದ್ದರು. ಪಿ. ಟಿ. ವೀರಭದ್ರಪ್ಪ ಗಾಂಧಿ ಫೋಟೋಗೆ ಹಾರ ಹಾಕಿ, ಕಾಯಿ ಕರ್ಪೂರ ಸೇವೆ ಮಾಡಬೇಕಾದರೆ, ಮಕ್ಕಳೆಲ್ಲಾ 'ರಘುಪತಿ ರಾಘವ ರಾಜಾ ರಾಮ್...' ಎಂಬ ಭಕ್ತಿ ಗೀತೆಯನ್ನು ಹಾಡಿ, ವೇದಿಕೆಯ ಮೇಲೆ ಕುಳಿತಿದ್ದ ಸನ್ಮಾನ್ಯ ಛೇರ್ಮನ್ ಕೃಷ್ಣಪ್ಪನವರು, ಹೆಡ್ಮಾಸ್ಟರ್ ಸೋಮಣ್ಣನವರು ಹಲ್ಕಿರಿದು ಭಾಷಣ ಶುರು ಮಾಡಬೇಕೆನ್ನುವಷ್ಟರಲ್ಲಿ, ಸ್ವತಃ ಕಾಂಪಣ್ಣನೇ ವೇದಿಕೆಯ ಮೇಲೆ ಬಂದು ನಿಂತ. ಮಕ್ಕಳೆಲ್ಲಾ ಹೆದರಿ ತರಗುಟ್ಟುತ್ತಾ, ''ಲೇ ಕಾಂಪಣ್ಣ ಬಂದ. ಓಡ್ರೋ'' ಎಂದ ಕೂಡಲೇ ಕೆಲವು ಮಕ್ಕಳು ಹೆದರಿ ಓಡಿ ಹೋದರು. ಸಣ್ಣ ಹುಡುಗನೊಬ್ಬ ಚೆಡ್ಡಿಯಲ್ಲೇ ಹೇತುಕೊಂಡು 'ಕುರ್ರೊ ಮುರ್ರೊ' ಎನ್ನತೊಡಗಿದ. ಭಾಷಣಕ್ಕೆ ನಿಂತಿದ್ದ ಸೋಮಣ್ಣ ಗಡಗುಟ್ಟಿದ. ಕಾಂಪಣ್ಣ ಜಬರದಸ್ತಾಗಿ ಕೇಳಿದ, ''ಏನಿದು ?'' ಅದಕ್ಕೆ ಸೋಮಣ್ಣ, ''ಕಾಂಪಣ್ಣ, ಇದು ಗಾಂಧಿ ಜಯಂತಿ ಕಣಪ್ಪ'' ಎಂದರು. ಕಾಂಪಣ್ಣ ಕಣ್ಣರಳಿಸುತ್ತಾ, ''ಗಾಂಧಿ... ಯಾರವನು ಸತ್ತಿದ್ದಾನೋ ಬದುಕಿದ್ದಾನೋ...?''

''ಅಯ್ಯೋ... ಗಾಂಧೀಜಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಮಹಾತ್ಮರು ಕಣಪ್ಪಾ, ಸತ್ಯ, ಅಹಿಂಸೆಗೋಸ್ಕರ ತಮ್ಮ ಜೀವನವನ್ನೇ ಪಣವಾಗಿಟ್ಟು ಹೋರಾಡಿದರು'', ಬೆದರುತ್ತಲೇ ಹೇಳಿದರು ಸೋಮಣ್ಣ.



''ಸ್ವಾತಂತ್ರ್ಯ... ಹಂಗಂದ್ರೆ ಏನು ? ಎಲ್ಲೈತೆ ಅದು ? ಯಾರು ಇಟ್ಟುಕೊಂಡವ್ರೆ ಅದ್ನ ?'' ಕಾಂಪಣ್ಣ ಹುಬ್ಬು ಗಂಟಿಕ್ಕುತ್ತಾ ಕೇಳಿದ. ಸೋಮಣ್ಣ ಉತ್ತರವಿಲ್ಲದೆ ತೊದಲಾಡಿದರು. ಮತ್ತೆ ಕಾಂಪಣ್ಣನೇ ಮುಂದೆ ಬಂದು, ''ಏನು... ಇವನೇನು ಬದುಕಿದ್ದಾನೋ ಅಥವಾ ಸತ್ತು ಹೋದ್ನೋ...'' ಎಂದು ಕೇಳಿದ. ಅದಕ್ಕೆ ಸೋಮಣ್ಣ ಅಳುಮೋರೆ ಹಾಕುತ್ತಾ, ''ಅಯ್ಯೋ ಅವರು ಸತ್ತು ಹೋಗಿದ್ದಾರೆ ಕಣಪ್ಪಾ, ಗೂಡ್ಸೆ ಅವರನ್ನ ಗುಂಡು ಹಾಕಿ ಕೊಂದಾ.'' ''ಏನು ಹೇಳ್ತಾ ಇದ್ದೀಯಾ ? ಸ್ವಾತಂತ್ರ್ಯಕ್ಕೆ ಹೋರಾಡಿದ್ರು ಅಂತೀಯಾ, ಅಂತವ್ರನ್ನು ಯಾರಾದ್ರೂ ಗುಂಡು ಹಾಕಿ ಕೊಲ್ತಾರಾ ? ಹಂಗೆ ಕೊಂದಿದ್ದಾರೆ ಅಂದ್ರೆ ಅವನ್ಯಾರೋ ಕಳ್ಳನೇ ಇರಬೇಕು. ಕಳ್ಳನಿಗೆ ಪೂಜೆ ಮಾಡ್ತಿದ್ದೀರೇನ್ರೋ ? ನನ್ನ ಕಂಡ್ರೆ ಹೆದರಿ ಸಾಯ್ತೀರಾ. ಇವನಿಗೆ ಪೂಜೆ ಮಾಡ್ತೀರಾ ?'' ಎಂದು ಸಿಟ್ಟಿನಿಂದ ನೋಡಿದವನೇ ಗಾಂಧೀಜಿಯ ಫೋಟೋದ ಹತ್ತಿರ ಹೋಗಿ ಸೋಮಣ್ಣನವರನ್ನು ಕೇಳಿದ, ''ಈ ಫೋಟಾ ಏನು ಅವಂದಾ ? ಹೇಳು...'' ಸೋಮಣ್ಣ ಹುಳ್ಳಗೆ ಮುಖ ಮಾಡುತ್ತಾ, ಸುತ್ತಲೂ ನೋಡುತ್ತ ಬೆವೆತು, ''ಹೌದು'' ಎಂದರು. ತಕ್ಷಣವೇ ಕಾಂಪಣ್ಣ ಹಾಕಿದ್ದ ಹೂವಿನ ಹಾರವನ್ನೆಲ್ಲಾ ಕಿತ್ತು ಎಸೆದವನೇ, ಫೋಟೋವನ್ನು ಕೈಗೆ ತೆಗೆದುಕೊಂಡು ''ಇವನು ಇನ್ನು ಮುಂದೆ ನನ್ನ ಮನೇಲೆ ಇರಲಿ'', ಎಂದವನೇ ಫೋಟೋವನ್ನು ಎದೆಗೊತ್ತಿಕೊಂಡು ನಡೆದೇ ಬಿಟ್ಟ.

೩

ಊರಿನಲ್ಲಿ ಆಗ ಪ್ರತ್ಯಕ್ಷವಾದವನೇ ರಾಮರಾವು. ಗಾಂಧಿವಾದಿ ಎಂದು ಹೇಳಿಕೊಳ್ಳುತ್ತಾ, ಖಾದಿಧಾರಿಯಾಗಿ ತಲೆಯ ಮೇಲೆ ಟೊಪ್ಪಿಗೆ ಏರಿಸಿಕೊಂಡು ತಿರುಗಾಡುತ್ತಿದ್ದ ಇವನ ಇತಿಹಾಸವೂ, ಸ್ವಾತಂತ್ರ್ಯ ಕಾಲಕ್ಕೇ ಅಂದರೆ, ಗಾಂಧೀಜಿಯವರ ಜೊತೆಗೇ ತಳುಕುಹಾಕಿಕೊಳ್ಳಬೇಕಾಗಿತ್ತಾದರೂ ಇವರ ತಂದೆ ವಿವಾಹವಾಗುವುದು ನಿಧಾನವಾದ್ದರಿಂದ ಸ್ವಾತಂತ್ರ್ಯ ಸಿಕ್ಕ ಹತ್ತಾರು ವರ್ಷಗಳ ನಂತರ ಹುಟ್ಟಿ, ತಂದೆಯ ಮೇಲೆ ಆಸ್ತಿಗಾಗಿ ವ್ಯಾಜ್ಯ ಹೂಡಿದ. ಸ್ವಯಾರ್ಜಿತವಾದ ಆಸ್ತಿಯನ್ನು ಪುಢಾರಿಯಾದ ಇವನಿಗೆ ಕೊಡುವುದಿಲ್ಲವೆಂದು ಜಿದ್ದಿಗೆ ಬಿದ್ದ ತಂದೆಯನ್ನು ಮೈಮುರಿಯೆ ಹೊಡೆದು, ಕೈ ಕಡಿದು ಜೈಲು ಪಾಲಾದ ರಾಮರಾವ್ ಜೈಲಿನಿಂದ ಹೊರಬರುವ ಹೊತ್ತಿಗೆ ಈ ರೂಪು ಪಡೆದುಕೊಂಡಿದ್ದಂತೂ ಹೌದು. ಊರಿಗೆ ಬಂದ ಮರುಕ್ಷಣವೆ ತನ್ನ ಮಾತಿನ ಚತುರತೆಯಿಂದ ನಾಲ್ಕೈದು ಜನ ಹರೆಯದ ಹುಡುಗರ ಗುಂಪು ಕಟ್ಟಿಕೊಂಡು ಆ ಊರಿನ ಸ್ವಾತಂತ್ರ್ಯ ಸಮರಕ್ಕೆ ಸಿದ್ಧನಾದ.

ಈ ಹೊತ್ತಿನಲ್ಲೇ ಕಾಂಪಣ್ಣ ದಾಸಣ್ಣನ ಹೋಟೇಲಿಗೆ ಹೊಸದಾಗಿ ಬಂದಿದ್ದ ಟಿವಿಯಲ್ಲಿ ತರಹೇವಾರಿ ನೆರಳುಗೊಂಬೆಗಳನ್ನು ನೋಡುತ್ತಾ ಅಚ್ಚರಿಪಡುತ್ತಿದ್ದಾಗ, ಇದ್ದಕ್ಕಿದ್ದಂತೆ ಸೊಂಟಕ್ಕೆ ತುಂಡು ಪಂಚೆಯುಟ್ಟು, ವೇಗವಾಗಿ ನಡೆಯುತ್ತಾ ತನ್ನ ಹಿಂದಿದ್ದ ಅಪಾರ ಜನಸ್ತೋಮವನ್ನು ಮುನ್ನಡೆಸುತ್ತಾ ಬರುತ್ತಿದ್ದ. ಅವರನ್ನುದ್ದೇಶಿಸಿ ಭಾಷಣ ಮಾಡುತ್ತಿದ್ದ ಒಬ್ಬ ವ್ಯಕ್ತಿಯ ಚಿತ್ರ ಬಂದಿದ್ದೇ ತಡ ಕಾಂಪಣ್ಣ ದಾಸಣ್ಣನನ್ನು ಅದ್ಯಾರೆಂದು ಕೇಳಿದ. ಅದಕ್ಕೆ ವಡೆ ಬೇಯಿಸುತ್ತಿದ್ದ ದಾಸಣ್ಣ ಕತ್ತನ್ನು ತಿರುಗಿಸದೆ ''ಉಹುಂ'' ಎಂದು ಕತ್ತು ಅಲ್ಲಾಡಿಸಿದ. ಅದಕ್ಕೆ ಅಲ್ಲೇ ಕಾಫಿ ಕುಡಿಯುತ್ತಿದ್ದ ಜಮೀರನು, ''ಕಾಂಪಣ್ಣ, ಅವ್ರು ಗಾಂಧಿ ಮಹಾತ್ಮರು, ಜಗತ್ತಿಗೇ ಶಾಂತಿ ಪಾಠ ಹೇಳಿಕೊಟ್ಟ ಮಹಾತ್ಮರು ಕಣಪ್ಪಾ ಅವರು. ಸತ್ಯ-ಅಹಿಂಸೆಯೇ ಜಗತ್ತಿನಲ್ಲಿ ಪವಿತ್ರವಾದದ್ದು, ಅದರಿಂದ ಏನು ಬೇಕಾದ್ರೂ ಸಾಧಿಸಬಹುದು ಅಂತ ತಿಳಿಸಿಕೊಟ್ಟವರು. ನಮ್ಮ ದೇಶಾನ ಆಳುತಿದ್ದ ಬ್ರಿಟಿಷರನ್ನು ಓಡಿಸಿದ್ದು ಇವರೇ. ಎಷ್ಟು ಜನ ಅವರ ಹಿಂದೆ ಹೋಗ್ತಿದ್ದಾರೆ ನೋಡು...'' ಎಂದು ಹೇಳಿದ. ಆಗ ಕಾಂಪಣ್ಣ ಟಿವಿಯಿಂದ ಕಣ್ಣು ಕೀಳದೆ, ''ಅಬ್ಬಾ ! ಎಷ್ಟು ಜನಾ... ಇವರ್ಯಾರೋ ಚೆಡ್ಡಿ ಲಕ್ಕಪ್ಪಗಳು, ಬಂದೂಕ ಹಿಡ್ಕೊಂಡಿದ್ದಾರೆ. ಸುಡ್ತಾರೋ ಹೆಂಗಪ್ಪಾ ಅವರ್ನಾ...? ಅಯ್ಯೋ ಸುಡಾಕೆ ನಿಂತರಲ್ಲಾ ಶಿವನೇ... ಆವಯ್ಯನಿಗೆ ಬಂದೂಕ ತೋರುಸ್ತಾರಲ್ಲಾ... ಅಲಲಲಾ ! ಹೆದರದಂಗೆ ನಿಂತವನಲ್ಲಾ ಆ ವಯ್ಯಾ... ಏನು ಗುಂಡುಗೇನೋ ಅವಂದು...'' ಎಂದು ಕಣ್ಣಗಲಿಸಿ ಉದ್ಗರಿಸತೊಡಗಿದ. ಅಲ್ಲಿನ ದೃಶ್ಯ ನೋಡಿ ಪ್ರತಿಕ್ಷಣಕ್ಕೂ ಆ ದೃಶ್ಯ ಅವನ ಮುಖದೊಳಗೆ ಪಡಿಮೂಡುತ್ತಿದ್ದುದನ್ನು ಕಾಣಬಹುದಾಗಿತ್ತು. ಹೊಡೆತ ತಿಂದು, ಚೀರಾಡುತ್ತಿದ್ದರೂ ''ಜೈ ಹಿಂದ್... ಬೋಲೋ ಭಾರತ್ ಮಾತಾಕಿ... ಮಹಾತ್ಮ ಗಾಂಧಿಕಿ ಜೈ'' ಎಂದು ಘೋಷಣೆ ಮೊಳಗಿಸುತ್ತಿದ್ದ ಅವರನ್ನು ಕಂಡು ಕಾಂಪಣ್ಣನ ಎದೆಯೊಳಗೆ ಅದೇನೋ ಮಿಸುಕಾಡಿದಂತಾಯಿತು. ಗಾಂಧೀಜಿಯ ಆ ಕಾಂತಿಯುಕ್ತ ಮುಖ ಇವನ ಎದೆಯೊಳಗೆ ಪಡಿಮೂಡುತ್ತಿತ್ತು.

ರಾತ್ರಿ ಮಲಗುವಾಗಲೂ, ಸಾವಿರಾರು ಜನರ ಮುಂದೆ ನಡೆದುಹೋಗುತ್ತಿದ್ದ ಆ ಧೀರೋದಾತ್ತನ ಚಿತ್ರ ಕಣ್ಣಮುಂದೆ ಸುಳಿದಾಡುತ್ತಿತ್ತು. ಸಹಸ್ರಾರು ಜನರ 'ಮಹಾತ್ಮಾ ಗಾಂಧಿಜೀಕಿ ಜೈ' ಎನ್ನುವ ಆ ಉದ್ಘೋಷ ಕಿವಿಗೆ ಅಪ್ಪಳಿಸಿದಂತಾಗಿ ಬೆಚ್ಚಿಬಿದ್ದ ಕಾಂಪಣ್ಣ. ಎದುರಿಗಿದ್ದ ಗಾಂಧಿ ಫೋಟೋದ ಆ ಕಿರುನಗೆಯ ಗಾಂಧಿ ಮಹಾತ್ಮನನ್ನು ಕಣ್ಣರಳಿಸಿ ನೋಡಲಾಗಿ, ಆ ಕಿರುನಗೆಯೇ ಇಂಚಿಂಚಾಗಿ ತನ್ನ ದೇಹವನ್ನು ಹೊಕ್ಕು, ಹಮ್ಮು-ಬಿಮ್ಮುಗಳನ್ನು ಜಾಲಾಡಿಸಿದಂತೆ, ಮೈ ಬಿಸಿಯೇರಿ ಹಿಮಗಟ್ಟಿದ್ದ ಭಾವನೆಗಳು ಕರಗಿ ಬೆವರಾದಂತೆ, ತಾನು ಮಗುವಾದಂತೆ, ಇಡೀ ಭೂಮಿಯೇ ತಾಯಿಯಾಗಿ ತನ್ನನ್ನು ತೊಡೆಯ ಮೇಲೆಳೆದುಕೊಂಡು ಹಾಲುಣಿಸಿದಂತೆ, ಹಾಲಿನ ಬದಲಾಗಿ ತನ್ನ ಬಾಯ ತುಂಬ ಗಾಂಧಿಯ ನಾಮವೇ ಹರಿದಾಡಿದಂತಾಗುತ್ತಿತ್ತು. ಯಾವತ್ತಿಗಿಂತಲೂ ಅಪರಿಚಿತವಾದ ಈ ಅನುಭವಕ್ಕೆ ಕಾಂಪಣ್ಣ ಕಳವಳಿಸಿದ. ತನಗೆಲ್ಲೋ ಮನೋಭ್ರಾಂತಿಯೆಂದು ತಲೆ ಕೊಡವಿಕೊಂಡ. ಮೈಯೆಲ್ಲಾ ಬೆವರಿಂದ ತೋಯ್ದುಹೋಗಿತ್ತು. ತನ್ನೆದೆಯ ಢವ ಢವ ತನಗೇ ಕೇಳುತ್ತಿತ್ತು. ಗಾಂಧೀಜಿಯ ಕಿರುನಗೆಯ ಸೊಗಸು ಫೋಟೋದಲ್ಲಿನ್ನೂ ಹೆಚ್ಚಾದಂತೆ ಕಂಡು ಫೋಟೋದ ಹತ್ತಿರ ಸರಿದು, ''ಗಾಂಧಿ ಮಹಾತ್ಮ'' ಎಂದು ಕಣ್ಣಲ್ಲಿ ಕಣ್ಣಿಟ್ಟ. ಗಾಳಿ ಬೀಸಿ ಅವರಪ್ಪನ ಗೋಡೆಯ ಚಿನ್ನದ ಪದಕಗಳು ಕಳ ಕಳ ಸದ್ದುಮಾಡಿದವು.

ಜನಕ್ಕೆ ಖಚಿತವಾಗಿಹೋಗಿತ್ತು ಕಾಂಪಣ್ಣನಿಗೆ ಹುಚ್ಚು ಹಿಡಿದಿರುವುದು. ಅವನ ವೇಷ ಬದಲಾಗಿತ್ತು. ಕಪ್ಪು ಮೈಗೆ ಬಿಳಿ ಖಾದಿ ಉಡುಪು ಶೋಭಾಯಮಾನವಾಗಿ ಕಾಣುತ್ತಿತ್ತು. ಕೆಂಪು ಕುಂಕುಮ ಕಪ್ಪು ಮುಖದ ಹಣೆಯ ಮೇಲೆ ಹೊಳೆಯುತ್ತಿತ್ತು. ಎಲ್ಲರ ಜೊತೆಗೂ ನಗುತ್ತಾ ಮಾತಾಡುತ್ತಿದ್ದ ಕಾಂಪಣ್ಣನನ್ನು ಕಂಡು ಜನರಿಗೆ ಏನು ಮಾಡಬೇಕೋ ತಿಳಿಯದಾಯಿತು. ಚೇರ್ಮನ್ ಕೃಷ್ಣಪ್ಪನಂತೂ ಇವನನ್ನು, ಇವನ ವೇಷವನ್ನು ಕಂಡು ಉರಿದುಬೀಳುತ್ತಿದ್ದ. ಹೆದರುತ್ತಿದ್ದ ಜನ ತಾತ್ಸಾರ ತೋರಿಸಿ ನಗಲಾರಂಭಿಸಿದರು. ಜನರು ನಕ್ಕಾಗ ಕಾಂಪಣ್ಣನೂ ನಗುತ್ತಿದ್ದ. ಅವನು ನಕ್ಕರೆ ಜನರು, ಓಹೋ ಹುಚ್ಚು ಕೆರಳಿತೆಂದು ತಿಳಿದು ಸುಮ್ಮನಾಗುತ್ತಿದ್ದರು. ಕಾಂಪಣ್ಣನೂ ನಗುತ್ತಿದ್ದ: ಫೋಟೋದಲ್ಲಿನ ಗಾಂಧೀಜಿಯ ಕಿರುನಗೆಯನ್ನು ಅನುಕರಿಸುವವನಂತೆ. ಅವನ ಮನೆಯ ಕಡೆಗೂ ಜನ ಭಯವಿಲ್ಲದೆ ಸುಳಿದಾಡಲಾರಂಭಿಸಿದರು. ಕೆಲವರು ಒಳಗೇನಿದೆ ಎಂದು ಇಣುಕಿ

ನೋಡಲಾರಂಭಿಸಿದರು. ರಾತ್ರಿ ಹೊತ್ತಿನಲ್ಲಿ ಕಾಂಪಣ್ಣನ ಮನೆಯಿಂದ ಎಂತೆಂಥವೋ ಅರ್ಥವಿಲ್ಲದ ಅಸಂಬದ್ಧ ಮಾತುಗಳು ಕೇಳಿ ಬರಲಾರಂಭಿಸಿದವು. ಗಾಂಧೀಜಿಯ ಫೋಟೋವನ್ನು ಎದುರಿಗಿಟ್ಟುಕೊಂಡು ಕಾಂಪಣ್ಣ ಏನೇನೋ ಮಾತನಾಡುತ್ತಿದ್ದ. ಒಂದು ದಿನ ಕಾಂಪಣ್ಣ ಮಾತನಾಡುತ್ತಾ, ''ನಮ್ಮಪ್ಪ ತೊಂಬತ್ತು ಕೊಲೆ ಮಾಡಿದ್ನಂತೆ, ಪಾಪ ಆ ಜೀವಗಳು ಎಷ್ಟು ನೊಂದು ಸತ್ತಿರಬಹುದು, ಮಹಾತ್ಮರೇ... ಅಗೋ ನೋಡಿ ಆ ಚಿನ್ನದ ಪದಕಗಳು, ಖೂನಿ ಮಾಡಿದ್ದಕ್ಕೆ ಸ್ವತಃ ಮಹಾರಾಜರೇ ನಮ್ಮಪ್ಪನಿಗೆ ಶಹಬಾಷ್‌ಗಿರಿ ಕೊಟ್ಟು ಇವನ್ನ ಕುತ್ತಿಗೆಗೆ ಹಾಕಿದ್ರಂತೆ. ಅವನ ಆ ರಕ್ತ ನನ್ನ ದೇಹದಲ್ಲೂ ಹರೀತಿದೆ ಅಲ್ಲವಾ ಮಹಾತ್ಮರೆ? ನಾನೇನ್ಮಾಡ್ಲಿ? ನಾನೂ ಪಾಪ ಮಾಡಿಬಿಟ್ಟೆನಲ್ಲಾ ಮಹಾತ್ಮರೆ, ಏನು ಮಾಡಲಿ ಹೇಳಿ ಮಹಾತ್ಮರೆ... ಮಾತಾಡಿ'' ಅಂದ. ಅದಕ್ಕೆ ಮಹಾತ್ಮರು ಕಿರುನಗೆ ನಕ್ಕಂತೆ, ಫೋಟೋದೊಳಗಿಂದ ''ಕಾಂಪೂ... ಬದುಕಂದ್ರೆ ಹೀಗೆ; ಯಾರು ತಪ್ಪು ಮಾಡೋಲ್ಲ ಹೇಳು. ನಾನೂ ತಪ್ಪ ಮಾಡಿದ್ದೀನಪ್ಪಾ ...ಆದ್ರೆ ತಪ್ಪಿನ ಅರಿವಾಗಬೇಕು ಹುಡುಗಾ, ಅರಿವೇ ನಿನ್ನ ಗುರು'' ಎಂದು ಹೇಳಿದಂತೆ ಎನ್ನಿಸಿತು. ಅದಕ್ಕೆ ಕಾಂಪಣ್ಣ ಕೈಮುಗಿಯುತ್ತಾ, ''ಹೌದು ಮಹಾತ್ಮರೆ, ನನ್ನ ತಪ್ಪನ್ನು ನಾನು ಒಪ್ಕೋತೀನಿ'' ಎಂದ. ಗಾಂಧೀಜಿ ನಿಟ್ಟುಸಿರುಬಿಡುತ್ತಾ, ''ಈ ದೇಶದ ಗತಿ ಎಲ್ಲಿಗೆ ಬಂತು ನೋಡು ಕಾಂಪೂ. ಆವತ್ತು ಗೋಡ್ಸೆ ನನ್ನ ಎದೆಗೆ ಗುಂಡು ಹೊಡೆದ. ಆವಾಗ್ಲೂ ನನಗೇನೂ ಕಷ್ಟ ಆಗ್ಲಿಲ್ಲ, ನಗುನಗುತ್ತಾ ಸತ್ತುಹೋದೆ. ಆದರೆ ಈಗ ಬಡವನ ಮನೇಲೂ ಬಾಂಬ್ ಸಿಡಿಯುತ್ತೆ, ಶ್ರೀಮಂತನ ಬಂಗಲೇಲೂ ಬಾಂಬ್ ಸಿಡಿಯುತ್ತೆ, ಅಮಾಯಕರು ಸಾಯ್ತಾ ಇದ್ರೆ, ನನ್ನ ಆತ್ಮದ ತುಂಬ ರಕ್ತಾ ಕಣೋ ಕಾಂಪು. ನನ್ನ ಕನಸು ಕನಸಾಗೇ ಉಳಿದುಹೋಯ್ತಲ್ಲಾ ಕಾಂಪು?'' ಎಂದಂತಾಯಿತು. ಅದಕ್ಕೆ ಕಾಂಪಣ್ಣನು ನಿಟ್ಟುಸಿರುಬಿಡುತ್ತಾ, ''ನೀವೇನೂ ಚಿಂತೆ ಮಾಡಬೇಡಿ ಬಾಪೂ... ನಾನು ಮಾಡಿದ ಪಾಪ ಕಳಕೊಳ್ಳೋಕೆ ನಿಮ್ಮನ್ನ ಹೆಗಲ ಮೇಲೆ ಹೊತ್ತುಕೊಂಡು, ಊರೂರು ಸುತ್ತುತ್ತೇನೆ. ನಿಮ್ಮ ಉಪದೇಶವನ್ನ ಎಲ್ಲರಿಗೂ ತಿಳಿಸ್ತೇನೆ ಮಹಾತ್ಮರೆ'' ಎನ್ನತೊಡಗಿದಂತೆ ಊರಿನ ಜನರು, ಭಯವಾದರೂ ಹೊಟ್ಟೆ ಹಿಡಿದುಕೊಂಡು ನಗಲಾರಂಭಿಸಿದರು. ಗಾಂಧೀಜಿಯ ಫೋಟೋದ ಜೊತೆಗೆ ಮಾತಾಡುತ್ತಿರುವ ಅವನನ್ನು ಕಂಡು ಆಶ್ಚರ್ಯವೂ ಆಗಿತ್ತು.




ಖೂನಿ ಕಾಂಪಣ್ಣನು, ಮರುದಿನವೇ ಬಿ.ಎ. ಓದಿದ್ದರೂ ಉಡಾಳನಂತೆ ಪೋಲಿ ಹೊಡೆದುಕೊಂಡು ಅಡ್ಡಾಡುತ್ತಿದ್ದ ಮರಾಠರ ಮಂಜನನ್ನು ಹಿಡಿದುಕೊಂಡು ಬಂದು ಗಾಂಧೀಜಿಯ ಪುಸ್ತಕಗಳನ್ನು ಓದಿಸಿಕೊಳ್ಳತೊಡಗಿದನು. ಕಾಲೇಜಿನಲ್ಲಿದ್ದಾಗ ನಾನಾ ಪ್ರಯತ್ನಗಳಿಂದ ಹುಡುಗಿಯರನ್ನು ಒಲಿಸಿಕೊಳ್ಳಲು ಯತ್ನಿಸಿ, ಸೋತು ಹೈರಾಣಾಗಿದ್ದ ಮಂಜ ಗಾಂಧಿ ತತ್ವಗಳಲ್ಲಿ ಚಿತ್ತ ನೆಟ್ಟಂತೆ ನಟಿಸುತ್ತಾ ಸಾಂಗವಾಗಿ ಗಾಂಧಿ ತತ್ವವನ್ನು ಕಾಂಪಣ್ಣನಿಗೆ ಬೋಧಿಸಿ ಗುರುವಾದನು. ಒಂದು ದಿನ ಕಾಂಪಣ್ಣನು ಮನೆಯ ಬಾಗಿಲು ತೆರೆದು ಹೊರಗೆ ಅಡಿಯಿಟ್ಟಾಗಲೇ ಜನರೆಲ್ಲರೂ ಸ್ತಂಭೀಭೂತರಾಗಿ ನೋಡಹತ್ತಿದರು. ಬೆಳ್ಳಗೆ ಹೊಳೆಯುತ್ತಿದ್ದ ಖಾದೀ ದಿರಿಸಿನಿಂದ ಶೋಭಿತನಾದ ಕಾಂಪಣ್ಣನ ಕುತ್ತಿಗೆಯಲ್ಲಿ ತುಳಸೀಹಾರದಿಂದ ಅಲಂಕೃತವಾದ ಗಾಂಧೀಜಿಯ ಫೋಟೋ ನೇತುಬಿದ್ದಿತ್ತು. ಜನರು ಕಣ್ಣರಳಿಸಿ ನೋಡಿದರು. ಕಾಂಪಣ್ಣನ ಮೊಗದ ಮೇಲೆ ಯಾವತ್ತೂ ಕಾಣದ ನಿಷ್ಕಲ್ಮಶ ಪ್ರಭೆಯೊಂದು ತುಂಬಿಕೊಂಡು, ಆ ಪ್ರಭೆಯೇ ಜನರ ಮನಸ್ಸಿನಲ್ಲಿ ಹುಚ್ಚಿನ ಅವಿವೇಕವೆಂಬಂತೆ ಪರಿವರ್ತನೆಗೊಂಡು, ಈ ಭ್ರಮಾಧೀನನನ್ನು ತಾತ್ಸಾರದಿಂದ ಕೆಲವರು, ಜಿಗುಪ್ಸೆಯಿಂದ ಕೆಲವರು, ನೋಡುತ್ತಿದ್ದರು. ಅವನ ದಿಟ್ಟಿಯೊಳಗಣ ಪ್ರಶಾಂತಿಯಲ್ಲಿ ಎದುರಿನ ಜನರು, ಹುಚ್ಚರಂತೆ, ದೀನ-ದರಿದ್ರರಂತೆ, ಅಸತ್ಯವನ್ನೇ ಸತ್ಯವೆಂದು ನಂಬಿ ನಡೆಯುವ ಮೂರ್ಖರಂತೆ ಕಂಡು, ಅವನ ಕಿರುನಗೆ, ಬಿರುನಗೆಯಾಗಿ, ಬಿರುನಗೆ ಜನರ ಮನದೊಳಗೆ ಹುಚ್ಚಾಗಿ ಅರ್ಥಾಂತರಗೊಳ್ಳುತ್ತಿರುವ ಹೊತ್ತಿನಲ್ಲೇ ಗುಡುಗಿನಂತೆ ಕೇಳಿದ ರಾಮನಾಮದಿಂದ ಜನ ದಿಗ್ಭ್ರಾಂತರಾದರು. ಕಾಂಪಣ್ಣನು ರಾಮನಾಮವನ್ನು ಹಾಡುತ್ತಾ ಕುಣಿಯುತ್ತಾ ಹೊರಟಂತೆಯೂ, ಊರಿನ ಚಿಳ್ಳೆಪಿಳ್ಳೆಗಳೆಲ್ಲಾ 'ಹೋ' ಎನ್ನುತ್ತಾ ಅವನ ಹಿಂದೆ ಹೊರಟೇ ಬಿಟ್ಟರು. ಕಾಂಪಣ್ಣ, ''ಬರ್ರೋ... ನೀವೇ ಜಗತ್ತನ್ನ ಬೆಳಗಿಸಬೇಕಾದವರು, ಬನ್ನಿ... ಬನ್ನಿ... ಇಂದಿನ ಮಕ್ಕಳೇ ನಾಳಿನ ಸತ್ಪ್ರಜೆಗಳು'' ಎಂದು ಕೂಗು ಹಾಕುತ್ತಾ, 'ಮಹಾತ್ಮಾ ಗಾಂಧೀಜೀಕಿ ಜೈ' ಎನ್ನುತ್ತಾ ನಡೆದೇಬಿಟ್ಟ. ಊರಿನವರು ಎಷ್ಟೇ ಅರಚಿ, ಗದರಿಸಿ ಕೂಗಿದರೂ, ಮಕ್ಕಳು ಮಾತ್ರ ನಿಲ್ಲಲಿಲ್ಲ.

ಆಗಲೇ ರಾಮರಾವು ಮಧ್ಯ ಪ್ರವೇಶ ಮಾಡಿ ಪರಿಸ್ಥಿತಿಯನ್ನು ಅವಲೋಕಿಸಿದ್ದ. ''ಗಾಂಧೀಜಿ ಎಂಥಾ ಮಹಾತ್ಮ ಅಂತ ನಿಮಗ್ಯಾರಿಗೂ ಗೊತ್ತಿಲ್ಲ, ಅವರ ಫೋಟೋ ಆ ಕೊಲೆಗಾರನ ಹತ್ತಿರ ಇರೋದು ಅಂದ್ರೇನೂ? ಸತ್ಯ-ಅಹಿಂಸೆಗೆ ಸಂಚಕಾರ ಬಂದ ಹಾಗೇ ಅಲ್ಲವೇ? ಎಂತಹ ವಿಪರ್ಯಾಸ ನೋಡಿ, ಒಬ್ಬ ಕೊಲೆಗಾರನ ಕೈಯಲ್ಲಿ ಮಹಾತ್ಮರ ಫೋಟೋ....! ಜನಗಳೇ, ನಾವು ಇದಕ್ಕೆಲ್ಲಾ ಅವಕಾಶ ಮಾಡಿಕೊಡಬಾರದು. ನಮಗೆ ಸ್ವಾತಂತ್ರ್ಯ ತಂದುಕೊಟ್ಟ ಮಹಾತ್ಮರನ್ನು ಅವನ ಕೈಯಲ್ಲಿ ನರಳೋಕೆ ಬಿಡಬಾರದು'' ಎಂದು ಹುರುಪಿನಿಂದ ಭಾಷಣ ಬಿಗಿದಿದ್ದ. ಅವನ ಹಿಂದಿದ್ದ ಜನರೆಲ್ಲಾ 'ಜೈ' ಅಂದು ಮುಂದಿನ ಆಜ್ಞೆಗೋಸ್ಕರ ಕಾದಿದ್ದರು. ರಾಮರಾವು ಮತ್ತೆ ಹುರುಪಿನಿಂದ, ''ಇವತ್ತು ನಮ್ಮ ಊರಿನ ಒಂದು ಸ್ವತಂತ್ರ ಹೋರಾಟ, ಅನ್ಯಾಯದ ವಿರುದ್ಧ ಹೋರಾಟ. ರಾಮನು ಶಂಬೂಕನ ವಿರುದ್ಧ ಹೋರಾಡಿದ್ದು ನಿಮಗೆಲ್ಲಾ ಗೊತ್ತಿರಬೇಕಲ್ಲಾ, ಹಾಗೇ ನಾವೆಲ್ಲರೂ ಇಂದು ಹೋರಾಡಿ ಗಾಂಧಿಯನ್ನು ಸೆರೆಯಿಂದ ಬಿಡಿಸಬೇಕಾಗಿದೆ. ಅದು ಆಗದ ಹೊರತು ನಮ್ಮೆಲ್ಲರ ಸ್ವಾತಂತ್ರ್ಯಕ್ಕೆ ನಾವೇ ಮಾಡಿಕೊಂಡ ಮೋಸ ಎಂದು ನಾವು ತಿಳಿದುಕೊಳ್ಳಬೇಕಾಗ್ತದೆ.'' ಮತ್ತಷ್ಟು ರೊಚ್ಚಿಗೆದ್ದ ಜನ ರಾಮರಾವುನನ್ನೇ ತಮ್ಮ ಮುಂದಾಳೆಂದು ಒಪ್ಪಿಕೊಂಡು, ''ಮುಂದಿನ ದಾರಿ ಯಾವುದು'' ಎಂದು ಕೇಳಿದ್ದಕ್ಕೆ ರಾಮರಾವು, ಇವತ್ತು ರಾತ್ರಿ ನಮ್ಮ ಹೋರಾಟ; ಕಾಂಪಣ್ಣನ ವಿರುದ್ಧ, ಎಂದು ಆಜ್ಞೆ ಕೊಟ್ಟು 'ಮಹಾತ್ಮಾ ಗಾಂಧೀಜೀಕಿ ಜೈ' ಎಂದು ಒಮ್ಮೆ ಕೂಗಿದೊಡನೆ ಇಡೀ ಊರೇ ಜೈ ಎಂದು ಘರ್ಜಿಸಿತು.

೫

ಆ ದಿನ ರಾತ್ರಿ, ಕಾಂಪಣ್ಣ ಮೌನವಾಗಿ ಗಾಂಧೀಜಿಯನ್ನ ನೋಡುತ್ತಾ ಕುಳಿತಿದ್ದ. ಗಾಂಧೀಜಿ ಫೋಟೋದಿಂದೆದ್ದು ಬಂದು, ಅವನ ಎದುರಿಗೆ ಕುಳಿತು ಕಣ್ಣಲ್ಲಿ ಕಣ್ಣಿಟ್ಟು ಏನೋ ಹೇಳಿದಂತೆನಿಸುತ್ತಿತ್ತು. ನೀರವ ಮೌನದ ತುಂಬ ರಾಮನಾಮ. ಕಾಂಪಣ್ಣ ಮಗುವಾಗಿದ್ದ. ಊರು, ಜನ, ಪರಮಣ್ಣ, ಖೂನಿ, ಚಿನ್ನದ ಪದಕ, ಮಹರಾಜ ಎಲ್ಲವನ್ನೂ ಮೀರಿ ಎತ್ತರದಲ್ಲಿ ನಿಂತು ಜಗತ್ತನ್ನು ನೋಡಿ, ಅದರ ಕಗ್ಗಂಟನ್ನು ಬಿಚ್ಚುತ್ತಾ ಕೂತಿದ್ದ. ಹೊರಗಿನಿಂದ ರಾಮರಾವುನ ಹೆಂಡಗುಡುಕ ಹಿಂಬಾಲಕರ ಗುಂಪು, ''ಮಹಾತ್ಮ ಗಾಂಧೀಜೀಕೀ ಜೈ, ಕಾಂಪಣ್ಣನ್ನ ಬಡಿದುಹಾಕಿ'' ಎಂದು ಕೂಗು ಹಾಕುತ್ತಿತ್ತು. ಕಾಂಪಣ್ಣ ಗೋಡೆಯ ಮೇಲೆ ಅಪ್ಪನ ಗಂಡುಗೊಡಲಿಯ ಕಡೆಗೊಮ್ಮೆ ನೋಡಿದ. ಗಾಂಧೀಜಿ ಮತ್ತೆ ನಕ್ಕರು. ಕಾಂಪಣ್ಣನೂ ನಕ್ಕ. ಅಂದು ಗಾಂಧೀಜಿಯನ್ನು ಎದುರುಗೊಂಡ ಎಲ್ಲರಿಗೂ ಕಂಡಿದ್ದು ಇದೇ ನಗು; ಅಂದು ಅವರ್‍ಯಾರಿಗೂ ಆ ನಗುವಿನ ಮರ್ಮ ಅರ್ಥವಾಗಿರಲಿಲ್ಲ, ಇಲ್ಲಿ ಕಾಂಪಣ್ಣನ ನಗುವಿನಲ್ಲಿ ಅದು ಅರ್ಥ ಕಂಡುಕೊಂಡಿತ್ತು. ಇದ್ದಕ್ಕಿದ್ದಂತೆ ಕಾಂಪಣ್ಣನ ಎಂದೂ ನೀರಾಡದಿದ್ದ ಕಂಗಳಲ್ಲಿ ಕಣ್ಣೀರು ಹರಿಯತೊಡಗಿತು. ಬಿಕ್ಕಳಿಸತೊಡಗಿದ. ಗಾಂಧೀಜಿ ಕಾಂಪಣ್ಣನ ಗಲ್ಲ ಹಿಡಿದು, ತನ್ನ ಬೊಚ್ಚು ಬಾಯಿಂದ ಕಾಂಪಣ್ಣನ ಕಪ್ಪಗಿನ ಮುಖದ ತುಂಬ ಮುದ್ದು ಕೊಟ್ಟಂತೆ ಭಾಸವಾಯಿತು. ಇತ್ತ ಅರಚಾಡುತ್ತಿದ್ದ ರಾಮರಾವುವಿನ ಹೆಂಡಕುಡುಕ ಹಿಂಬಾಲಕರು ಬಾಗಿಲನ್ನು ಮುರಿದು ಚೀರಾಡುತ್ತಾ ಒಳಗೆ ಬಂದಾಗ, ಕಾಂಪಣ್ಣ ಫೋಟೋವನ್ನ ಎದೆಗೊತ್ತಿಕೊಂಡು ಗೋಡೆಗೊರಗಿ ಕಣ್ಮುಚ್ಚಿದ್ದ. ಕಿರುನಗೆ ಇನ್ನೂ ಆರಿರಲಿಲ್ಲ, ರಾಮರಾವು ಕೋಪದಿಂದ ಫೋಟೋವನ್ನು ಕೀಳಲು ನೋಡಿದ. ಅದು ಗಟ್ಟಿಯಾಗಿ ಅವನನ್ನು ಅಂಟಿಕೊಂಡಿತ್ತು. ''ಕುಡಿದು ಸತ್ತಿದ್ದಾನೆ, ಕೊಲೆಗಾರ'' ಎಂದುಕೊಂಡು ನಾಲ್ಕೈದು ಜನರು ಬಲವಾಗಿ ಕೀಳಲಾಗಿ, ಕೈಗೆ ಬಂದುದ್ದೇ 'ರಾವು ಹಿಡಿದ ರಾಮನ ಕೈಯಲ್ಲಿ ನಾನು ಇರಲಾರೆ' ಅನ್ನಂಗೆ ಫೋಟೋ ಕೆಳಗೆ ಬಿದ್ದು ಚೂರಾಗಿ, ರಾಮರಾವು ಗಾಬರಿಗೊಂಡು ನೋಡುತ್ತಿರುವಾಗಲೇ ಒಡೆದು ಸಾವಿರ ಚೂರಾದ ಗಾಜಿನ ತುಂಬ ಕಾಂಪಣ್ಣನ ಸಾವಿರ ಮುಖಗಳು ಕಾಣುತ್ತಿದ್ದವು.


**ಧನಂಜಯ ದಿಡಗ**
ನೀನಾಸಂ, ಹೆಗ್ಗೋಡು, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

**ಡಾ॥ ಮೋಹನ ಚಂದ್ರಗುತ್ತಿ**

**ವಸಾಹತುಶಾಹಿ ಸರ್ಕಾರವು ತನ್ನನ್ನು ಎಡೆಬಿಡದಂತೆ ಕಾಡುತ್ತಿದ್ದ ಆದಿವಾಸಿಗಳನ್ನು ಮಟ್ಟಹಾಕಲು ಮತ್ತು ಸಂಪತ್ತನ್ನು ಕೊಳ್ಳೆ ಹೊಡೆಯಲು ಕ್ರಿ.ಶ. ೧೮೬೫ರಲ್ಲಿ 'ದಿ ಮದ್ರಾಸ್ ಫಾರೆಸ್ಟ್ ಆ್ಯಕ್ಟ್'ಅನ್ನು ಜಾರಿಗೆ ತಂದಿತು. ಈ ಅರಣ್ಯ ನೀತಿಯು ಅತ್ಯಂತ ಅಪಾಯಕಾರಿಯಾಗಿತ್ತು. ಜೊತೆಜೊತೆಗೆ, ಕಂಪನಿ ಸರ್ಕಾರವು ತನ್ನ ಅರಣ್ಯ ನೀತಿಯನ್ನು ಪುನರ್‌ರಚಿಸುತ್ತಲೇ ಬಂತು. ಇದರ ಅನ್ವಯ ಸರ್ಕಾರವು ೧೮೬೫ರ ಭಾರತದ ಅರಣ್ಯ ಕಾಯಿದೆಗೆ ಗುಪ್ತ ಕಾರ್ಯಸೂಚಿಯನ್ವಯ ೧೮೭೮ರಲ್ಲಿ ತಿದ್ದುಪಡಿ ತಂದು ಅರಣ್ಯಗಳನ್ನು ೧) ಕಂದಾಯ ಅರಣ್ಯಗಳು, ೨) ಸಂರಕ್ಷಿತ ಅರಣ್ಯಗಳು ಮತ್ತು ೩) ಗ್ರಾಮ ಅರಣ್ಯಗಳು ಎಂದು ವಿಭಾಗಿಸಿ ಪ್ರತಿಯೊಂದಕ್ಕೂ ತನ್ನದೇ ಆದ ನಿಯಮಗಳನ್ನು ರೂಪಿಸಿತು. ಈ ಕಾರಣದಿಂದ ಕಾಡನ್ನು ನಂಬಿ ಬಾಳುತ್ತಿದ್ದ ಗಿರಿಜನರು ಅನಿವಾರ್ಯವಾಗಿ ಕಾಡನ್ನು ಬಿಟ್ಟು ಹೊರಬೀಳಬೇಕಾಯ್ತು. 'ರಾಷ್ಟ್ರೀಯ ಉದ್ಯಾನ ಮತ್ತು ರಕ್ಷಿತ ಅರಣ್ಯ' ಎಂಬ ಹೆಸರಿನಲ್ಲಿ ರೂಪುಗೊಂಡ ಕಾನೂನುಗಳು ಬಂಡವಾಳಶಾಹಿಗಳು ಮತ್ತು ಭೂಮಾಲೀಕರ ಹಿತ ಕಾಯುವುದಕ್ಕಾಗಿಯೇ ಅನುಷ್ಠಾನಗೊಂಡಂಥವು.**

# ಆದಿವಾಸಿಗಳ ಪರಿಕಲ್ಪನೆಯಲ್ಲಿ ಅರಣ್ಯ

*ಬಡವರ ಗುಡಿಸಿಲ ಒಲವನು ಕಂಡೆ*
*ಮರಗಿಡಗಳ ಗುರುಬೋಧೆಯನುಂಡೆ*
*ತಾರಾಕಾಶದ ಶಾಂತಿಯ ಸವಿದೆ*
*ನಿರ್ಜನ ಕಾನಿನ ನಿದ್ರೆಯನೊಲಿದೆ*

**– ವೇರಿಯರ್ ಎಲ್ವಿನ್**



''ಅರಣ್ಯದಲ್ಲಿ ವಾಸಿಸುವ ಬಹುತೇಕ ಜನರು ಆದಿವಾಸಿ ಸಮುದಾಯಗಳಿಗೆ ಸೇರಿದವರಾಗಿದ್ದಾರೆ. ಇವರು ಕೇವಲ ಅರಣ್ಯವಾಸಿಗಳು ಮಾತ್ರವಲ್ಲ. ಆ ಅರಣ್ಯದ ಜೊತೆ ತಮ್ಮ ಬದುಕನ್ನು ರೂಪಿಸಿಕೊಳ್ಳುತ್ತಾ, ಇನ್ನೊಂದೆಡೆ ಅರಣ್ಯದ ಸ್ನಿಗ್ಧ ಪರಿಸರವನ್ನು ಕಾಪಾಡುತ್ತಾ, ಕಾಡುಗಳ್ಳರಿಂದ, ಕಾಳ್ಗಿಚ್ಚುಗಳಿಂದ ಅರಣ್ಯದ ಬೆಲೆಬಾಳುವ ಸಂಪತ್ತನ್ನು ಕಾಯ್ದುಕೊಂಡು ಬಂದಿದ್ದಾರೆ. ಅರಣ್ಯ ಮತ್ತು ಆದಿವಾಸಿಗಳ ಈ ಸಹಬಾಳ್ವೆಗೆ ಕುತ್ತು ಬಂದದ್ದು ವಸಾಹತು ಆಡಳಿತದ ಸಂದರ್ಭದಲ್ಲಿ. ಈ ಸಂದರ್ಭದಲ್ಲಿ ಅರಣ್ಯವು ಕಂಪನಿಯ ಆದಾಯವನ್ನು ಹೆಚ್ಚಿಸುವ ಒಂದು ಆರ್ಥಿಕ ಮೂಲವಾಗಿ ಮಾತ್ರ ಪರಿಗಣಿಸಲ್ಪಟ್ಟಿತ್ತು. ಈ ಭೂಗೋಳದ ವಾತಾವರಣವನ್ನು ಸಮತೋಲನಗೊಳಿಸುವ ಮತ್ತು ಮನುಷ್ಯನ ಬದುಕನ್ನು ಹಸನುಗೊಳಿಸುವ ಒಂದು ಜೈವಿಕ ಪ್ರಕ್ರಿಯೆ ಎಂದು ಅರಣ್ಯವನ್ನು ವಸಾಹತು ಆಡಳಿತ ಪರಿಗಣಿಸಲೇ ಇಲ್ಲ'' (ಡಾ॥ ರಾಯ್ ಬರ್ಮನ್ : ರಿಪೋರ್ಟ್ ಆಫ್ ದಿ ಕಮಿಟಿ ಆನ್ ಫಾರೆಸ್ಟ್ ಅಂಡ್ ಟ್ರೈಬಲ್ಸ್ ಇನ್ ಇಂಡಿಯಾ - ೧೯೮೨).



ಆದಿವಾಸಿಗಳಿಗೆ ಭೂಮಿ ಎಂಬುದು ತಾಯಿಯ ಪರಿಕಲ್ಪನೆಯಲ್ಲಿ ರೂಪುಗೊಂಡದ್ದು. ಪ್ರತಿ ಆದಿವಾಸಿಯೂ ಕಾಡಿನೊಂದಿಗೆ ಜೈವಿಕ ಸಂಬಂಧವನ್ನು ಸೃಜಿಸಿಕೊಂಡಿರುತ್ತಾನೆ. ಕಾಡು ಹಾಗೂ ಕಾಡಿನ ಉತ್ಪನ್ನಗಳು ಅವರಿಗೆ ತಾಯಿಯು ಕೊಟ್ಟ ಕೊಡುಗೆ. ಇದ್ದಷ್ಟನ್ನೆ ಸಮನಾಗಿ ಹಂಚಿಕೊಂಡು ತಿನ್ನಬೇಕು, ಅವರಿಗೆ ಹೆದ್ದಾಸೆ ಎಂಬುದು ಇರುವುದಿಲ್ಲ. ಆಹಾರದ ಕ್ರೋಢೀಕರಣ ಮತ್ತು ಉಳಿತಾಯದ ಕಲ್ಪನೆಯಾಗಲೀ ಇರುವುದಿಲ್ಲ. ತಾಯಿ ಎಷ್ಟು ಕೊಡುತ್ತಾಳೊ ಅಷ್ಟು ಸಾಕು : ಅದನ್ನಷ್ಟೇ ಸ್ವೀಕರಿಸಬೇಕು ಎಂಬುದು ಪ್ರಾಚೀನ ಆದಿವಾಸಿಗಳ ಕಲ್ಪನೆ. ಸಮಾನತೆ ಮತ್ತು ಸಮಾನ ಹಂಚಿಕೆ-ಸಮುದಾಯಕೇಂದ್ರಿತ ಮತ್ತು ಸಾಮೂಹಿಕ ನಿರ್ಧಾರವು ಆದಿವಾಸಿಗಳ ಲಕ್ಷಣ. ಹಾಗಂತ ಎಲ್ಲಾ ಆದಿವಾಸಿಗಳು ಒಂದೇ ಬಗೆಯ ನಡವಳಿಕೆಗಳನ್ನು ಹೊಂದಿಲ್ಲ. ಅವರು ಭಿನ್ನ- ಭಿನ್ನವಾದ ಗುಂಪುಗಳಲ್ಲಿ ಬದುಕುತ್ತಾರೆ. ಅವರ ಗುಂಪುಗಳ ನಡುವೆ ಎಷ್ಟೇ ವ್ಯತ್ಯಾಸವಿದ್ದರೂ ತಮ್ಮ ಗುಂಪೊಳಗೆ ಶ್ರೇಣಿರಹಿತವಾದ ಜೀವನವನ್ನು ನಡೆಸುತ್ತಾರೆ. ಕಾಡಿನ ಪ್ರಾಣಿಗಳನ್ನು ಅಗತ್ಯವಾದಾಗ ಮಾತ್ರ

ಬೇಟೆಯಾಡುತ್ತಾ ಮತ್ತು ಪೂಜಿಸುತ್ತಾ ಇರುವ ವೈರುಧ್ಯವನ್ನು ಗಮನಿಸಬೇಕು. ಬರಗೂರು ರಾಮಚಂದ್ರಪ್ಪನವರು ಹೇಳುವಂತೆ, ''ಕಾಡಿನಲ್ಲಿದ್ದ ಮನುಷ್ಯನು ಪ್ರಾಣಿಗಳ ಜೊತೆ ಬದುಕುತ್ತಾ ಕೆಲವನ್ನು ಸಾಕುತ್ತಾ, ಕೆಲವನ್ನು ಕೊಲ್ಲುತ್ತಾ ಇದ್ದ ವೈರುಧ್ಯ ವಿಶೇಷವಾದುದು. ಕೊಲ್ಲುವ ಕ್ರಿಯೆಯನ್ನು ಒಂದು ಅನಿವಾರ್ಯ ಆಹಾರೋತ್ಪಾದನಾ ವಿಧಾನ ಎಂದು ಭಾವಿಸಿದ್ದರಿಂದ ಅದು ಹಿಂಸೆಯ ಕಲ್ಪನೆ ಇರಲು ಸಾಧ್ಯವಿಲ್ಲ'' (ಬರಗೂರು: ಸಂಸ್ಕೃತಿ, ಪು-೨೧೨, ಗಿರಿಜನ -ಸಂಸ್ಕೃತಿ). ಹಾಗಾಗಿ ಆದಿವಾಸಿಗಳು ಹಿಂಸೆ-ಅಹಿಂಸೆಯ ಪರಿಕಲ್ಪನೆಗಿಂತ ಯಾರದೇ ಒತ್ತಡ ಹಾಗೂ ಬಿಕ್ಕಟ್ಟುಗಳಿಲ್ಲದೆ ತಮಗೆ ಅನಿಸಿದಂತೆ ಬಾಳುವ ಸ್ವಾತಂತ್ರ್ಯವನ್ನು ಹೊಂದಿದ್ದರು. ಆದಿವಾಸಿಗಳು, ''ಒಂದೇ ಭೂಮಿಯನ್ನು ನಂಬಿ ಬದುಕಿದವರಲ್ಲ, ಕುಮರಿ ಬೇಸಾಯ ಮಾಡುತ್ತ ಜಾಗದಿಂದ ಜಾಗಕ್ಕೆ ಸ್ಥಳಾಂತರವಾಗುತ್ತಿದ್ದರು. ಕುಮರಿ ಬೇಸಾಯದ ಪ್ರಮುಖವಾದ ಎರಡು ಲಕ್ಷಣಗಳೆಂದರೆ ಒಂದು, ನೇಗಿಲನ್ನು ಬಳಸದೇ ಗುದ್ದಲಿಯನ್ನು ಬಳಸುವುದು. ಎರಡು, ನಿರ್ದಿಷ್ಟ ಪ್ರದೇಶದಲ್ಲಿ ಮೂರಕ್ಕಿಂತ ಹೆಚ್ಚು ಸಲ ಬೆಳೆ ತೆಗೆಯದೆ ಮುಂದಿನ ಪ್ರದೇಶಕ್ಕೆ ಹೋಗುತ್ತಿದ್ದುದು. ಹೀಗೆ ಕಾಡು ತಮ್ಮದು ಎಂಬ ಮನೋವೈಶಾಲ್ಯದಿಂದ ಬಾಳುವ ಮೂಲಕ ಅದರ ಅಸ್ತಿತ್ವಕ್ಕೆ ಧಕ್ಕೆ ಬರದಂತೆ ಬದುಕಿದವರು'' (ಆದಿವಾಸಿ ಆಖ್ಯಾನ-ಡಾ|| ಹಿ. ಚಿ. ಬೋರಲಿಂಗಯ್ಯ. ಪು-೧೪೫). ಈ ಚಹರೆಗಳನ್ನು ಹೊಂದಿದ್ದ ಆದಿವಾಸಿಗಳು ಪ್ರಾಚೀನ ಕಾಲದಿಂದಲೂ ಕಾಡಿನಿಂದ ಎತ್ತಂಗಡಿಯಾಗುತ್ತ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾರೆ.



ಪ್ರಾಚೀನ ಪ್ರಭುತ್ವಕ್ಕೆ ಅರಣ್ಯವಾಸಿಗಳು ಒಮ್ಮೊಮ್ಮೆ ಕುತೂಹಲಕಾರಿಯಾಗಿಯೂ ಒಮ್ಮೊಮ್ಮೆ ಭಯೋತ್ಪಾದಕರಂತೆಯೂ ಕಂಡಿದ್ದರಿಂದ ಅವರನ್ನು ಪಳಗಿಸುವ ಹುನ್ನಾರಗಳನ್ನು ಹೆಣೆಯುತ್ತಲೇ ಹೋದರು. ಧರ್ಮರಕ್ಷಣೆಯ ನೆಪದಲ್ಲಿ ಅವರನ್ನು ಸೋಲಿಸುತ್ತಾ, ಅವರ ಭೂಮಿಯನ್ನು ಋಷಿ-ಪಂಡಿತರಿಗೆ ಹಂಚುತ್ತಾ ಅವರ ಗ್ರಂಥಗಳಲ್ಲಿ ಅಸದೃಶ ವ್ಯಕ್ತಿಗಳಾಗಿ ಕಾಣಿಸಿಕೊಂಡು ಪ್ರಸಿದ್ಧರಾದರು. ವಿಶ್ವಾಮಿತ್ರನು ತನ್ನ ಆಶ್ರಮ ವಿಸ್ತರಣೆಗಾಗಿ ರಾಮ-ಲಕ್ಷ್ಮಣರನ್ನು ದಶರಥನಿಂದ ಬೇಡಿ ಪಡೆಯುತ್ತಾನೆ. ಈ ಸಂದರ್ಭದಲ್ಲಿಯೇ ಸರ್ವ ಪೂಜನೀಯ ಶ್ರೀರಾಮ ಆದಿವಾಸಿಗಳು ಕಷ್ಟಪಟ್ಟು ಉಳುಮೆಗೆ ಸಿದ್ಧಪಡಿಸಿಟ್ಟುಕೊಂಡಿದ್ದ ಹಾಗೂ ಅವರು ಬಾಳುತ್ತಿದ್ದ ಭೂಮಿಯನ್ನು ಋಷಿ ಮುನಿಗಳಿಗೆ ಹಂಚುತ್ತಾ ಹೋದನು. ಇದು ಸಹಜವಾಗಿಯೇ ಆದಿವಾಸಿಗಳನ್ನು ಕೆರಳಿಸಿತು. ತಮ್ಮ ಹಕ್ಕಿನ ಭೂಮಿಗಾಗಿ ಅವರು ಋಷಿಗಳ ಆಶ್ರಮಗಳ ಮೇಲೆ ದಾಳಿ ಮಾಡತೊಡಗಿದರು. ರಾಮ ಆದಿವಾಸಿಗಳನ್ನು ರಾಕ್ಷಸರೆಂಬ ಹೆಸರಲ್ಲಿ ಕೊಲ್ಲುತ್ತಾ ಹೋಗುತ್ತಾನೆ. ಇದನ್ನು ನಮ್ಮ ಪುರಾಣಗಳು ವೈಭವೀಕರಿಸಿ ವರ್ಣಿಸುತ್ತವೆ. ನಾವು ಮತ್ತು ನಮ್ಮ ಮಕ್ಕಳು ಕೂಡ ಅದನ್ನೆ ಭಯ-ಭಕ್ತಿಯಿಂದ ಓದುತ್ತಾ ಹೋಗುತ್ತೇವೆ!

ಮಹಾಭಾರತದಲ್ಲಿ ಅರ್ಜುನನು ಖಾಂಡವ ವನವನ್ನು ಸಂತೃಪ್ತಿಯ ಹೆಸರಲ್ಲಿ ಅಗ್ನಿಗೆ ಅರ್ಪಣೆ ಮಾಡುತ್ತಾನೆ. ಈ ಸಂದರ್ಭದಲ್ಲಿ ಅಲ್ಲಿನ ಆದಿವಾಸಿಗಳಾದ ನಾಗಾ ಸಮುದಾಯದವರನ್ನು ಮೂಲೋತ್ಪಾಟನೆ ಮಾಡುತ್ತಾನೆ. ಇವೆಲ್ಲವು ಅನಾದಿ ಕಾಲದಿಂದಲೇ ಆದಿವಾಸಿಗಳನ್ನು ಒಕ್ಕಲೆಬ್ಬಿಸಿರುವುದಕ್ಕೆ ಉದಾಹರಣೆಗಳೇ ಹೊರತು ಮತ್ತೇನಲ್ಲ, ರಾಮನ ಮತ್ತು ಧರ್ಮರಾಜನ ವನವಾಸದ ದೀರ್ಘ ಪಯಣಗಳೆಲ್ಲವೂ ಆದಿವಾಸಿಗಳ ಮೇಲಿನ ದೌರ್ಜನ್ಯಕ್ಕೆ ಕಾರಣೀಭೂತವಾದವು. ಆದರೆ ಅವುಗಳಿಗೆಲ್ಲ ಶಿಷ್ಟ ರಕ್ಷಣೆಯ ಶೀರ್ಷಿಕೆ ನೀಡಲಾಯಿತಷ್ಟೆ. ಆದರೆ ಅವೆಲ್ಲವೂ ಅಂತಿಮವಾಗಿ ಆದಿವಾಸಿಗಳ ಸುಲಿಗೆ ಮತ್ತು ಶೋಷಣೆಯೇ ಆಗಿದ್ದವು.

ಆದರೆ ಆಧುನಿಕ ಪ್ರಭುತ್ವವು ತನ್ನ ದಾಳಿಯ ಸ್ವರೂಪವನ್ನು ಸೂಕ್ಷ್ಮವಾಗಿ ಬದಲಾಯಿಸಿಕೊಂಡಿತು. ಭಾರತದ ಸುಂದರ ಹಾಗೂ ಸಂಪದ್ಭರಿತವಾದ ಕಾಡನ್ನು ಲೂಟಿ ಮಾಡುವ ಅಗತ್ಯತೆಯೂ ಕಂಪನಿ ಸರ್ಕಾರಕ್ಕೆ ಇತ್ತು. ಜೊತೆಗೆ ಇದನ್ನು ಈಡೇರಿಸಿಕೊಳ್ಳುವ ಹಾದಿಯಲ್ಲಿ ವಸಾಹತು ಸರ್ಕಾರಕ್ಕೆ ಹೆಜ್ಜೆ-ಹೆಜ್ಜೆಗೂ ತೀವ್ರವಾಗಿ ಕಾಡುತ್ತಿದ್ದ ಆದಿವಾಸಿಗಳನ್ನು ಕಾಡಿನಿಂದ ಓಡಿಸುವ ಅನಿವಾರ್ಯತೆ ಇತ್ತು, ಆದ್ದರಿಂದ ಈ ಕಾರ್ಯಾಚರಣೆಗೆ 'ಆದಿವಾಸಿಗಳ ಸುಧಾರಣೆ' ಎಂಬ ಹೆಸರನ್ನು ಇಡಲಾಯ್ತು, ಆ ಮೂಲಕ ಅವರನ್ನು ಕಾಡಿನಿಂದ ನಾಡಿಗೆ, ಅನಾಗರಿಕತೆಯಿಂದ ನಾಗರಿಕತೆಯೆಡೆಗೆ ಕಂದಾಯಯ್ಯುತ್ತವೆ ಎಂಬ ಮಂತ್ರವನ್ನು ಪಠಿಸಲಾಯಿತು. ವಸಾಹತುಶಾಹಿ ಸರ್ಕಾರವು ಕಾಡು ಸರ್ಕಾರಕ್ಕೆ ಸೇರಿದ್ದು ಮತ್ತು ಅದರ ಉಪಯೋಗವು ಸರ್ಕಾರವನ್ನು ಅವಲಂಬಿಸಿದ್ದು ಎಂಬ ಮಾನವ ವಿರೋಧಿ ನಿರ್ಧಾರಕ್ಕೆ ಬಂದಿತು.

ಸ್ವಾತಂತ್ರ್ಯಾನಂತರದ ಪ್ರಜಾ ಆಡಳಿತವು ಕೂಡ ಇದಕ್ಕಿಂತ ಭಿನ್ನವಾಗಿರದೆ ಅರಣ್ಯ ಭೂಮಿಯನ್ನು ಅಭಿವೃದ್ಧಿಯ ಹೆಸರಿನಲ್ಲಿ ಲೂಟಿ ಮಾಡಿತಲ್ಲದೆ ಗಿರಿಜನರನ್ನು ಎತ್ತಂಗಡಿ ಮಾಡಿತು. ಈವತ್ತು ಆದಿವಾಸಿ ಸಮುದಾಯಗಳ ಸುಧಾರಣೆಯು ನಾಗರಿಕ ಜಗತ್ತು ಗೌರವಯುತವಾದುದು, ಕಾಡಿನ ಬದುಕು ಹೀನಾಯ ವಾದುದು ಎಂಬ ಪಶ್ಚಿಮದ ಸಿದ್ಧಾಂತವನ್ನು ಆಧುನಿಕತೆಯ ಜ್ಞಾನಸಂವೇದನೆಗಳ ಆಧಾರದ ಮೇಲೆ ಉದ್ದೇಶ ಪೂರ್ವಕವಾಗಿ ಹೇರಲಾಗುತ್ತಿದೆ. ಹಾಗಾಗಿ ಬುಡಕಟ್ಟುಗಳ ಸುಧಾರಣೆಯು ಮಾನವ ಕೇಂದ್ರಿತ ನೆಲೆಗಳಿಂದ ಸೃಜನಗೊಳ್ಳದೆ ಪಾಶ್ಚಿಮಾತ್ಯ ಪರಿಕರಗಳಿಂದ ವಿವರಣೆಗೆ ಒಳ್ಳುವುದರಿಂದ ಕಾಡನ್ನು ಉತ್ಪಾದನಾ ಕೇಂದ್ರವನ್ನಾಗಿ, ಆದಿವಾಸಿಗಳನ್ನು ಉತ್ಪಾದನಾ ವ್ಯವಸ್ಥೆಯ ವಿರೋಧಿಗಳೆಂಬಂತೆ ಕಲ್ಪಿಸಲಾಗಿದೆ. ಹಾಗಾಗಿ ಅವರನ್ನು ಅಲ್ಲಿಂದ ಹೊರಹಾಕದೆ ಈ ಉದ್ದೇಶಗಳನ್ನು ಈಡೇರಿಸಿಕೊಳ್ಳಲಾಗದು ಎಂಬ ಹಿಡನ್ ಅಜೆಂಡಾ ಗುಪ್ತವಾಗಿ ಕಾರ್ಯ ನಿರ್ವಹಿಸಿತು.

ಜೀವಕೇಂದ್ರಿತ ಮೌಲ್ಯಗಳನ್ನು ಒಳಗೊಳ್ಳದ ಆಧುನಿಕ ತಂತ್ರಜ್ಞಾನ ಹಾಗೂ ವಿಜ್ಞಾನಗಳು ಅಂತಿಮವಾಗಿ ಸಮುದಾಯಗಳ ಸಾಂಸ್ಕೃತಿಕ ಹಾಗೂ ಜೈವಿಕ ಬದುಕಿನ ಲೋಕಗಳನ್ನು ಧ್ವಂಸಗೊಳಿಸಿ ಅನಾವರಣಗೊಂಡುಬಿಟ್ಟಿರುತ್ತವೆ. ಕಾಡು ಜೀವಸಂವಾದಿತ ನೆಲೆಗಳಿಂದ ದೂರ ಹೋಗಿ ಉತ್ಪಾದನಾ ಕಾರ್ಖಾನೆಗಳಿಗೆ ಬಂಡವಾಳ ಹೂಡುವ, ಲಾಭ ಮಾಡಿಕೊಳ್ಳುವ ಕೇಂದ್ರವಾಗಿ ಬದಲಾಗುತ್ತದೆ. ಆಗ ಅನಿವಾರ್ಯವಾಗಿ ಆದಿವಾಸಿಗಳು ನಿರಾಶ್ರಿತರಾಗಿ ಎತ್ತಂಗಡಿ ಆಗಬೇಕಾಗುತ್ತದೆ. ಭಾರತದ ಸ್ವಾತಂತ್ರ್ಯಾನಂತರದ ಸುಧಾರಣಾ ಯೋಜನೆಗಳು ಅಗಾಧ ಹಸಿವಿನ ಸ್ವರೂಪದ ವಿಸ್ತರಣೆಯನ್ನು ಒಡಲಲ್ಲಿ ಸೃಜಿಸಿಕೊಂಡಿರುವುದರಿಂದಲೇ ಈವತ್ತು ಸಮುದಾಯಗಳು - ಅರಣ್ಯ ಬೇರೆ ಬೇರೆಯಾಗಿ ಕಣ್ಣಿಗೆ ಕಾಣುತ್ತಿರುವುದು.

ಆದಿವಾಸಿಗಳ ಜ್ಞಾನ ಪರಂಪರೆಯ ಆಲೋಚನಾ ಕ್ರಮದಿಂದ ಕಾಡನ್ನು ಗ್ರಹಿಸುವ ಅನಿವಾರ್ಯತೆ ಈಗ ಇದೆ. ಮಾನವ ಸಂಪನ್ಮೂಲದ ಅಂತಃಸ್ವರೂಪದಲ್ಲಿ ಕಾಡನ್ನು ಗುರುತಿಸಿದರೆ ಆಗ ಕಾಡು ಎಂಬುದು ಮನುಷ್ಯ ಮತ್ತು ಪ್ರಾಣಿಗಳ ಪರಸ್ಪರ ಸಹಕಾರದ ಸಾಂಸ್ಕೃತಿಕ ಸೃಷ್ಟಿ ಕೇಂದ್ರವಾಗಿ ಗೋಚರವಾಗುತ್ತಿತ್ತು. ಅರಣ್ಯದಲ್ಲಿ ಮನುಷ್ಯರಿರಬೇಕು ಅಥವಾ ಪ್ರಾಣಿಗಳಿರಬೇಕು ಎಂಬ ಸಾರ್ವತ್ರಿಕವಾದ ನಿಯಮವೇ ಇವತ್ತು ಆದಿವಾಸಿಗಳಿಗೆ ತೊಡಕಾಗಿರುವುದು. ಸಮುದಾಯಗಳ ಬದುಕಿನ ವಿಧಾನಕ್ಕೂ, ಕಾಡಿನ ಜೀವಂತಿಕೆಗೂ ಸಂಬಂಧವೇ ಇಲ್ಲವೆನ್ನುವ ಹಾಗೆ ಸರ್ಕಾರಗಳು ಕಾಡಿನಿಂದ ಸಮುದಾಯಗಳನ್ನು ಎತ್ತಂಗಡಿ ಮಾಡುತ್ತಿವೆ. ಕಾಡನ್ನು ಒಂದು ಜೈವಿಕ ಸಂಕುಲದ ಅಂತಃಕೇಂದ್ರವೆಂದು ಗುರುತಿಸದೆ, ಅದನ್ನು ಉತ್ಪಾದನಾ ಕೇಂದ್ರವನ್ನಾಗಿ ಗ್ರಹಿಸಿದ್ದರಿಂದ ಈ ರೀತಿಯ ವೈರುಧ್ಯ ಸಂಭವಿಸುತ್ತದೆ. ಜೊತೆಗೆ, ಪ್ರಜಾಪ್ರಭುತ್ವದ ಆಲೋಚನಾಕ್ರಮಗಳಿಂದ ಆದಿವಾಸಿಗಳನ್ನು ನೋಡುವ ಒಂದು ಕ್ರಮವೂ ನಮ್ಮಲ್ಲಿ ಜಾರಿಯಲ್ಲಿದೆ. ಅಂದರೆ ನಾಗರಿಕ ಜಗತ್ತಿನ ತಂತ್ರಜ್ಞಾನ ಹಾಗೂ ವೈಜ್ಞಾನಿಕ ವಿಧಾನಗಳಿಂದ ಆದಿವಾಸಿಗಳನ್ನು ನೋಡಲಾಗುತ್ತದೆ. ಸ್ವಾತಂತ್ರ್ಯದ ಸವಲತ್ತುಗಳು ಅವರಿಗೂ ಲಭ್ಯವಾಗಬೇಕೆಂಬ ಮಹತ್ವಾಕಾಂಕ್ಷೆಯೂ ಅದರೊಳಗೆ ಇದೆ. ಇದು ಮಹತ್ವವಾದುದು. ಆದರೆ ಸ್ವಾತಂತ್ರ್ಯದ ಸವಲತ್ತುಗಳನ್ನು ನೀಡುವುದೆಂದರೆ ಕಾಡುಗಳಿಂದ ನಾಡಿಗೆ ಸ್ಥಳಾಂತರ ಮಾಡುವುದೇ ಗುರಿ ಎಂದಾದರೆ ಅದೂ ಕೂಡ ಅಪಾಯಕಾರಿಯೇ. ಏಕೆಂದರೆ, ಕೃಷಿಯ ಅಥವಾ ಆಧುನಿಕತೆಯ ಯಾವ ಉದ್ಯೋಗವೂ ಗೊತ್ತಿಲ್ಲದ ಆದಿವಾಸಿಗಳನ್ನು ಭೂಮಿ ಮತ್ತು ಮನೆ ಕೊಟ್ಟು ಹಾಡಿಗಳಿಂದ ಸ್ಥಳಾಂತರ ಮಾಡಿದರೆ ಅವರ ಸಮಸ್ಯೆಗಳಿಗೆ ಸಮಗ್ರ ಪರಿಹಾರ ದೊರಕೀತು ಎಂದು ಭಾವಿಸುವುದು ಮೂರ್ಖತನವಾಗುತ್ತದೆ. ಅದಕ್ಕೆ ಬದಲಾಗಿ ಕಾಡಲ್ಲಿಯೇ ಗೌರವಯುತವಾಗಿ ಬದುಕಲು ಅನುಕೂಲ ಮಾಡಿಕೊಡುವ ಯೋಜನೆಯನ್ನು ರೂಪಿಸಬಹುದಾಗಿದೆ.

ಕಾನೂನುಗಳ ಮೂಲಕ ಕಾಡನ್ನು ರಕ್ಷಣೆ ಮಾಡುತ್ತೇವೆ ಹಾಗೂ ಹಿಂದುಳಿದಿರುವ

ಆದಿವಾಸಿಗಳನ್ನು ಪ್ರಧಾನ ಧಾರೆಗೆ ಸೆಳೆಯುತ್ತೇವೆ ಎಂಬ ಕಲ್ಪನೆ ಆಧುನಿಕ ಪ್ರಭುತ್ವದ್ದು. ಅರಣ್ಯಗಳನ್ನು ನಂಬಿಕೊಂಡಿರುವ ಆದಿವಾಸಿಗಳು ಗೆಡ್ಡೆ-ಗೆಣಸು, ಸೊಪ್ಪು ಸಂಗ್ರಹಣೆ, ಸಣ್ಣ ಸಣ್ಣ ಪ್ರಾಣಿಗಳನ್ನು ಮಾಂಸಾಹಾರಕ್ಕಾಗಿ ಬೇಟೆಯಾಡುವುದು, ಅರಣ್ಯದ ಉಪ ಉತ್ಪನ್ನಗಳಾದ ನವಿಲುಗರಿ, ಅದರ ತುಪ್ಪ. ಉಡದ ತುಪ್ಪ, ಬಿದಿರಿನ ಪರಿಕರಗಳು, ಬಳ್ಳಿಗಳಿಂದ ಮಾಡಿದ ವಸ್ತುಗಳು, ಕಾಡಿನ ಪ್ರಾಣಿ-ಪಕ್ಷಿಗಳನ್ನು ಪಳಗಿಸಿ ಆಡಿಸುವುದು ಮುಂತಾದವುಗಳನ್ನು ಬದುಕಿನ ಚಟುವಟಿಕೆಗಳನ್ನಾಗಿ ರೂಪಿಸಿಕೊಂಡಿದ್ದಾರೆ. ಆದರೆ ಇಂದು ನಮ್ಮ ಸರ್ಕಾರದ ಎಲ್ಲ ಕಾನೂನುಗಳು ಮೇಲಿನ ಚಟುವಟಿಕೆಗಳನ್ನು ಕಾನೂನುಬಾಹಿರ ಎಂದೇ ಘೋಷಿಸಿವೆ.

ವಸಾಹತುಶಾಹಿ ಸರ್ಕಾರವು ತನ್ನನ್ನು ಎಡೆಬಿಡದೆ ಕಾಡುತ್ತಿದ್ದ ಆದಿವಾಸಿಗಳನ್ನು ಮಟ್ಟ ಹಾಕಲು ಮತ್ತು ಸಂಪತ್ತನ್ನು ಕೊಳ್ಳೆ ಹೊಡೆಯಲು ಕ್ರಿ.ಶ. ೧೮೬೫ರಲ್ಲಿ 'ದಿ ಮದ್ರಾಸ್ ಫಾರೆಸ್ಟ್ ಆ್ಯಕ್ಟ್' ಅನ್ನು ಜಾರಿಗೆ ತಂದಿತು. ಈ ಅರಣ್ಯ ನೀತಿಯು ಅತ್ಯಂತ ಅಪಾಯಕಾರಿಯಾಗಿತ್ತು. ಜೊತೆಜೊತೆಗೆ, ಕಂಪನಿ ಸರ್ಕಾರವು ತನ್ನ ಅರಣ್ಯ ನೀತಿಯನ್ನು ಪುನರ್‌ರಚಿಸುತ್ತಲೇ ಬಂತು. ಇದರ ಅನ್ವಯ ಸರ್ಕಾರವು ೧೮೬೫ರ ಭಾರತದ ಅರಣ್ಯ ಕಾಯಿದೆಗೆ ಗುಪ್ತ ಕಾರ್ಯಸೂಚಿಯನ್ವಯ ೧೮೭೮ರಲ್ಲಿ ತಿದ್ದುಪಡಿ ತಂದು ಅರಣ್ಯಗಳನ್ನು ೧) ಕಂದಾಯ ಅರಣ್ಯಗಳು, ೨) ಸಂರಕ್ಷಿತ ಅರಣ್ಯಗಳು ಮತ್ತು ೩) ಗ್ರಾಮ ಅರಣ್ಯಗಳು ಎಂದು ವಿಭಾಗಿಸಿ ಪ್ರತಿಯೊಂದಕ್ಕೂ ತನ್ನದೇ ಆದ ನಿಯಮಗಳನ್ನು ರೂಪಿಸಿತು. ಈ ಕಾರಣದಿಂದ ಕಾಡನ್ನು ನಂಬಿ ಬಾಳುತ್ತಿದ್ದ ಗಿರಿಜನರು ಅನಿವಾರ್ಯವಾಗಿ ಕಾಡನ್ನು ಬಿಟ್ಟು ಹೊರಬೀಳಬೇಕಾಯ್ತು. 'ರಾಷ್ಟ್ರೀಯ ಉದ್ಯಾನ ಮತ್ತು ರಕ್ಷಿತ ಅರಣ್ಯ' ಎಂಬ ಹೆಸರಿನಲ್ಲಿ ರೂಪುಗೊಂಡ ಕಾನೂನುಗಳು ಬಂಡವಾಳಶಾಹಿಗಳು ಮತ್ತು ಭೂಮಾಲೀಕರ ಹಿತ ಕಾಯುವುದಕ್ಕಾಗಿಯೇ ಅನುಷ್ಠಾನಗೊಂಡಂಥವು. ನಿಸರ್ಗ ಮತ್ತು ಮಾನವ ಸಂಪನ್ಮೂಲಗಳ ಕುರಿತು ಕಿಂಚಿತ್ ಗೌರವ ಇಲ್ಲದ ಯೂರೋಪಿನ ಉಪಭೋಗವಾದಿ ಸಿದ್ಧಾಂತದಿಂದ ರೂಪುಗೊಂಡ ಅರಣ್ಯ ನೀತಿಯೇ ಮುಂದೆ ಸ್ವತಂತ್ರ ಭಾರತದ ಅರಣ್ಯ ನೀತಿಯಾಗಿ ಮುಂದುವರಿಯಿತು.

ಎಲ್ಲ ಕಾನೂನುಗಳು ಅರಣ್ಯವನ್ನು ಕಾಪಾಡಲು ರೂಪಿತಗೊಂಡಿದ್ದವು. ಆದರೆ ಸರ್ಕಾರದ ಆಂತರಂಗಿಕ ನೀತಿ ಏನಾಗಿತ್ತೆಂದರೆ ಅಂತಿಮವಾಗಿ ಆದಿವಾಸಿಗಳನ್ನು ಕಾಡಿನಿಂದ ಎತ್ತಂಗಡಿ ಮಾಡುವ ಮತ್ತು ಕಾಡಿನ ಉಸ್ತುವಾರಿಯನ್ನು ಸರ್ಕಾರ ವಹಿಸುವ ಹುನ್ನಾರಗಳೇ ಆಗಿದ್ದುವು. ವಾಸ್ತವದಲ್ಲಿ ಆದಿವಾಸಿಗಳ ಭೂಮಿಯ ಸಮಸ್ಯೆ ಎರಡು ತೆರನಾಗಿತ್ತು. ಒಂದನೆಯದು, ಸಾವಿರಾರು ವರ್ಷಗಳಿಂದ ಯಾವುದೇ ಖಾತೆ, ಕಂದಾಯವಿಲ್ಲದೆ ಅರಣ್ಯದ ಜೊತೆಗೆ ಆತ್ಮೀಯ ಒಡನಾಟವನ್ನು ಹಾಗೂ ಅಲ್ಲಿನ ಅನುಭೋಗವನ್ನು ಅನುಭವಿಸುತ್ತಿದ್ದ ಆದಿವಾಸಿಗಳು ರಾಜಪ್ರಭುತ್ವ ಮತ್ತು ವಸಾಹತುಶಾಹಿ ವ್ಯವಸ್ಥೆಯಲ್ಲಿ ಕಾನೂನುಗಳ ಕಾರಣದಿಂದ ಅದನ್ನು ಕಳೆದುಕೊಳ್ಳುವ ಅಸಹಾಯಕತೆಗೆ ಒಳಗಾದರು. ಭೂಮಿಯೂ ಇಲ್ಲ, ಆಹಾರವೂ ಇಲ್ಲ ಎನ್ನುವ ಅತಂತ್ರತೆಗೆ ಆದಿವಾಸಿಗಳು ಒಳಗಾದರು. ಎರಡನೆಯದು, ಅರಣ್ಯಗಳು ಅವರ ಕಣ್ಣೆದುರೇ ವಸಾಹತುಶಾಹಿ ಪ್ಲಾಂಟೇಷನ್‌ಗಳಾಗಿ ಬದಲಾದವು. ಗಿರಿಜನರ ಅಧೀನದಲ್ಲಿದ್ದ ಕಾಡುಗಳಲ್ಲಿ ಸ್ಥಳೀಯ ಹಾಗೂ ವಿದೇಶಿ ಮಾಲೀಕರು ಉದಯಿಸಿದರು. ಈ ಪ್ಲಾಂಟೇಷನ್‌ಗಳಲ್ಲಿ ಗಿರಿಜನರು ಕಡಿಮೆ ಸಂಬಳದ ಕೂಲಿಗಳಾಗಿ ನೇಮಕಗೊಂಡರಲ್ಲದೆ ನಿರಂತರವಾಗಿ ಶೋಷಣೆಗೆ ಒಳಗಾದರು. ಇದಕ್ಕೆ ಇನ್ನಷ್ಟು ಪೂರಕ ಎನ್ನುವಂತೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ರೂಪುಗೊಂಡ ಅಭಯಾರಣ್ಯ ಹಾಗೂ ಪ್ರವಾಸೋದ್ಯಮಗಳ ಹೆಸರಿನ ರೆಸಾರ್ಟ್‌ಗಳ ನೆಪದಲ್ಲಿ ಆದಿವಾಸಿಗಳು ಇನ್ನಷ್ಟು ನಿರ್ವಸತಿಗರಾದರು.

ಆದಾಗ್ಯೂ ಆದಿವಾಸಿಗಳ ಮತ್ತು ಅರಣ್ಯಗಳ ಆತ್ಮೀಯ ಸಂಬಂಧವನ್ನು ರೂಪಿಸಲು ಆಗಿನ ಪ್ರಧಾನ ಮಂತ್ರಿಗಳಾಗಿದ್ದ ಜವಾಹರಲಾಲ್ ನೆಹರು ಪ್ರಯತ್ನಿಸಿದ್ದರಲ್ಲದೆ, ಆದಿವಾಸಿಗಳ ಬಗ್ಗೆ ತುಂಬ ಮಹತ್ವದ ಒಳನೋಟವನ್ನು ಹೊಂದಿದ್ದರು. ಆದ್ದರಿಂದಲೇ ಅವುಗಳ ಏಳ್ಗೆಗಾಗಿ ೧೯೬೧ರಲ್ಲಿ ಧೇಬರ್ ಆಯೋಗವನ್ನು ರಚಿಸಿದ್ದರು. ಆ ನಂತರ ಬಂದ ಸರ್ಕಾರಗಳು ಹಲವು ಸಮಿತಿಗಳನ್ನು ಆದಿವಾಸಿಗಳ ಏಳ್ಗೆಗಾಗಿ ನೇಮಿಸಿದವು.

ಸಮಿತಿ ನೀಡಿರುವ ಸಲಹೆಗಳು ಈಡೇರಿದರೆ ಬಹುಶಃ ಆದಿವಾಸಿಗಳ ಸ್ವಯಂಪೂರ್ಣ ಬದುಕು ಸುರಕ್ಷಿತವಾಗಬಹುದು. ಭಾರತದ ಸರ್ವೋಚ್ಚ ನ್ಯಾಯಾಲಯವಂತೂ ಸಮತಾ ಪ್ರಕರಣದಲ್ಲಿ (೧೯೯೭) ಆದಿವಾಸಿಗಳ ಭೂ ಒಡೆತನವನ್ನು ಕುರಿತು ಸುದೀರ್ಘ ತೀರ್ಪು ನೀಡಿ ಭೂಮಿಯು ಆದಿವಾಸಿಗಳಿಗೆ ಸಹಜವಾಗಿ ದತ್ತವಾದ ಅತ್ಯಂತ ಬೆಲೆ ಬಾಳುವ ಆಸ್ತಿ. ಅದು ಆದಿವಾಸಿಗಳ ಸ್ಥಿರಾಸ್ತಿ, ಭೂ ಒಡೆತನದಿಂದ ಆದಿವಾಸಿಗಳು ಸಾಮಾಜಿಕ ಘನತೆ, ಸಮಾನತೆ ಮತ್ತು ಆರ್ಥಿಕ ಸಬಲತೆಯನ್ನು ಹೊಂದುತ್ತಿದ್ದಾರೆ. ಈ ಕಾರಣಕ್ಕಾಗಿ ಆದಿವಾಸಿಗಳ ಭೂಮಿಯನ್ನು ಸಂವಿಧಾನ ರಕ್ಷಿಸಬೇಕು'' ಎಂದು ಸ್ಪಷ್ಟವಾಗಿ ಹೇಳುತ್ತದೆ. ಒಂದು ಕಾಲಕ್ಕೆ ನೈಜ ಭೂ ಮಾಲೀಕರೂ ಹಾಗೂ ಕಾಡಿನ ವಾರಸುದಾರರೂ ಆಗಿದ್ದ ಆದಿವಾಸಿಗಳ ಬದುಕನ್ನು ರಕ್ಷಿಸುವ ದಿಶೆಯಲ್ಲಿ ಈ ತೀರ್ಪು ಮಹತ್ವದ್ದು ಎಂದೆನಿಸುತ್ತದೆ. ಯಾವುದೇ ಸಮುದಾಯಗಳ ಸಾಂಸ್ಕೃತಿಕ ಸಮಷ್ಟಿಯ ವಿವೇಕದೊಂದಿಗೆ ಅವರ ಸುಧಾರಣೆ ಹಾಗೂ ಬದುಕಿನ ವಿನ್ಯಾಸಗಳನ್ನು ಪ್ರೋತ್ಸಾಹಿಸಬೇಕು. ಅರಣ್ಯವನ್ನು ಮುಂದಿನ ಪೀಳಿಗೆಗೆ ಉಳಿಸಬೇಕು, ಸಂರಕ್ಷಿಸಬೇಕು ಎನ್ನುವುದು ಸರಿಯಾದುದೇ. ಆದರೆ ಅರಣ್ಯದಿಂದ ಆದಿವಾಸಿಗಳನ್ನು ಹೊರಹಾಕಿ ಅರಣ್ಯ ಉಳಿಸಬೇಕು ಎನ್ನುವುದು ಸರಿಯಾದ ಕ್ರಮವಲ್ಲ. ಹೋಗಲಿ ಒಳಗೆ ಬರುತ್ತಿರುವವರಾದರೂ ಯಾರು? ಗುತ್ತಿಗೆದಾರರು, ವ್ಯಾಪಾರಿಗಳು, ಮಧ್ಯವರ್ತಿಗಳು, ಕಾಡನ್ನು ಪರಂಪರಾನುಗತ ಬದುಕನ್ನಾಗಿ ನೋಡದವರು, ಕಾಡನ್ನು ಲಾಭದಾಯಕ ಧಂಧೆಯನ್ನಾಗಿ ರೂಪಿಸಿಕೊಂಡವರು. ಈ ಕಾರಣದಿಂದಲೇ ಗುತ್ತಿಗೆದಾರರು ಹಾಗೂ ಗಿರಿಜನರ ನಡುವಿನ ವೈರುಧ್ಯವನ್ನಾಗಿ ಕಾಡನ್ನು ನೋಡ ಬೇಕಾಗುತ್ತದೆ. ಆದರೆ ಸರ್ಕಾರದ ನೀತಿ ನಿರೂಪಣಾಕಾರರು ಈಗ ಯಾರ ಹಿತ ಕಾಯುತ್ತಿದ್ದಾರೆ ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿಯೇ. ಮಹಾಶ್ವೇತಾದೇವಿಯವರು ಹೇಳುವಂತೆ, ''ಅರಣ್ಯಕ್ಕೆ ಯಾವ ಕೇಡನ್ನೂ ಉಂಟುಮಾಡದ ಆದಿವಾಸಿಗಳಿಗಿಂತ ಬಂಡವಾಳ ಹೂಡಿ ಅರಣ್ಯವನ್ನು ಸರ್ವನಾಶಮಾಡುವ, ತನ್ನ ಪಾಪವನ್ನು ಮುಚ್ಚಿಕೊಳ್ಳಲು ಭಗವದ್ಗೀತೆಯನ್ನು ಪ್ರಿಂಟ್ ಮಾಡಿ ಹಂಚುವ ಬಿರ್ಲಾನಂತಹ ಬಂಡವಾಳಶಾಹಿಯು ಸರಕಾರಕ್ಕೆ ಪ್ರಿಯನಾಗಿರುತ್ತಾನೆ. ಹಾಗಾಗಿಯೇ ಸಿಂಗಭೂಮ್ ಜಿಲ್ಲೆಯಲ್ಲಿ ಗ್ರಾಸಿಂ ಕಾರ್ಖಾನೆಗೆ, ಕಬ್ಬಿಣದ ಅದಿರನ್ನು ಗಣಿಗಾರಿಕೆಗೆ, ಬಿರ್ಲಾ ಸಿಮೆಂಟ್‌ಗೆ ಅರಣ್ಯಭೂಮಿಯನ್ನು ಕೊಡಲಾಗಿದೆ. ಆದರೆ ಆದಿವಾಸಿಗಳಿಗೆ ಜಮೀನು ಇಲ್ಲ ಎನ್ನಲಾಗುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರದ ಆಲೋಚನಾ ಕ್ರಮ ಏನು ಎಂಬುದು ಯಾರಿಗಾದರೂ ಅರ್ಥವಾದೀತು.''

ಆಧುನಿಕ ಜಗತ್ತಿನಲ್ಲಿ ಅನಾಥರಾದಂತೆ ಕಾಣುತ್ತಿರುವ ಆದಿವಾಸಿಗಳು ಕೇವಲ ತಮ್ಮ ಭೂಮಿಯಿಂದ ಮಾತ್ರ ವಿಮುಖರಾಗುತ್ತಿದ್ದೇವೆ ಎಂಬ ಆತಂಕದಿಂದಿಲ್ಲ. ಅದರ ಜೊತೆ-ಜೊತೆಗೆ ಮೇಲಿನ ಎಲ್ಲಾ ಸಮಸ್ಯೆಗಳು ಅವರನ್ನು ಕಾಡುತ್ತಿವೆ. ಆದಿವಾಸಿಗಳು ಆಧುನಿಕ ಜಗತ್ತಿನ ತಂತ್ರಜ್ಞಾನದ ವೇಗಕ್ಕೆ ತಕ್ಷಣಕ್ಕೆ ಹೊಂದಿಕೊಳ್ಳಲು ಆಗುವುದಿಲ್ಲ, ನಿಜ. ಆದರೆ ಆಧುನಿಕತೆ ಎಂಬುದು ಆದಿವಾಸಿಗಳ ಬದುಕನ್ನು ಛಿದ್ರಗೊಳಿಸುವಂತೆ ಮತ್ತು ದುಃಸ್ವಪ್ನದಂತೆ ಕಾಡುವ ಪ್ರಕ್ರಿಯೆ ಆಗಬಾರದು. ಅದು ಅವರ ಬದುಕನ್ನು ಮತ್ತಷ್ಟು ಹಸನುಗೊಳಿಸುವಂತೆ ಆಗಬೇಕು. ಆದರೆ ಇನ್ನೊಂದು ರೀತಿಯ ಸವಾಲು ಕೂಡ ಆದಿವಾಸಿಗಳ ಎದುರಿಗಿದೆ. ಅದೆಂದರೆ, ಆದಿವಾಸಿಗಳಿಗೆ ಕಾಡು ಹಾಗೂ ಕಾಡಿನ ಉತ್ಪನ್ನಗಳು ಜೀವನ ಸಾಗಿಸಲು ಸಾಕೇ ಎಂಬುದು. ಆಗ ಅನಿವಾರ್ಯವಾಗಿ ಆದಿವಾಸಿಗಳು ಹೊರ ಲೋಕದೊಂದಿಗೆ ಸಂಪರ್ಕ ಬೆಳೆಸಲು ಹವಣಿಸುತ್ತಾರೆ. ಆಗ ಅರಣ್ಯವಾಸಕ್ಕಿಂತ ಹೊರ ಜಗತ್ತು ತುಂಬ ಸುಂದರವಾಗಿ ಕಾಣತೊಡಗುತ್ತದೆ. ಆಧುನಿಕತೆಯ ಮಾಯಾಂಗನೆ ತನ್ನ ಬಣ್ಣದ ನೃತ್ಯದಿಂದ ಸೆಳೆಯತೊಡಗುತ್ತಾಳೆ. ಆಗ ನಾಗರಿಕ ಜಗತ್ತಿನಲ್ಲಿ ಇನ್ನೊಂದು ಬಗೆಯ ಶೋಷಣೆಗೆ ಈ ಸಮುದಾಯಗಳು ಒಳಗಾಗುತ್ತವೆ.

ಈ ಶೋಷಣೆಯನ್ನು ತಪ್ಪಿಸಲು ಅಂತಿಮವಾಗಿ ಇರುವ ದಾರಿಯೆಂದರೆ ಕಾಡಿನ ಬಗೆಗಿನ ಆದಿವಾಸಿಗಳ ಗ್ರಹಿಕೆ ಹಾಗೂ ಜ್ಞಾನ ಪರಂಪರೆಯ ಅರಿವಿನ ವಿಸ್ತಾರದಲ್ಲಿಯೇ ಅವರನ್ನು ಬದುಕಲು ಬಿಡಬೇಕು. ಭಿನ್ನ-ಭಿನ್ನ ಆದಿವಾಸಿಗಳು ಭಿನ್ನ ರೀತಿಯ ಜೀವನ ಶೈಲಿಗಳನ್ನು, ಆದ್ಯತೆಗಳನ್ನು ಹೊಂದಿರುವುದರಿಂದ ಅವರ ಅಭಿವೃದ್ಧಿಗಾಗಿ ರೂಪಿಸುವ ನೀತಿಗಳು ಏಕ ಸೂತ್ರದಿಂದ ಬಂಧಿತವಾದರೆ ಅದು ಅಪಾಯಕಾರಿ ಹೆಜ್ಜೆಯಾಗುತ್ತದೆ. ಆಯಾ ಸಮುದಾಯಗಳ ಅಗತ್ಯತೆಗಳಿಗನುಗುಣವಾಗಿ ಅವರ ಸಮಗ್ರ ಪಾಲ್ಗೊಳ್ಳುವಿಕೆಯಿಂದ ಅಭ್ಯುದಯದ ದಾರಿಗಳನ್ನು ರೂಪಿಸಬೇಕಾಗುತ್ತದೆ. ಆಗ ಮಾತ್ರ ಕಾಡು ಹಾಗೂ ಆದಿವಾಸಿಗಳು ಜೊತೆ-ಜೊತೆಯಾಗಿ ಉಳಿಯುತ್ತಾರೆ.

ಈ ಲೇಖನ ಮುಗಿಸುವ ಮುನ್ನ ಮಹಾಶ್ವೇತಾದೇವಿಯವರ **ಯಾರದೀ ಕಾಡು** ಕಾದಂಬರಿಯ **ಬಿರ್ಸಾ ಮುಂಡಾ**ನ ಮಾತುಗಳನ್ನು ಗಮನಿಸೋಣ. ಆತ, ''ಈ ಕಾಡಿನ ನೆಲವೆಲ್ಲ ಮತ್ತೆ ನಮಗೆ ದಕ್ಕುತ್ತದೆ. ಈ ಭೂಮಿ ಮೊದಲು ಹಸುಗೂಸಿನ ಶರೀರದಂತೆ ಲಾಸ್ಯ ವಾಡುತ್ತಿತ್ತು. ಈಗ ಮತ್ತೆ ಹಾಗೆಯೇ ಇರುತ್ತದೆ. ಈ ಭೂಮಿಯ ಮೇಲೆ ಬಡ್ಡಿ ವ್ಯಾಪಾರಿಗಳಿರುವುದಿಲ್ಲ. ದಿಕೂ ಸಾವುಕಾರ್ರೂ ಇರುವುದಿಲ್ಲ. ಬಿಳಿ ದೊರೆಗಳಿರುವುದಿಲ್ಲ. ಕಾಡೆಲ್ಲ ನಮ್ಮದೇ, ಬೆಟ್ಟಗಳೆಲ್ಲ ನಮ್ಮವೇ'' ಎನ್ನುತ್ತಾನೆ. ಇದು ಆದಿವಾಸಿಗಳ ಆಲೋಚನಾ ಕ್ರಮ ಕೂಡ.

**ಡಾ|| ಮೋಹನ ಚಂದ್ರಗುತ್ತಿ**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಸಹ್ಯಾದ್ರಿ ಕಲಾ ಮತ್ತು ವಾಣಿಜ್ಯ ಕಾಲೇಜು
ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ - ೫೭೭ ೨೦೩

# ದೊಡ್ಡವರ ದಾರಿ



ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸುವ 'ಪ್ರಬುದ್ಧ ಕರ್ನಾಟಕ' ಮೂಲತಃ ಸಾಹಿತ್ಯ ಪತ್ರಿಕೆಯಾದರೂ ವಿಜ್ಞಾನ ಲೇಖನಗಳನ್ನು ಪ್ರಕಟಣೆಗೆ ಸ್ವೀಕರಿಸುತ್ತದೆ. ಆ ಪತ್ರಿಕೆ ೧೯೬೯ರಲ್ಲಿ ತನ್ನ ಚಿನ್ನದ ಹಬ್ಬವನ್ನು ಆಚರಿಸಿದಾಗ ಹೊರತಂದ ವಿಶೇಷ ಸಂಚಿಕೆಯಲ್ಲಿ ಸಹಜವಾಗಿಯೇ ಒಂದು ಸಾಹಿತ್ಯ ಸಂಪುಟ ಮತ್ತು ಒಂದು ವಿಜ್ಞಾನ ಸಂಪುಟ ಇದ್ದುವು. ಆ ವಿಜ್ಞಾನ ಸಂಪುಟ ೧೫೬೦ ಪುಟಗಳಷ್ಟಾಯಿತು. ಆದರಿಂದ ಉತ್ತೇಜಿತರಾದ ಸಂಪಾದಕ ಮಂಡಲಿಯವರು ವಿಜ್ಞಾನಕ್ಕೇ ಮೀಸಲಾದ ವಿಜ್ಞಾನ ಕರ್ನಾಟಕ ಎಂಬ ತ್ರೈಮಾಸಿಕವನ್ನು ಪ್ರಾರಂಭಿಸಿದರು. ನಾನು ಅದರ ಸಂಪಾದಕನಾದೆ.

ಅಲ್ಲಿಂದ ಕೆಲವೇ ತಿಂಗಳುಗಳಲ್ಲಿ, ಮೇ ತಿಂಗಳ ೧೦ರಂದು, ಕನ್ನಡ ವಿಜ್ಞಾನ ಬರಹದ ಆದ್ಯ ಪ್ರವರ್ತಕರಲ್ಲೊಬ್ಬರಾದ ಆರ್. ಎಲ್. ನರಸಿಂಹಯ್ಯನವರು ನಿಧನ ಹೊಂದಿದರು. ಅವರ ನೆನಪಿಗಾಗಿ ವಿಜ್ಞಾನ ಕರ್ನಾಟಕದ ವಿಶೇಷ ಸಂಚಿಕೆಯನ್ನು ಹೊರತರುವುದು ಉಚಿತ ವೆನಿಸಿದ್ದರಿಂದ ಅವರನ್ನು ಕುರಿತ ಲೇಖನಗಳಿಗಾಗಿ ಅನೇಕ ಹಿರಿಯರಿಗೆ ಪತ್ರಗಳನ್ನು ಬರೆದೆ. ವಿದ್ಯಾರ್ಥಿ ದೆಸೆಯಲ್ಲಿ ಅವರ ಸಹಪಾಠಿಯಾಗಿದ್ದು, ಅನಂತರ ಅನೇಕ ವರ್ಷಗಳ ಕಾಲ ಅವರ ನಿಕಟವರ್ತಿಯಾಗಿದ್ದ ನಿಟ್ಟೂರು ಶ್ರೀನಿವಾಸ ರಾಯರಿಗೂ ಒಂದು ಪತ್ರ ಹೋಯಿತು. ಕರ್ನಾಟಕದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದ ನಿಟ್ಟೂರರು, ನಿವೃತ್ತರಾದ ತರುವಾಯ, ನವದೆಹಲಿಯಲ್ಲಿ ವಿಜಿಲೆನ್ಸ್ ಕಮೀಷನರ್ ಆಗಿದ್ದರು. ಅವರು ಆಗ ತುಂಬ ಕೆಲಸದಲ್ಲಿದ್ದರೋ ಏನೋ, ಕೂಡಲೇ ಉತ್ತರ ಕೊಡಲಿಲ್ಲ. ಒಂದು ವಾರದ ನಂತರ ನಾನು ಬರೆದ ಇನ್ನೊಂದು ಪತ್ರಕ್ಕೂ ಕೂಡಲೇ ಜವಾಬು ಬರಲಿಲ್ಲ. ಬೇಸರಗೊಂಡ ನಾನು, ಸ್ವಲ್ಪ ದುಡುಕಿ, ''ಬಂದ ಪತ್ರಗಳಿಗೆ ವಾರಗಟ್ಟಲೆ ಜವಾಬು ಕೊಡದಿರುವುದು ಸಜ್ಜನಿಕೆಯಲ್ಲ'' ಎಂದು ಬರೆದುಬಿಟ್ಟೆ. ಅನಂತರ, ಸಾವಧಾನವಾಗಿ ಯೋಚಿಸಿದಾಗ, ನಾನು ಹಾಗೆ ಉದ್ಧಟತನದಿಂದ ವರ್ತಿಸಬಾರದಾಗಿತ್ತು ಅನ್ನಿಸಿ ಪರಿತಪಿಸಿದೆ. ಆದರೇನು ? ವಿಷಯ ಕೈ ಮೀರಿತ್ತು.

ಎರಡು ಮೂರು ದಿನಗಳಲ್ಲಿ, ''ಇಷ್ಟರಲ್ಲೇ ಲೇಖನ ಕಳುಹಿಸುತ್ತೇನೆ'' ಎಂಬ ಒಂದು ತಂತಿ ಸಂದೇಶ ಅವರಿಂದ ಬಂತು. ಕೆಲವು ದಿನಗಳ ನಂತರ ಮುದ್ದಾದ ಲೇಖನ ನನ್ನ ಕೈಸೇರಿತು. ಅದನ್ನು ಒಳಗೊಂಡ ವಿಶೇಷ ಸಂಚಿಕೆಯನ್ನೂ ನಮ್ಮಲ್ಲಿದ್ದ ಪದ್ಧತಿಯಂತೆ ಲೇಖನದ ೨೫ ಬಿಡಿ ಅಚ್ಚುಗಳನ್ನೂ ಅವರಿಗೆ ಕಳುಹಿಸಿಕೊಟ್ಟೆ.

ಇಷ್ಟೆಲ್ಲ ನಡೆದು ಎರಡು ಮೂರು ತಿಂಗಳಾಗಿರಬಹುದು. ಒಂದು ಭಾನುವಾರ ಪ್ರಾತಃಕಾಲ, ಸ್ನಾನ ಉಪಾಹಾರಾದಿಗಳನ್ನು ಪೂರೈಸಿದ ತರುವಾಯ, ನಾನು ಸ್ನೇಹಿತರೊಬ್ಬರ ಭೇಟಿಗಾಗಿ ನಮ್ಮ ಮನೆಯ ಹತ್ತಿರದಲ್ಲೇ ಇರುವ ಬಸ್‌ಸ್ಟಾಪ್‌ಗೆ ಹೋಗಿ ಬಸ್‌ಗೆ ಕಾಯುತ್ತ ನಿಂತಿದ್ದೆ. ನಮ್ಮ ಮನೆಯ ಕೆಲಸದ ಹುಡುಗಿ ಬಂದು, ''ನೀವು ಮನೆಗೆ ಬರಬೇಕಂತೆ, ನಿಮ್ಮನ್ನು ಕಾಣಲು ಯಾರೋ ಬಂದಿದ್ದಾರೆ'' ಎಂದಳು. ನಾನು ಮನೆಗೆ ಹಿಂದಿರುಗಿದೆ. ವರಾಂಡಾದಲ್ಲಿ ಕೆ. ವಿ. ರಾಘವಾಚಾರ್ ಅವರೂ, ನಿಟ್ಟೂರು ಶ್ರೀನಿವಾಸರಾಯರೂ ಕುಳಿತಿದ್ದರು. ನಿಟ್ಟೂರರು ಎದ್ದುನಿಂತು, ಕೈ ಮುಗಿದು, ''ನಾನು ನಿಟ್ಟೂರು ಶ್ರೀನಿವಾಸರಾವ್. ಏತಕ್ಕೋ ಮೈಸೂರಿಗೆ ಬರಬೇಕಾಗಿತ್ತು, ಬಂದೆ. ನಿಮ್ಮನ್ನು ಕಾಣಬಹುದಲ್ಲಾ ಅನ್ನಿಸಿತು. ರಾಘವಾಚಾರ್ಯರು ನಿಮ್ಮ ಮನೆ ತೋರಿಸುವುದಾಗಿ ಹೇಳಿ ನನ್ನನ್ನು ಕರೆದುಕೊಂಡು ಬಂದರು. ನಿಮ್ಮ ಪರಿಚಯ ಪತ್ರವ್ಯವಹಾರದ ಮೂಲಕ ಮಾತ್ರ ಆಗಿತ್ತು. ಮುಖ ಪರಿಚಯದ ಲಾಭ ಇವತ್ತು ದೊರೆಯಿತು'' ಎಂದರು. ನಾನು ಅವರೊಡನೆ ಕುಳಿತು ಅರ್ಧಗಂಟೆ ಮಾತನಾಡಿ, ಅವರಿಗೆ ಶೈತ್ಯೋಪಚಾರ ಮಾಡಿ ಬೀಳ್ಕೊಟ್ಟೆ. ನೇರವಾಗಿಯಾಗಲೀ ಪರೋಕ್ಷವಾಗಿಯಾಗಲೀ ನನ್ನ ದುಡುಕುತನದ ಪ್ರಸ್ತಾಪವನ್ನೇ ಅವರು ಮಾಡಲಿಲ್ಲ.

ಅಷ್ಟು ಮಾತ್ರವಲ್ಲ; ಅನಂತರ ನಾಲ್ಕಾರು ತಿಂಗಳುಗಳಿಗೊಮ್ಮೆ ಅವರು ಮೈಸೂರಿಗೆ ಬರುವ ಸಂದರ್ಭ ಒದಗಿಬಂದು ಇಲ್ಲಿಗೆ ಬರುತ್ತಲೇ ಇದ್ದರು. ಪ್ರತಿಯೊಂದು ಸಲವೂ ನಮ್ಮ ಮನೆಗೆ ಬಂದು ನನ್ನನ್ನು ಮಾತನಾಡಿಸಿಕೊಂಡು ಹೋಗುತ್ತಿದ್ದರು. ಅವರು ವಯಸ್ಸಿನಲ್ಲಿ ನನಗಿಂತ ಸುಮಾರು ಇಪ್ಪತ್ತು ವರ್ಷಗಳಷ್ಟು ಹಿರಿಯರು, ಸಮಾಜದಲ್ಲಿ ಗಣ್ಯ ಸ್ಥಾನಗಳಲ್ಲಿದ್ದವರು. ನನ್ನ ಉದ್ಧಟತನದ ವರ್ತನೆಯನ್ನು ನಿರ್ಲಕ್ಷಿಸಿ ನನ್ನೊಡನೆ ಸ್ನೇಹಭಾವದಿಂದ ನಡೆದುಕೊಂಡದ್ದನ್ನು ನೆನಸಿಕೊಂಡಾಗಲೆಲ್ಲಾ ನಾನು ಮನಸ್ಸಿನಲ್ಲಿಯೇ ಅವರಿಗೆ ನಮಿಸಿದ್ದೇನೆ.

ನಿಟ್ಟೂರರ ದೊಡ್ಡತನವನ್ನೂ ವಿನಯ ವಂತಿಕೆಯನ್ನೂ ಎತ್ತಿ ತೋರಿಸುವ ಇನ್ನೊಂದು ವಿಷಯವನ್ನು ಹಿರಿಯರಾದ ಪ್ರೊ॥ ಎ. ಎನ್. ಮೂರ್ತಿರಾಯರು ಒಮ್ಮೆ ನನಗೆ ಹೇಳಿದರು. ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದಾಗ ಅವರು ಕೆಲವೊಮ್ಮೆ ಇನ್‌ಚಾರ್ಜ್ ರಾಜ್ಯಪಾಲರಾಗಿರುತ್ತಿದ್ದರು. ಆಗ ಅವರು ಕಾರ್‌ನಲ್ಲಿ ಎಲ್ಲಿಗಾದರೂ ಹೋಗಬೇಕಾದಾಗ, ಅವರ ಜೊತೆಗೆ ಯಾರೂ ಇಲ್ಲದಿದ್ದರೆ ಒಬ್ಬರೇ ಕಾರಿನ ಹಿಂದಿನ ಸೀಟ್‌ನಲ್ಲಿ ಕುಳಿತುಕೊಳ್ಳಲು ಮುಜುಗರಪಟ್ಟು, ಮುಂದಿನ ಸೀಟಿನಲ್ಲಿ ಡ್ರೈವರ್ ಜೊತೆಗೇ ಕುಳಿತುಕೊಂಡು ಪ್ರಯಾಣ ಮಾಡುತ್ತಿದ್ದರಂತೆ.

**ಪ್ರೊ॥ ಜೆ. ಆರ್. ಲಕ್ಷ್ಮಣರಾವ್**
'ಮೈತ್ರಿ', ೧೨ನೇ ಮುಖ್ಯರಸ್ತೆ, ಸರಸ್ವತೀಪುರ
ಮೈಸೂರು - ೫೭೦ ೦೦೯

# ಸಾಹಿತ್ಯದಲ್ಲಿ ಪ್ರಾದೇಶಿಕತೆಯ ಆಶ

ಶೋಭಾ ನಾಯಕ

ಒಂದು ನಿರ್ದಿಷ್ಟ ಭೌಗೋಲಿಕ ಪರಿಸರಕ್ಕೆ ಸಂಬಂಧಿಸಿದಂತೆ ಪ್ರಾಕೃತಿಕ, ಭೌಗೋಲಿಕ, ಜೈವಿಕ ಲಕ್ಷಣಗಳು ಮತ್ತು ಜೀವನ ವಿಧಾನಗಳನ್ನು ಪ್ರತಿಫಲಿಸುವ ಎಲ್ಲ ಸಂಗತಿಗಳನ್ನು ನಾವು ಪ್ರಾದೇಶಿಕತೆಯಲ್ಲಿ ಗುರುತಿಸುತ್ತೇವೆ. ರಾಜ್ಯಶಾಸ್ತ್ರದಲ್ಲಿ 'ರೀಜನ್' ಎಂಬ ಪದ ಹಳ್ಳಿಯ ಕುರಿತಾಗಿಯೂ ಇರಬಹುದು. ಈ ಪ್ರತ್ಯೇಕ ಭಾಗದ ಭಾಷೆ, ಸಂಸ್ಕೃತಿ, ಸಂಪ್ರದಾಯಗಳು, ನಂಬಿಕೆಗಳು ಉಳಿದ ಭಾಗದವರಿಗಿಂತ ಪ್ರತ್ಯೇಕವಾಗಿರುತ್ತವೆ. ಪ್ರಾದೇಶಿಕತೆಯನ್ನು ಸಕಾರಾತ್ಮವಾಗಿ ಅರ್ಥೈಸಿಕೊಂಡರೆ, ಅದೊಂದು ಪ್ರದೇಶದ ಮೇಲಿನ ಅತಿಯಾದ ಪ್ರೀತಿ ಎನ್ನಬಹುದು.



ಸಾಹಿತ್ಯ ಮತ್ತು ಪ್ರಾದೇಶಿಕತೆ ಎರಡೂ ಒಂದರೊಡನೊಂದು ಹೆಣೆದುಕೊಂಡು ಬಂದಿವೆ. ಹಲವು ಭಿನ್ನ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಕತೆ, ಕಾದಂಬರಿ ಮೂಲಕ ಹೆಚ್ಚು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಒಂದು ಪ್ರಾದೇಶಿಕ ಸಂಸ್ಕೃತಿಯ ಒಳ-ಹೊರಗನ್ನು, ಅಲ್ಲಿಯ ಬದುಕಿನ ವಿಭಿನ್ನ ಅರಿವನ್ನು ಅಲ್ಲಿನ ಜನರು ಮಾತ್ರ ಅಧಿಕೃತವಾಗಿ ಹೇಳಬಲ್ಲವರಾಗಿರುತ್ತಾರೆ. ಆಯಾ ಪ್ರದೇಶದ ಬರಹಗಾರರು ತಮ್ಮ ಬರಹಗಳ ಮೂಲಕ ತಮ್ಮ ಪ್ರಾದೇಶಿಕತೆಯ ಸೊಗಸನ್ನು, ವಿಭಿನ್ನ ಸಮುದಾಯ ಪರಿಸರದ ಅರಿವನ್ನು ತಮ್ಮ ಸಾಹಿತ್ಯದಲ್ಲಿ ಚಿತ್ರಿಸಿ ಅದನ್ನು ಓದುಗರಿಗೆ ಪರಿಚಯಿಸುತ್ತಾರೆ. ಹೀಗೆ ಓದುಗರಿಗೆ ಹೊಸ ಹೊಸ ಪ್ರಾದೇಶಿಕತೆಯ ಪರಿಚಯ ಸಾಹಿತ್ಯದ ಮೂಲಕ ಆಗುತ್ತದೆ. ಜೊತೆಗೆ, ಕೆಲವೊಮ್ಮೆ ಓದುಗರನ್ನು ಆ ತಾಣಗಳಿಗೆ ಹೋಗುವಂತೆ ಕೂಡ ಕೃತಿಗಳು ಪ್ರೇರೇಪಿಸುವುದರಲ್ಲಿ ಸಂಶಯವಿಲ್ಲ. ಯಾಕೆಂದರೆ, ಸಾಂಸ್ಕೃತಿಕ-ಭೌಗೋಲಿಕ ಭಿನ್ನತೆಯುಳ್ಳ ಪ್ರದೇಶಗಳು ಓದುಗರ ಮನಸ್ಸನ್ನು ತಮ್ಮತ್ತ ಸಹಜವಾಗಿಯೇ ಸೆಳೆಯುತ್ತವೆ. ಬರಹಗಾರ ಎಷ್ಟು ಗಟ್ಟಿಯಾಗಿ ಪ್ರಾದೇಶಿಕತೆಯನ್ನು ಬಿಂಬಿಸಿದ್ದಾನೆ ಎಂಬುದನ್ನು ಓದುಗರ ಪ್ರತಿಕ್ರಿಯೆಗಳ ಮೂಲಕ ತಿಳಿದುಕೊಳ್ಳಬಹುದು. ಆದ್ದರಿಂದ ಸಾಹಿತ್ಯ ಮತ್ತು ಪ್ರಾದೇಶಿಕತೆ ಎರಡೂ ಒಂದಕ್ಕೊಂದು ಅಂಟಿಕೊಂಡು ಬಂದಿರುವುದನ್ನು ನಾವು ಹಲವಾರು ಲೇಖಕರ ಕತೆ, ಕಾದಂಬರಿ, ನಾಟಕಗಳಲ್ಲಿ ಕಾಣಬಹುದಾಗಿದೆ. ಸಾಹಿತ್ಯ ಬೆಳೆಯುತ್ತಾ ಬಂದಂತೆ ಪ್ರಾದೇಶಿಕತೆ ಅದರಲ್ಲಿ ಲೀನವಾಗುತ್ತಾ ಬಂದಿದೆ. ನಮಗೆ ಗೊತ್ತಿಲ್ಲದ ಎಷ್ಟೋ ಹೊಸ ಸಂಗತಿಗಳನ್ನು, ಊರುಗಳನ್ನು, ನಂಬಿಕೆಗಳನ್ನು, ಸಂಪ್ರದಾಯಗಳನ್ನು ಸಾಹಿತ್ಯದ ಮೂಲಕ ತಿಳಿದುಕೊಳ್ಳಬಹುದಾಗಿದೆ. ಪ್ರಾದೇಶಿಕತೆಯೆನ್ನುವುದು ಬರಹಗಾರನ ಅನುಭವ ಅಭಿವ್ಯಕ್ತಿಯ ಕೌಶಲ್ಯದಿಂದಾಗಿ ಸಾಹಿತ್ಯದ ಮೂಲಕ ವ್ಯಕ್ತವಾಗುತ್ತದೆ.

ಸಾಹಿತ್ಯದ ಸೌಂದರ್ಯ ಇಮ್ಮಡಿಯಾಗುವಲ್ಲಿ ಪ್ರಾದೇಶಿಕತೆಯ ಪಾತ್ರ ಬಹಳಷ್ಟಿದೆ. ಆಯಾ ಪ್ರದೇಶದ ನುಡಿಗಟ್ಟುಗಳು, ಗಾದೆ ಮಾತುಗಳು ಆಯಾ ಪ್ರದೇಶದ ಬರಹಗಾರನ ಸಾಹಿತ್ಯ ಕೃತಿಗೆ ಮೆರಗು ತಂದುಕೊಡುತ್ತವೆ. ಇನ್ನು ಕೆಲವು ಸಾಹಿತ್ಯದ ಕೃತಿಗಳಲ್ಲಿ ಪ್ರಾದೇಶಿಕ ಭಾಷೆ ಬಳಸುವುದರ ಮೂಲಕ ಬರಹಗಾರ ಆ ಪ್ರಾದೇಶಿಕ ಭಾಷೆಯ ಮೂಲಕವೇ ಓದುಗರಿಗೆ ಹತ್ತಿರವಾಗುತ್ತಾನೆ.

ಒಂದು ನಿರ್ದಿಷ್ಟ ಭೌಗೋಲಿಕ ಪರಿಸರಕ್ಕೆ ಸಂಬಂಧಿಸಿದಂತೆ ಪ್ರಾಕೃತಿಕ, ಭೌಗೋಲಿಕ, ಜೈವಿಕ ಲಕ್ಷಣಗಳು ಮತ್ತು ಜೀವನ ವಿಧಾನಗಳನ್ನು ಪ್ರತಿಫಲಿಸುವ ಎಲ್ಲ ಸಂಗತಿಗಳನ್ನು ನಾವು ಪ್ರಾದೇಶಿಕತೆಯಲ್ಲಿ ಗುರುತಿಸುತ್ತೇವೆ. ರಾಜ್ಯಶಾಸ್ತ್ರದಲ್ಲಿ 'ರೀಜನ್' ಎಂಬ ಪದ ಹಳ್ಳಿಯ ಕುರಿತಾಗಿಯೂ ಇರಬಹುದು. ಈ ಪ್ರತ್ಯೇಕ ಭಾಗದ ಭಾಷೆ, ಸಂಸ್ಕೃತಿ, ಸಂಪ್ರದಾಯಗಳು, ನಂಬಿಕೆಗಳು ಉಳಿದ ಭಾಗದವರಿಗಿಂತ ಪ್ರತ್ಯೇಕ ವಾಗಿರುತ್ತವೆ. ಪ್ರಾದೇಶಿಕತೆಯನ್ನು ಸಕಾರಾತ್ಮವಾಗಿ ಅರ್ಥೈಸಿಕೊಂಡರೆ, ಅದೊಂದು ಪ್ರದೇಶದ ಮೇಲಿನ ಅತಿಯಾದ ಪ್ರೀತಿ ಎನ್ನಬಹುದು. ಆದರೆ ಅದನ್ನೇ ನಕಾರಾತ್ಮವಾಗಿ ಅರ್ಥೈಸಿದರೆ, ಅದೊಂದು ರಾಷ್ಟ್ರದ ಮೇಲಿನ ಪ್ರೀತಿ, ಅಭಿಮಾನಗಳ ಬದಲಾಗಿ ಒಂದು ಪ್ರದೇಶಕ್ಕೆ ಸೀಮಿತವಾಗಿಸುವುದು ಎನ್ನಬಹುದು. ತಾವು ಬೆಳೆದು ಬದುಕಿದ ಪರಿಸರದ ಚೌಕಟ್ಟಿನಲ್ಲಿ ಬರುವಂತಹ ಜೀವನ ವಿಧಾನ, ಧಾರ್ಮಿಕ ಆಚರಣೆಗಳು- ನಂಬಿಕೆಗಳು ಹಾಗೂ ಕತೆ, ಗಾದೆಮಾತುಗಳು, ನುಡಿಗಟ್ಟುಗಳು, ಆಟ - ಪಾಠಗಳು, ಕಲೆ ಮುಂತಾದವುಗಳು ಜನಜೀವನದಲ್ಲಿ ಸೇರಿ ಪ್ರಾದೇಶಿಕತೆ ಎನಿಸಿಕೊಳ್ಳುತ್ತವೆ.

ಪ್ರಾದೇಶಿಕತೆಯು ವ್ಯಕ್ತಿಯ ಕಾರ್ಯ-ಸಮಾಜವನ್ನು ರೂಪಿಸುವ ಬಹು ದೊಡ್ಡ ಸಂಗತಿಯಾಗಿದೆ. ಮಲೆನಾಡ ಜೀವನ ವಿಧಾನವೇ ಬೇರೆಯಾಗಿದ್ದರೆ, ಬಯಲುಸೀಮೆ ಜೀವನಶೈಲಿಯೇ ವಿಭಿನ್ನವಾಗಿರುತ್ತದೆ. ಅಂದರೆ ಪ್ರಾದೇಶಿಕತೆ ನಮ್ಮ ಬದುಕಿನಿಂದ ಬೇರೆ ಆಗಿರುವುದಿಲ್ಲ. ಅದು ನಮ್ಮ ಬದುಕಿನೊಡನೆ ಹಾಸುಹೊಕ್ಕಾಗಿ ಹೆಣೆದುಕೊಂಡಿರುತ್ತದೆ. ಪ್ರತಿಯೊಂದು ಪ್ರದೇಶದ ಋತುಮಾನಗಳು ಬೇರೆ ಬೇರೆ ಆಗಿರುತ್ತವೆ. ಋತುಮಾನಕ್ಕನುಣವಾಗಿ ಉಡುಪುಗಳನ್ನು ಧರಿಸುವುದು, ಆಹಾರ ಸೇವಿಸುವುದು, ಹಬ್ಬಹರಿದಿನಗಳನ್ನು ಆಚರಿಸುವುದು. ಹೀಗೆ ನಾವು ಸೇವಿಸುವ ಆಹಾರ, ಧರಿಸುವ ಉಡುಪುಗಳಲ್ಲಿ, ಆಚರಿಸುವ ಹಬ್ಬಹರಿದಿನ ಗಳಲ್ಲಿ ಪ್ರಾದೇಶಿಕತೆ ಕಂಡುಬರುತ್ತದೆ. ಹೀಗೆ ಪ್ರಾದೇಶಿಕತೆ ಎನ್ನುವುದು ಜೀವನದ ಪ್ರತಿಬಿಂಬವಾಗಿ ವ್ಯಕ್ತವಾಗುತ್ತದೆ. ಅತ್ಯಂತ ಪರಿಚಿತವಾದ, ದಟ್ಟವಾದ ಅನುಭವವನ್ನು

ಕಟ್ಟಿಕೊಡುತ್ತದೆ. ಆದ್ದರಿಂದ ಒಬ್ಬ ವ್ಯಕ್ತಿಯ ಜೀವನಶೈಲಿಯಲ್ಲಿ ಆತನಿರುವ ಪ್ರದೇಶದ ಛಾಪು ಕಂಡುಬಂದರೆ ತಪ್ಪಿಲ್ಲ ಹಾಗೂ ಇದರಿಂದ ಆತ ಇತರರಿಗೆ ಆ ಪ್ರಾದೇಶಿಕತೆಯನ್ನು ಪರಿಚಯಿಸುವವನಾಗಿ ಕಂಡುಬರುತ್ತಾನೆ.

ಶಿವರಾಮ ಕಾರಂತರ, ಪಂಜೆ ಮಂಗೇಶರಾಯರ, ಗೋವಿಂದ ಪೈಗಳ, ಎಂ. ಕೆ. ಇಂದಿರಾ ಮುಂತಾದವರ ಕಾದಂಬರಿಗಳಲ್ಲಿ ಸಮುದ್ರದ ಹಾಗೂ ಕರಾವಳಿ ಜೀವನ ಶೈಲಿಯ ಚಿತ್ರಣ, ಕುವೆಂಪು ಅವರ ಕಾದಂಬರಿಗಳಲ್ಲಿ ಮಲೆನಾಡ ಚಿತ್ರಣ ಹಾಗೂ ಬಸವರಾಜ ಕಟ್ಟೀಮನಿಯವರ ಕಾದಂಬರಿಗಳಲ್ಲಿ ಬಯಲುಸೀಮೆಯ ಚಿತ್ರಣಗಳು. ಇವುಗಳಲ್ಲಿ ಆಯಾ ಲೇಖಕನ ಪ್ರಾದೇಶಿಕತೆಯ ದಟ್ಟ ಪರಿಣಾಮದ ಅನುಭವವಿದೆ ಎನ್ನಬಹುದು. ಹೀಗೆ ಪ್ರಾದೇಶಿಕತೆ ಎನ್ನುವುದು ಒಬ್ಬ ವ್ಯಕ್ತಿಯ ಜೀವನದ ಮೂಲಕ, ಇಲ್ಲವೇ ಆತನು ರಚಿಸಿದ ಕಲೆಗಳ ಮೂಲಕ ಇಲ್ಲವೇ ಸಾಹಿತ್ಯದ ಮೂಲಕ ಬಿತ್ತರಗೊಳ್ಳುತ್ತ ಹೋಗುತ್ತದೆ. ಅಕ್ಷರಸ್ಥನಾದವನು ತನ್ನ ಪ್ರಾದೇಶಿಕತೆಯನ್ನು ಅಕ್ಷರ ಇಲ್ಲವೇ ಕಲೆ ಹೀಗೆ ಯಾವುದಾದರೊಂದು ಗಟ್ಟಿಯಾದ ಮಾಧ್ಯಮದ ಮೂಲಕ ಹೊರಹಾಕುವ ಪ್ರಯತ್ನ ಮಾಡಿದರೆ, ಅನಕ್ಷರಸ್ಥರು ತಮ್ಮ ಉಡುಪು, ಆಹಾರ, ಭಾಷೆಗಳ ಮೂಲಕ ಅಥವಾ ತಮ್ಮ ಚಟುವಟಿಕೆಗಳ ಮೂಲಕ, ಬಿತ್ತರಿಸುವುದನ್ನು ಕಾಣಬಹುದು.

ಪ್ರಾದೇಶಿಕತೆಯನ್ನು ಆಯಾ ಪ್ರದೇಶದಲ್ಲಿ ವಾಸಿಸಿ ಜನರ ಜೀವನವನ್ನು, ಸಂಸ್ಕೃತಿಯನ್ನು ಕಣ್ಣಾರೆ ಕಂಡು, ಅದರ ಭಾಗವಾಗಿ ತನ್ನ ಸಂವೇದನೆಯನ್ನು ರೂಪಿಸಿಕೊಂಡು ಪ್ರಭಾವಕ್ಕೆ ಒಳಗಾದ ಲೇಖಕ ಮಾತ್ರ ತನ್ನ ಸಾಹಿತ್ಯದಲ್ಲಿ ಪ್ರಾದೇಶಿಕತೆಯ ಛಾಪನ್ನು ಮೂಡಿಸಲು ಸಾಧ್ಯ. ಉದಾಹರಣೆಗೆ, ಚಂದ್ರಶೇಖರ ಕಂಬಾರರು (ಘೋಡಗೇರಿಯಲ್ಲಿ ಜನನ) ಶಿವನನ್ನು ಕೈಲಾಸದಿಂದ ಘೋಡಗೇರಿಗೆ ಕರೆತರುವಂತಹ ಚಿತ್ರಣದಲ್ಲಿ ಪ್ರಾದೇಶಿಕತೆಯ ಛಾಪು ಆವರಿಸಿರುವುದು ಕಾಣಬಹುದು.

ಮಲೆನಾಡಿನ ಪರಿಸರದ ಚಿತ್ರವನ್ನು ಎಂ. ಕೆ. ಇಂದಿರಾ ಅವರು ತಮ್ಮ ಕಾದಂಬರಿಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಸದಾನಂದ, ಕಲಾದರ್ಶಿ, ಫಣಿಯಮ್ಮ, ತಗ್ಗಿನ ಮನೆ ಸೀತೆ, ಗಿರಿಬಾಲೆ, ಆತ್ಮಸಖಿ, ಜಾತಿ ಕೆಟ್ಟವಳು, ಮಲೆನಾಡಿನ ಪರಿಸರ ಮತ್ತು ಅಲ್ಲಿನ ಜನಜೀವನವನ್ನು ಚಿತ್ರಿಸುವುದರ ಮೂಲಕ ಪ್ರಾದೇಶಿಕತೆಯನ್ನು ಬಿಂಬಿಸುವಲ್ಲಿ ಎಂ. ಕೆ. ಇಂದಿರಾ ಅವರು ಹಿಂದೆಬಿದ್ದಿಲ್ಲ. ತೀರ್ಥಹಳ್ಳಿಯಲ್ಲಿ ಜನಿಸಿದ ಎಂ. ಕೆ. ಇಂದಿರಾ ಅವರಿಗೆ ಮಲೆನಾಡಿನ ಅವರ ಬಾಲ್ಯ ಜೀವನ ಸಾಹಿತ್ಯ ಸೃಷ್ಟಿಗೆ ಪ್ರೇರಣೆಯಾದದ್ದನ್ನು ಕಾಣಬಹುದು. ಈ ರೀತಿಯಾಗಿ ಆಯಾ ಪ್ರದೇಶದ ಸಂವೇದನೆಗೊಳಗಾದ ಲೇಖಕನು ತಾನು ರಚಿಸಿದ ಸಾಹಿತ್ಯದಲ್ಲಿ ತನ್ನ ಸುತ್ತಲಿನ ಪ್ರಾದೇಶಿಕತೆಯ ಚಿತ್ರಣವನ್ನು ನೀಡುವುದರಿಂದ ಹೊಸದೊಂದು ಪ್ರಾದೇಶಿಕತೆಯ ಪರಿಚಯವಾಗುತ್ತದೆ.

ನಾಡವರೇ ನಿಜನಾಡಿಗರು
ನೋಡು ಕಾಳಗವ ಹೂಡಿಹರು

– ಎಂಬ ಕವಿವಾಣಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನಲ್ಲಿ 'ನಾಡವರು' ಎಂಬ ಒಂದು ಪ್ರಾದೇಶಿಕ ಪಂಗಡವಿದೆಯೆಂಬುದು ತಿಳಿದುಬರುತ್ತದೆ. ಕ್ರಿ.ಶ. ೧೯೩೦ರಲ್ಲಿ ಅಂಕೋಲಾದಲ್ಲಿ 'ನಾಡವರು' ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಸುತ್ತಿದ್ದಾಗ ಈ ಸ್ಫೂರ್ತಿಯುತವಾದ ಕವನವನ್ನು ದಿನಕರ ದೇಸಾಯಿಯವರು ರಚಿಸಿದ್ದರು.

ಇವನ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ
ಆದರೂ ಈತನಿಗೆ ಹೆಸರು ಹಾಲಕ್ಕಿ
ಹಾಲು ಅಕ್ಕಿಗಳೆರಡೂ ಹೆಸರೊಳಗೆ ಮಾತ್ರ
ಹಸಿವೆಯೆಂಬುದು ಇವನ ಹಣೆಯ ಕುಲಗೋತ್ರ

– ಉತ್ತರ ಕನ್ನಡ ಜಿಲ್ಲೆಯಲ್ಲಿ ಶೋಷಣೆಗೆ ಒಳಗಾದಂತಹ ಹಾಲಕ್ಕಿ ಒಕ್ಕಲಿಗರ ಪರಿಸ್ಥಿತಿಯನ್ನು ಈ ನಾಲ್ಕು ಸಾಲುಗಳಲ್ಲಿ ಮನಕಲಕುವಂತೆ ಹೇಳಿದ ದಿನಕರ ದೇಸಾಯಿಯವರಿಗೆ ಅವರ ಮೇಲೆ ಅಪಾರವಾದ ಕನಿಕರವಿತ್ತು.

ದೇಸಾಯಿಯವರು ಉತ್ತರ ಕನ್ನಡ ಜಿಲ್ಲೆಯ ಪ್ರಾದೇಶಿಕ ಪಂಗಡಗಳನ್ನು, ಅವರ ಸಂವೇದನೆಗಳನ್ನು ಸಾಹಿತ್ಯದಲ್ಲಿ ವ್ಯಕ್ತವಾಗಿಸಿದ್ದಲ್ಲದೆ ಪ್ರಾದೇಶಿಕ ಭಾಷೆಯಾದ ಕೊಂಕಣಿಯಲ್ಲೂ ಕವಿತೆಗಳನ್ನು ಬರೆದು, ಅದರಲ್ಲಿಯೂ ಜನರ ರೂಢಿಗಳನ್ನು ಬಿತ್ತರಿಸಿದ್ದು ಕಂಡುಬರುತ್ತದೆ.

ಪ್ರಾದೇಶಿಕತೆಯಲ್ಲಿ ಮುಖ್ಯವಾಗಿ ಲೇಖಕನು ತಾನು ಆಯ್ದುಕೊಳ್ಳುವ ವಸ್ತು ಮತ್ತು ಭಾಷೆ ಮುಖ್ಯ. ಬೈಗುಳಗಳನ್ನು, ಗಾದೆಮಾತುಗಳನ್ನು ಹೊಸ ಶಬ್ದಗಳ ಬಳಕೆ ಮಾಡಿ ತನ್ನ ಕೃತಿಯ ಮೆರಗನ್ನು ಹೆಚ್ಚಿಸಿಕೊಳ್ಳುತ್ತಾನೆ. ಹಾಗೆಯೇ ಆಯಾ ಪ್ರಾದೇಶಿಕ ಪರಿಸರದ ಪಂಗಡಗಳ ಬಲವಾದ ನಂಬಿಕೆಗಳನ್ನು, ಸಂಪ್ರದಾಯಗಳನ್ನು ತನ್ನ ಸಾಹಿತ್ಯದಲ್ಲಿ ಬಳಸಿಕೊಳ್ಳುತ್ತಾನೆ.

ಸಾಹಿತ್ಯ ಅಭಿವ್ಯಕ್ತಿಯ ಮಾಧ್ಯಮ ಭಾಷೆ. ಸಾಹಿತ್ಯ ನಿಂತಲ್ಲಿ ನಿಲ್ಲದೆ ಸರಾಗವಾಗಿ ಚಲಿಸುವಾಗ ಭಾಷೆಯನ್ನು ಹೊಸತಾಗಿ ಕಟ್ಟಿಕೊಳ್ಳುತ್ತಾ ಭಾಷೆಯ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾ ಹೋಗುತ್ತದೆ. ಆಗ ಭಾಷೆಯಲ್ಲಿ ಪ್ರಾದೇಶಿಕತೆಯ ಭಿನ್ನತೆ ಎದ್ದುಕಾಣುತ್ತದೆ ಮತ್ತು ಭಾಷೆಗೊಂದು ಹೊಸ ರೂಪ ಮೂಡುತ್ತದೆ. ಅದರಲ್ಲೂ ಗಡಿಭಾಗವಾಗಿದ್ದರೆ ಅಲ್ಲಿನ ಸಾಹಿತ್ಯದಲ್ಲಿ ಅನ್ಯಭಾಷೆಗಳ ಪ್ರಭಾವ ಕೂಡ ದಟ್ಟವಾಗಿರುವುದನ್ನು ಕಾಣಬಹುದು.

**ಶೋಭಾ ನಾಯಕ**
ನಂ. ೭೬/೩೫೩, ೩ನೇ ಹಂತ, ಹನುಮಾನ್ ನಗರ, ಬೆಳಗಾವಿ

# "ಗಜ಼ಲ್"

'೧'

ನೀ ಮರುಭೂಮಿಯಲಿ ಚಂದ್ರನಂತೆ ತಂಪೆರೆದ ಓಯಸಿಸ್ಸೇನೋ ನಿಜ
ಆ ಭೂಮಿಯ ಒಡಲು ಹದವಾಗಿ ಬೀಜ ಮೊಳಕೆ ಒಡೆಯಲಿಲ್ಲ ಏಕೆ ?

'೨'

ನೀ ಸೂರ್ಯನಂತೆ ಬೆಳಗಿ ಅಜ್ಞಾನ ಹೋಗಲಾಡಿಸಲು ಪಣತೊಡುವುದೇನೋ ನಿಜ
ಹೃದಯದ ಆ ತಮಂಧತೆ ತೊಲಗಿಸಲು ಭಾನುವಿನ ಬೆಳಕು ಸಾಕಾಗಲಿಲ್ಲ ಏಕೆ ?

'೩'

ಕನಸುಗಳು ಕಣ್ಣಂಚಿನಲಿ ಮಿಂಚಿ ಜೀವ ಸೆಲೆಯಾಗುವುದೇನೋ ನಿಜ
ಆ ಕನಸುಗಳು ಕೈಗೂಡುವ ಮೊದಲೆ ಕಣ್ಣು ಹಿಂಗಿ ನೀರಾಗಿ ಹರಿಯಿತಲ್ಲ ಏಕೆ ?

'೪'

ನೀ ಹೂವಿನಂತೆ ಪರಿಮಳ ಬೀರಿ ಕೆಟ್ಟವಾಸನೆ ಹೋಗಲಾಡಿಸುವುದೇನೋ ನಿಜ
ಸುವಾಸನೆ ಬೀರುವ ಆ ಕುಸುಮಗಳ ಬೇರುಗಳೇ ಬತ್ತಿ ಬೆಂಡಾದವಲ್ಲ ಏಕೆ ?

'೫'

ನೀ ನುಡಿದ ಮಾತು ಮೌನ ಮುರಿಯಿತೇನೋ ನಿಜ
ಆ ಮೌನ ಮುರಿದ ಮಾತು ಬದುಕ ಕಟ್ಟಿ ಬೆಳಗದೆ ಬರಡಾಯಿತಲ್ಲ ಏಕೆ ?

**ಶಿವಕುಮಾರ ದಂಡಿನ**
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೂಡ್ಲಿಗಿ - ೫೮೩ ೧೩೫

# ದುರ್ಬಲಗೊಂಡ ರಾಷ್ಟ್ರೀಯ ಪಕ್ಷಗಳು ಮತ್ತು ಒಕ್ಕೂಟ ವ್ಯವಸ್ಥೆ

**ಕು. ಸ. ಮಧುಸೂದನ**

ಅರವತ್ತೈದು ವರ್ಷಗಳ ಭಾರತೀಯ ಪ್ರಜಾಪ್ರಭುತ್ವದ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ಭಾರತದ ಒಕ್ಕೂಟ ವ್ಯವಸ್ಥೆಗೆ ಅಪಾಯ ಉಂಟಾಗುವ ಸನ್ನಿವೇಶ ಎದುರಾಗುತ್ತಿದೆ. ಮೇಲ್ನೋಟಕ್ಕೆ ಈ ಆತಂಕ ಕಪೋಲಕಲ್ಪಿತ ಅನಿಸುವುದು ಸಹಜ. ಆದರೆ ಕಳೆದೆರಡು ದಶಕಗಳಲ್ಲಿನ ರಾಜಕೀಯ ಚಟುವಟಿಕೆಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ಇದರಲ್ಲಿ ಸತ್ಯಾಂಶವಿರುವುದು ಕಂಡುಬರುತ್ತದೆ.

ತೊಂಭತ್ತರ ದಶಕದಿಂದೀಚೆಗೆ ನಮ್ಮ ರಾಷ್ಟ್ರೀಯ ಪಕ್ಷಗಳು ದುರ್ಬಲವಾಗುತ್ತಾ ಹೋಗುತ್ತಿವೆ. ಎರಡು ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಬಿ.ಜೆ.ಪಿ.ಗಳು ದೇಶದ ಹಲವು ರಾಜ್ಯಗಳಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾ ಹೋಗುತ್ತಿವೆ. ಇದಕ್ಕೆ ಸರಿಯಾಗಿ ಪ್ರಾದೇಶಿಕ ಪಕ್ಷಗಳು ಬಹುತೇಕ ಎಲ್ಲಾ ರಾಜ್ಯಗಳಲ್ಲೂ ತಲೆಯೆತ್ತುತ್ತಿವೆ. ವಿವಿಧ ಪ್ರದೇಶಗಳಲ್ಲಿ ಹುಟ್ಟಿಕೊಳ್ಳುತ್ತಿರುವ ಸ್ಥಳೀಯ ಪಕ್ಷಗಳು ತಮ್ಮ ವೈಯಕ್ತಿಕ ಹಿತಾಸಕ್ತಿಗಳಿಗಾಗಿ ರಾಷ್ಟ್ರೀಯ ಹಿತಾಸಕ್ತಿಗಳನ್ನು ಬಲಿಕೊಡಲು ಹಿಂದೆಮುಂದೆ ನೋಡದಂತಹ ಪರಿಸ್ಥಿತಿ ಬರುತ್ತಿದೆ.

ಹಾಗಾದರೆ ಈ ರೀತಿ ಪ್ರಾದೇಶಿಕ ಪಕ್ಷಗಳು ದಿಢೀರನೆ ಈ ಪ್ರಮಾಣದಲ್ಲಿ ಹುಟ್ಟಲು ಕಾರಣಗಳೇನು ?

ಸ್ವಾತಂತ್ರ್ಯ ಬಂದಾಗಿನಿಂದ ಎಲ್ಲಾ ರಾಷ್ಟ್ರೀಯ ಪಕ್ಷಗಳೂ ರಾಜಕೀಯ ಅಧಿಕಾರವನ್ನು ತಮ್ಮ ಕೈಯಲ್ಲಿರಿಸಿಕೊಂಡು ಸ್ಥಳೀಯ ನಾಯಕರುಗಳನ್ನು, ಸ್ಥಳೀಯ ಹಿತಾಸಕ್ತಿಗಳನ್ನು ಕಡೆಗಣಿಸುತ್ತಾ ಬಂದವು. ಅದರಲ್ಲಿಯೂ ಮುಖ್ಯವಾಗಿ ಕಾಂಗ್ರೆಸ್ ಹೈಕಮಾಂಡಿನ ಹೆಸರಲ್ಲಿ ನಡೆಸುತ್ತಾ ಬಂದ ಸರ್ವಾಧಿಕಾರಿ ಧೋರಣೆ ಪ್ರಮುಖವಾದುದು. ಸ್ಥಳೀಯವಾಗಿ ಬಲಿಷ್ಠವಾಗಬಲ್ಲ ನಾಯಕರುಗಳನ್ನು ಭಿನ್ನಮತ ಕಾಡುವಂತೆ ಮಾಡಿ ಅವರನ್ನು ಅಧಿಕಾರದಿಂದ ಇಳಿಸುವುದು ಮತ್ತು ಜನತೆಯ ದೃಷ್ಟಿಯಲ್ಲಿ ಅವರನ್ನು ನಗಣ್ಯರನ್ನಾಗಿ ಮಾಡುವ ಕಾಂಗ್ರೆಸ್‌ನ ಕರಾಮತ್ತು ಜನರನ್ನು ಸಿಟ್ಟಿಗೇಳಿಸಿತ್ತು. ರಾಜ್ಯಮಟ್ಟದ ಯಾವುದೇ ತೀರ್ಮಾನ ಗಳನ್ನು ಪ್ರಾದೇಶಿಕ ನಾಯಕರುಗಳು ತೆಗೆದುಕೊಳ್ಳಲಾಗದಂತಹ ಸನ್ನಿವೇಶವನ್ನು ಸೃಷ್ಟಿಸಿದ ರಾಷ್ಟ್ರೀಯ ಪಕ್ಷಗಳು ಕ್ರಮೇಣ ಜನರಿಂದ ದೂರವಾಗತೊಡಗಿದವು. ಇಂತಹ ಸರ್ವಾಧಿಕಾರಿ ಧೋರಣೆಯಿಂದ ಬೇಸತ್ತ ಜನರು ಸ್ಥಳೀಯವಾಗಿ ಬದಲಿ ನಾಯಕತ್ವದ ಹುಡುಕಾಟದಲ್ಲಿ ತೊಡಗಿದರು. ಇದಕ್ಕೆ ಅತ್ಯುತ್ತಮ ಉದಾಹರಣೆಯೆಂದರೆ ಆಂಧ್ರಪ್ರದೇಶದ ಸಿನಿಮಾ ತಾರೆ ಎನ್. ಟಿ. ರಾಮರಾಯರು. ತೆಲುಗು ಜನರ ಸ್ವಾಭಿಮಾನದ ಹೆಸರಿನಲ್ಲಿ ರಾಜಕೀಯ ಪ್ರವೇಶಿಸಿದ ಅವರು ಕಾಂಗ್ರೆಸ್‌ನ ಸರ್ವಾಧಿಕಾರಿ ನೀತಿಯ ವಿರುದ್ಧ ಹೋರಾಡಿ ಆಂಧ್ರದಲ್ಲಿ ಕಾಂಗ್ರೆಸ್ ಧೂಳಿಪಟವಾಗುವಂತೆ ಮಾಡಿದರು. ನಂತರದ ದಿನಗಳಲ್ಲಿ ತೆಲುಗು ದೇಶಂನ ಯಶಸ್ಸನ್ನು ಗಮನಿಸಿದ ಇತರೇ ರಾಜ್ಯಗಳ ಪ್ರಬಲ ಜಾತಿಗಳ ನಾಯಕರು ತಮ್ಮದೇ ಆದ ಪ್ರಾದೇಶಿಕ ಪಕ್ಷಗಳನ್ನು ಸ್ಥಾಪಿಸಿಕೊಳ್ಳತೊಡಗಿದರು. ಕ್ರಮೇಣ ಚುನಾವಣಾ ರಾಜಕೀಯದಲ್ಲಿಯೂ ಯಶಸ್ಸನ್ನು ಸಾಧಿಸತೊಡಗಿದವು. ಸಮಾಜವಾದಿ ಪಕ್ಷ, ರಾಷ್ಟ್ರೀಯ ಜನತಾದಳ, ಮುಂತಾದುವಕ್ಕಿಂತಲೂ ಮುಂಚಿತವಾಗಿ ಪ್ರಾದೇಶಿಕವಾಗಿ ತಮ್ಮ ನೆಲೆಯನ್ನು ಭದ್ರಪಡಿಸಿಕೊಂಡಿದ್ದ ಕಾಶ್ಮೀರದ ನ್ಯಾಷನಲ್ ಕಾನ್‌ಫರೆನ್ಸ್, ಪಂಜಾಬಿನ ಅಕಾಲಿದಳ, ತಮಿಳುನಾಡಿನ ದ್ರಾವಿಡ ಪಕ್ಷಗಳು ಸಹ ಹೊಸ ಪ್ರಾದೇಶಿಕ ಪಕ್ಷಗಳಿಗೆ ಸ್ಫೂರ್ತಿಯಾದುವು.

ತದನಂತರದ ದಿನಗಳಲ್ಲಿ ಮಂಡಲ್ ಆಯೋಗದ ಶಿಫಾರಸ್ಸು ಜಾರಿಯಲ್ಲಾದ ಸಂಘರ್ಷಗಳಿಂದ ಐಕ್ಯವಾದಂತಹ ಭಾರತದ ಹಿಂದುಳಿದ ಜಾತಿಗಳು, ಹೊಸ ಎಚ್ಚರದ ಪ್ರತೀಕವಾಗಿ ತಮ್ಮದೇ ಆದ ರಾಜಕೀಯ ಪಕ್ಷಗಳನ್ನು ಸ್ಥಾಪಿಸಿಕೊಂಡವು. ಹೀಗೆ ಜಾತಿಯ ಕಾರಣದಿಂದ ಹುಟ್ಟಿಕೊಂಡ ಪಕ್ಷಗಳಲ್ಲಿ ಪ್ರಮುಖವಾದವು, ಮುಲಾಯಂರ ಸಮಾಜವಾದಿ ಜನತಾಪಕ್ಷ, ಲಾಲು ಪ್ರಸಾದರ ರಾಷ್ಟ್ರೀಯ ಜನತಾದಳ ! ಇದೇ ರೀತಿ, ಉತ್ತರ ಪ್ರದೇಶದಲ್ಲಿ ಜಾಗೃತಗೊಂಡ ದಲಿತ ಪ್ರಜ್ಞೆಯ ಪ್ರತೀಕವಾಗಿ ಕಾನ್ಷೀರಾಂರ ಬಹುಜನ

**ಕೇಂದ್ರದಲ್ಲಿ ಅಧಿಕಾರ ಹಿಡಿಯುವ ಮತ್ತು ಉಳಿಸಿಕೊಳ್ಳುವ ಹಪಾಹಪಿಗೆ ಬಿದ್ದ ರಾಷ್ಟ್ರೀಯ ಪಕ್ಷಗಳು ಪ್ರಾದೇಶಿಕ ಪಕ್ಷಗಳ ಎಲ್ಲಾ ರೀತಿಯ ಬ್ಲಾಕ್‌ಮೇಲ್ ತಂತ್ರಗಳಿಗೆ ಬಲಿಯಾಗುತ್ತಿರುವುದಕ್ಕೆ ತಾಜಾ ಉದಾಹರಣೆಯೆಂದರೆ : ಕೇಂದ್ರದ ಯು.ಪಿ.ಎ. ಸರಕಾರದ ಅಂಗಪಕ್ಷವಾಗಿರುವ ತೃಣಮೂಲ ಕಾಂಗ್ರೆಸ್ಸಿನ ಮಮತಾ ಬ್ಯಾನರ್ಜಿಯ ನಡವಳಿಕೆಗಳು ! ಇದೇ ರೀತಿಯ ಇನ್ನೊಂದು ತಕ್ಷಣದ ಉದಾಹರಣೆಯೆಂದರೆ ಯು.ಪಿ.ಎ.ನ ಮತ್ತೊಂದು ಅಂಗಪಕ್ಷವಾದ ಡಿ.ಎಂ.ಕೆ.ಯದು. ಮೊನ್ನೆ ವಿಶ್ವಸಂಸ್ಥೆ ಶ್ರೀಲಂಕಾದ ಯುದ್ಧ ಅಪರಾಧಗಳ ಬಗ್ಗೆ ತೆಗೆದುಕೊಂಡ ನಿರ್ಣಯದ ಪರವಾಗಿ ಮತ ಹಾಕುವಂತೆ ಡಿ.ಎಂ.ಕೆ. ಕೇಂದ್ರದ ಮೇಲೆ ತೀವ್ರತರ ಒತ್ತಡ ತಂದಿತು.**



ಸಮಾಜ ಪಕ್ಷ ಸ್ಥಾಪನೆಯಾಯಿತು. ಇವೆಲ್ಲಕ್ಕೂ ಮೊದಲೇ ಪಂಜಾಬಿನ ಅಕಾಲಿದಳ ಮತ್ತು ಮಹಾರಾಷ್ಟ್ರದ ಶಿವಸೇನೆಗಳು ಪ್ರಾದೇಶಿಕ ವಿಷಯಗಳನ್ನು ಇಟ್ಟುಕೊಂಡು ಯಶಸ್ವಿಯಾಗುತ್ತಾ ಬಂದಿದ್ದವು. ಇದೇ ಸಮಯಕ್ಕೆ ಸರಿಯಾಗಿ ತಮಿಳುನಾಡಿನಲ್ಲಿ ಜಾತಿ ಆಧಾರಿತ ಸಣ್ಣಪುಟ್ಟ ಪಕ್ಷಗಳು ಹುಟ್ಟಿಕೊಂಡವು. ಹೀಗೆ ಕಳೆದೆರಡು ದಶಕಗಳಲ್ಲಿ ರಾಷ್ಟ್ರೀಯ ಪಕ್ಷಗಳ ಸರ್ವಾಧಿಕಾರದ ವಿರುದ್ಧದ ಬಂಡಾಯ, ಪ್ರಾದೇಶಿಕ ಅಸಮಾನತೆಗಳ ಕಾರಣಗಳಿಂದಾಗಿ ಹುಟ್ಟಿಕೊಂಡ ಪ್ರಾದೇಶಿಕ ಪಕ್ಷಗಳು ರಾಷ್ಟ್ರೀಯ ಹಿತಾಸಕ್ತಿಗಳಿಗೆ ಮಾರಕವಾದಂತಹ ನೀತಿನಿರೂಪಣೆಗಳ ಮೂಲಕ ಒಕ್ಕೂಟ ವ್ಯವಸ್ಥೆಗೆ ಧಕ್ಕೆ ತರುತ್ತಿವೆ. ಇದಕ್ಕೆ ಪೂರಕವಾಗಿ ದುರ್ಬಲಗೊಂಡ ರಾಷ್ಟ್ರೀಯ ಪಕ್ಷಗಳು ರಾಜ್ಯಗಳಲ್ಲಿ ಅಧಿಕಾರ ಹಿಡಿಯಲು, ಕೇಂದ್ರದಲ್ಲಿ ಗದ್ದುಗೆ ಏರಲು ಪ್ರಾದೇಶಿಕ ಪಕ್ಷಗಳ ಬಾಲ ಹಿಡಿಯುತ್ತಿವೆ. ಕೇಂದ್ರದಲ್ಲಿ ಅಧಿಕಾರ ಹಿಡಿಯುವ ಮತ್ತು ಉಳಿಸಿಕೊಳ್ಳುವ ಹಪಾಹಪಿಗೆ ಬಿದ್ದ ರಾಷ್ಟ್ರೀಯ ಪಕ್ಷಗಳು ಪ್ರಾದೇಶಿಕ ಪಕ್ಷಗಳ ಎಲ್ಲಾ ರೀತಿಯ ಬ್ಲಾಕ್‌ಮೇಲ್ ತಂತ್ರಗಳಿಗೆ ಬಲಿಯಾಗುತ್ತಿರುವುದಕ್ಕೆ ತಾಜಾ ಉದಾಹರಣೆಯೆಂದರೆ : ಕೇಂದ್ರದ ಯು.ಪಿ.ಎ. ಸರಕಾರದ ಅಂಗಪಕ್ಷವಾಗಿರುವ ತೃಣಮೂಲ ಕಾಂಗ್ರೆಸ್ಸಿನ ಮಮತಾ ಬ್ಯಾನರ್ಜಿಯ ನಡವಳಿಕೆಗಳು! ಇದೇ ರೀತಿಯ ಇನ್ನೊಂದು ತಕ್ಷಣದ ಉದಾಹರಣೆಯೆಂದರೆ ಯು.ಪಿ.ಎ.ನ ಮತ್ತೊಂದು ಅಂಗಪಕ್ಷವಾದ ಡಿ.ಎಂ.ಕೆ.ಯದು. ಮೊನ್ನೆ ವಿಶ್ವಸಂಸ್ಥೆ ಶ್ರೀಲಂಕಾದ ಯುದ್ಧ ಅಪರಾಧಗಳ ಬಗ್ಗೆ ತೆಗೆದುಕೊಂಡ ನಿರ್ಣಯದ ಪರವಾಗಿ ಮತ ಹಾಕುವಂತೆ ಡಿ.ಎಂ.ಕೆ. ಕೇಂದ್ರದ ಮೇಲೆ ತೀವ್ರತರ ಒತ್ತಡ ತಂದಿತು. ಅದರ ಬೇಡಿಕೆ ಎಷ್ಟೇ ನ್ಯಾಯಯುತವಾಗಿದ್ದರೂ ಸಹ ಅದಕ್ಕಾಗಿ ಅದು ಅನುಸರಿಸಿದ ಬ್ಲಾಕ್‌ಮೇಲ್ ತಂತ್ರ ಪ್ರಜಾಪ್ರಭುತ್ವದ ಒಳ್ಳೆಯ ಲಕ್ಷಣವಲ್ಲ. ಇವತ್ತಿಗೂ ಸಹ ತೃಣಮೂಲ ಕಾಂಗ್ರೆಸ್ ಒಂದಲ್ಲಾ ಒಂದು ಕಾರಣಗಳಿಗಾಗಿ ತನ್ನ ಬೆಂಬಲ ವಾಪಾಸು ಪಡೆಯುವ ಬೆದರಿಕೆ ಹಾಕುತ್ತಲೇ ತನ್ನ ಬೇಡಿಕೆಗಳನ್ನು ಈಡೇರಿಸಿಕೊಳ್ಳುತ್ತಿದೆ. ನಾಳೆ ಕಾಂಗ್ರೆಸ್ ಮಮತಾರನ್ನು ದೂರವಿಟ್ಟು ಮುಲಾಯಂರನ್ನು ತನ್ನ ಮೈತ್ರಿಕೂಟಕ್ಕೆ ಸೇರಿಸಿಕೊಂಡರೂ ಪರಿಣಾಮ ಇದೇ ಆಗಿರುತ್ತದೆ. ಪಾತ್ರಧಾರಿ ಮಾತ್ರ ಬೇರೆಯಷ್ಟೆ!

ಹೀಗೆ ಕೇಂದ್ರದಲ್ಲಿರುವ ಸಮ್ಮಿಶ್ರ ಸರಕಾರಗಳು ತಮ್ಮ ಕಿರಿಯ ಮಿತ್ರಪಕ್ಷಗಳಿಂದ ಒಂದಲ್ಲಾ ಒಂದು ರೀತಿಯ ಕಿರಿಕಿರಿಯನ್ನು ಅನುಭವಿಸುತ್ತಾ ರಾಷ್ಟ್ರೀಯ ಹಿತಾಸಕ್ತಿಗಳನ್ನು ಕಡೆಗಣಿಸುವ ಕಾಲ ಬರುತ್ತದೆ. ಇದು ಕೇವಲ ಇವತ್ತು ಅಧಿಕಾರದಲ್ಲಿರುವ ಕಾಂಗ್ರೆಸ್ಸಿನ ಸಮಸ್ಯೆ ಮಾತ್ರವಲ್ಲ, ನಾಳೆ ನಡೆವ ಚುನಾವಣೆಯಲ್ಲಿ ಬಿ.ಜೆ.ಪಿ. ನೇತೃತ್ವದ ಎನ್.ಡಿ.ಎ. ಗೆದ್ದರೆ ಅದು ಸಹ ಇಂತಹುದೇ ಸಮಸ್ಯೆ ಎದುರಿಸಬೇಕಾಗುತ್ತದೆ. ಡಿ.ಎಂ.ಕೆ.ಯ ಜಾಗದಲ್ಲಿ ಎ.ಐ.ಎ.ಡಿ.ಎಂ.ಕೆ ಬರುತ್ತದೆ, ಮಮತಾರ ಜಾಗದಲ್ಲಿ ಬಾಳಾ ಠಾಕ್ರೆ ಬರುತ್ತಾರೆ. ಅಷ್ಟೇ ವ್ಯತ್ಯಾಸ! ಇಂತಹ ತೀವ್ರ ಮುಜುಗರದ ಸನ್ನಿವೇಶದಲ್ಲಿ ಕೇಂದ್ರವು ಸ್ವತಂತ್ರವಾದ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ವಿಫಲವಾಗುತ್ತದೆ. ಇದು ದೇಶದ ಆರ್ಥಿಕ ನೀತಿ ಮತ್ತು ವಿದೇಶಾಂಗ ನೀತಿಯ ಮೇಲೂ ಅಡ್ಡಪರಿಣಾಮ ಬೀರುತ್ತದೆ.

ಆದ್ದರಿಂದಲೇ ರಾಜ್ಯ ಮಟ್ಟದಲ್ಲಿ (ವಿಧಾನಸಭೆಗೆ ಸಂಬಂಧಿಸಿ) ಪ್ರಾದೇಶಿಕ ಪಕ್ಷಗಳನ್ನು ಬೆಂಬಲಿಸಿದರೂ, ರಾಷ್ಟ್ರಮಟ್ಟದಲ್ಲಿ ಪ್ರಬಲವಾದ ರಾಷ್ಟ್ರೀಯ ಪಕ್ಷವೊಂದನ್ನು ಬೆಂಬಲಿಸುವ ಅಗತ್ಯವಿದೆ. ಇದಾಗದಿದ್ದಲ್ಲಿ ಕೇಂದ್ರದಲ್ಲಿ ಅಧಿಕಾರ ಹಿಡಿಯುವ ದುರ್ಬಲ ರಾಷ್ಟ್ರೀಯ ಪಕ್ಷವೊಂದು ಈ ದೇಶವನ್ನು ದುರ್ಬಲಗೊಳಿಸುವ ಎಲ್ಲಾ ಅಪಾಯಗಳೂ ಇವೆ.

**ಕು. ಸ. ಮಧುಸೂದನ**
ವಿಜಯಾ ಬ್ಯಾಂಕ್ ಮಹಡಿ, ರಂಗೇನಹಳ್ಳಿ - ೫೭೭ ೧೪೪
ಚಿಕ್ಕಮಗಳೂರು ಜಿಲ್ಲೆ

## ''ಹಣತೆ''

ಬೆಳಕಿನ ಮಳೆಯಾದ
ಎಣ್ಣೆ
ಬೆಳಕಿಗೆ ದಾರಿ ತೋರಿದ
ಬತ್ತಿ
ಬೆಳಕಿನ ವ್ಯಾಖ್ಯಾನಕ್ಕಿಳಿದು
ಕಾದಾಡುವಾಗ
ನೋವಿನಲ್ಲೂ ನಕ್ಕಿತು
ಹಣತೆ

**ಗಂಗಾಧರ ಕೊಡ್ಲಿಯವರ**
ಶಾಲ್ಮಲೀ, ೬ನೇ ಕ್ರಾಸ್, ಮುನ್ಸಿಪಲ್ ಲೇಔಟ್
ಸಿದ್ದಗಂಗಾ ಬಡಾವಣೆ, ತುಮಕೂರು

# ಅಕ್ಕನ ಇತಿ ವೃತ್ತಾಂತ



ಈಗ ಅಕ್ಕ; ಹಾಕುವುದಿಲ್ಲ ಕಸೂತಿ
ಬಣ್ಣ ಬಣ್ಣದ ಮಣಿ ಪೋಣಿಸುತ್ತಾಳೆ
ತಾನುಂಡ ನೋವು-ನಲಿವುಗಳ
ನೆನಪಿನ ಕಣಜದಿಂದ ಹೆಕ್ಕಿ

ಜತನದಿಂದ ಏಕಸೂತ್ರದಲ್ಲಿ
ಆನೆ, ಕುದುರೆ, ರಥ, ತೇರು - ಹೀಗೆ ತನ್ನ
ಕಲ್ಪನೆಯ ಮೂಸೆಯಲ್ಲಿ
ಎರಕ ಹುಯ್ಯುತ್ತಾಳೆ.

ಸಾವಿರ ಜಾಗಟೆಗೂ ಜಗ್ಗಳು ಅಕ್ಕ
ಸಂತೆಯಲಿ ಕುಂತರೂ ಅಚಲ ಭಾವ
ಸ್ಥಿತಪ್ರಜ್ಞಳಲ್ಲ ಅಕ್ಕ
ಎಳವೆಯಲ್ಲೆ ಕಿವಿನಂಜಾಗಿ
ಸೋರಿಸೋರಿ ತಮಟೆ
ತೂತಾಗಿ ಪೂರಾ ಕಿವುಡು ಈಗ
ಹನಿಗಣ್ಣಾಗುವಳು ಹೂ ಮನಸಿನ ಅಕ್ಕ

ಸಿಡಿವುದಾಗಾಗ ಲಾವಾರಸ
ಭೇದಿಸುವುದು, ಚುರುಕು ಕಣ್ಣಿನಲಗು
ಎದಿರು ನಿಂತವರ ತುಟಿಗಳಿಂಗಿತವ
ಅವಳು ಬಾಯ್ಬಿಟ್ಟರೆ ಸುನಾಮಿ, ಕ್ಯಾತರೀನ
ನಾವು ಜಪಿಸಬೇಕು 'ಕಿವುಡನ ಮಾಡಯ್ಯ ಎನ್ನ...!'
ಮೂರು ದಿನ ಮುಲುಕುತ್ತ ಮಲಗಿದ ಅಕ್ಕ
ನಾಲ್ಕನೇ ದಿನ ಕಂತೆ ಒಗೆದೇಬಿಟ್ಟಳು.

ಮಣಿ ಮೂಡಿಸಿದ್ದ ಅವಳ ತೇರು, ರಥ
ಕುದುರೆ, ಶಂಖ, ಆನೆ ಈಗ ಯಾವುದೂ
ಮುಗಿದ ಯುದ್ಧದ ನೆನಪು.

ತಿಥಿಯ ದಿವಸ ಪುರೋಹಿತರ
ಮಂತ್ರದೊಡನೆ, ಅಕ್ಕನ ಮುಖ
ಹೊಗೆಯ ನಡುವೆ ದಟ್ಟವಾಗಿ ತೇಲುತ್ತದೆ
ನೀರು ತುಂಬಿದ ಮೋಡದಂತೆ ಎಲ್ಲೋ
ಹಾಗೇ ಸಾಗುತ್ತ ದೂರ ಸರಿಯುತ್ತದೆ.

**ಎಸ್. ಪ್ರಸಾದ್**
ನಂ. ೬೨೬, ೬ನೇ ಮುಖ್ಯರಸ್ತೆ, ೧೧ನೇ ಕ್ರಾಸ್, ಬಿಟಿಎಂ ೨ನೇ ಹಂತ
ಬೆಂಗಳೂರು - ೫೬೦ ೦೭೬



# ಐ. ಪಿ. ಪಾವ್ಲೋವ್: ರಷ್ಯಾದ 'ಹೀರೋ' ಮತ್ತು ಅಂತರರಾಷ್ಟ್ರೀಯ ವಿಜ್ಞಾನದ ನೇತಾರ

ವಿಜ್ಞಾನದ ಒಂದು ಕ್ಷೇತ್ರದಲ್ಲಿ ಪರಿಣಿತನಾಗಿದ್ದು, ವಿಜ್ಞಾನದ ಇನ್ನೊಂದು ಕ್ಷೇತ್ರಕ್ಕೂ ಮಹತ್ವದ ಕಾಣಿಕೆ ಸಲ್ಲಿಸಿದ ಕೀರ್ತಿಗೆ ಭಾಜನರಾದವರು ಹಲವರಿದ್ದಾರೆ. ಅಂತಹ ಸಾಧಕರ ಪಂಕ್ತಿಯಲ್ಲಿ ರಷ್ಯಾದ ವಿಜ್ಞಾನಿ ಐ. ಪಿ. ಪಾವ್ಲೋವ್ ಒಬ್ಬ ಅಗ್ರಗಣ್ಯ. ಮೂಲತಃ ಶರೀರವಿಜ್ಞಾನಿಯಾಗಿದ್ದ ಪಾವ್ಲೋವ್ ರಕ್ತಪರಿಚಲನೆ, ಜೀರ್ಣಕ್ರಿಯೆ, ಉನ್ನತ ನರವ್ಯೂಹದ ಕಾರ್ಯ ಚಟುವಟಿಕೆಗಳ ಅಧ್ಯಯನಗಳಲ್ಲಿ ಅನನ್ಯ ಸಾಧನೆಗಳನ್ನು ಮಾಡಿದ್ದಾನೆ. ಹಾಗಾದರೂ ಅವನು ಮನೋವಿಜ್ಞಾನಕ್ಕೆ ಸಲ್ಲಿಸಿದ ಕೊಡುಗೆ ಮಹತ್ತರವಾದದ್ದು. ತನ್ನ 'ಅನುಬಂಧಿತ ಪ್ರತಿವರ್ತ' ತತ್ವದ ಮೂಲಕ ಮನೋವಿಜ್ಞಾನದ ವರ್ತನಾವಾದಕ್ಕೆ ಪೂರಕ ಅಂಶಗಳನ್ನು ಪ್ರತಿಪಾದಿಸಿ, ಪ್ರಾಣಿಗಳ ಮತ್ತು ಮಾನವರ ವರ್ತನೆಯ ಅರ್ಥಪೂರ್ಣ ವಿವರಣೆಗಳನ್ನು ಕಂಡುಕೊಳ್ಳುವಲ್ಲಿ ಮತ್ತು ಮನೋರೋಗಗಳ ಚಿಕಿತ್ಸೆಗೆ ಪರಿಣಾಮಕಾರಿ ಮಾರ್ಗಗಳನ್ನು ಸೂಚಿಸುವಲ್ಲಿ ಪಾವ್ಲೋವ್‌ನ ಕೊಡುಗೆ ಅಪಾರ.

೧೮೪೯ರಲ್ಲಿ ರಷ್ಯಾದ ಝಾನ್ ಪಟ್ಟಣದ ಒಂದು ಪಾದ್ರಿಗಳ ಕುಟುಂಬದಲ್ಲಿ ಜನಿಸಿದ ಪಾವ್ಲೋವ್, ಆರಂಭದಲ್ಲಿ ಪಾದ್ರಿ ಹುದ್ದೆಗೆ ಅಗತ್ಯವಾದ ಶಿಕ್ಷಣದಲ್ಲಿ ನಿರತನಾಗಿದ್ದ. ಆ ತರಬೇತಿಯ ಕೊನೆಯ ವರ್ಷದಲ್ಲಿ ಅದನ್ನು ಕೈಬಿಟ್ಟು, ವಿಜ್ಞಾನದತ್ತ ಗಮನ ಹರಿಸಿದ. ಆ ಕಾಲಕ್ಕೆ 'ನವ ದೇವತೆ' ಎಂದು ಪರಿಗಣಿಸಲಾಗಿದ್ದ ವಿಜ್ಞಾನದ ಆರಾಧಕನಾಗಲು ನಿರ್ಧರಿಸಿದ ಪಾವ್ಲೋವ್ ಸೇಂಟ್ ಪೀಟರ್ಸ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ಶರೀರ ವಿಜ್ಞಾನದಲ್ಲಿ ವಿಶೇಷ ತರಬೇತಿಯಲ್ಲಿ ತೊಡಗಿಕೊಂಡ. ಪ್ರಾಮಾಣಿಕತೆಗೆ ಬದ್ಧನಾಗಿದ್ದ ಪಾವ್ಲೋವ್ ಮನಸ್ಸಾಕ್ಷಿಗೆ ಹೆಚ್ಚಿನ ಮಹತ್ವ ನೀಡಿದ್ದು, ''ಯಾವುದೇ ಸಂದರ್ಭದಲ್ಲಿಯೇ ಆಗಲಿ, ನನ್ನ ಮಟ್ಟಿಗೆ ಯಾವುದು ಯಥಾರ್ಥ ನಡತೆ ಎಂದು ನನ್ನ ಸ್ವಪ್ರಜ್ಞೆಗೆ ಎನ್ನಿಸುತ್ತದೋ ಅದೇ ನನಗೆ ಮುಖ್ಯ'' ಎನ್ನುವುದು ಅವನ ದೃಢವಾದ ನಿಲುವಾಗಿತ್ತು.

೧೯೧೪ರಲ್ಲಿ ಮೊದಲ ಮಹಾಯುದ್ಧ ಪ್ರಾರಂಭವಾದ ಕಾಲಕ್ಕೆ ರಷ್ಯಾದಲ್ಲಿನ ಆರ್ಥಿಕ ಪರಿಸ್ಥಿತಿ ತೀರಾ ಹದಗೆಟ್ಟಿದ್ದಿತು. ಈ ಪರಿಸ್ಥಿತಿಯಲ್ಲಿ ಪಾವ್ಲೋವ್‌ಗೆ ತನ್ನ ಸಂಶೋಧನೆಗಳನ್ನು ಮುಂದುವರಿಸಿಕೊಂಡು ಹೋಗುವುದು ಕಷ್ಟಕರವಾಯಿತು; ಮಾತ್ರವೇ ಅಲ್ಲ, ತನ್ನ ಬದುಕನ್ನು ನೀಗಿಸುವುದು ಕೂಡ ಸುಲಭವಾಗಿರಲಿಲ್ಲ. ಈ ಸಂದರ್ಭದಲ್ಲಿ ತನ್ನ ಕೆಲಸವನ್ನು ಕೈಬಿಟ್ಟು, ಬೇರೆ ದೇಶಕ್ಕೆ ಹೋಗಲು ಅನುಮತಿ ಕೋರಿ ಲೆನಿನ್‌ಗೆ ಪತ್ರ ಬರೆದ. ಅದಕ್ಕೆ ಲೆನಿನ್ ತೋರಿದ ಪ್ರತಿಕ್ರಿಯೆ ಪಾವ್ಲೋವ್‌ನ ಔನ್ನತ್ಯದ ಮಟ್ಟಕ್ಕೆ ಸಾಕ್ಷಿಯಾಗಿದೆ. ಲೆನಿನ್ ಪತ್ರದ ಸಾರಾಂಶ ಹೀಗಿದೆ: ''ನಿನ್ನಂತಹ ಮೌಲಿಕ ನಾಗರಿಕನನ್ನು

ಎಚ್. ಎಸ್. ಈಶ್ವರ

**೧೮೪೯ರಲ್ಲಿ ರಷ್ಯಾದ ಝಾನ್ ಪಟ್ಟಣದ ಒಂದು ಪಾದ್ರಿಗಳ ಕುಟುಂಬದಲ್ಲಿ ಜನಿಸಿದ ಪಾವ್ಲೋವ್, ಆರಂಭದಲ್ಲಿ ಪಾದ್ರಿ ಹುದ್ದೆಗೆ ಅಗತ್ಯವಾದ ಶಿಕ್ಷಣದಲ್ಲಿ ನಿರತನಾಗಿದ್ದ. ಆ ತರಬೇತಿಯ ಕೊನೆಯ ವರ್ಷದಲ್ಲಿ ಅದನ್ನು ಕೈಬಿಟ್ಟು, ವಿಜ್ಞಾನದತ್ತ ಗಮನ ಹರಿಸಿದ. ಆ ಕಾಲಕ್ಕೆ 'ನವ ದೇವತೆ' ಎಂದು ಪರಿಗಣಿಸಲಾಗಿದ್ದ ವಿಜ್ಞಾನದ ಆರಾಧಕನಾಗಲು ನಿರ್ಧರಿಸಿದ ಪಾವ್ಲೋವ್ ಸೇಂಟ್ ಪೀಟರ್ಸ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ಶರೀರ ವಿಜ್ಞಾನದಲ್ಲಿ ವಿಶೇಷ ತರಬೇತಿಯಲ್ಲಿ ತೊಡಗಿಕೊಂಡ. ಪ್ರಾಮಾಣಿಕತೆಗೆ ಬದ್ಧನಾಗಿದ್ದ ಪಾವ್ಲೋವ್ ಮನಸ್ಸಾಕ್ಷಿಗೆ ಹೆಚ್ಚಿನ ಮಹತ್ವ ನೀಡಿದ್ದು, ''ಯಾವುದೇ ಸಂದರ್ಭದಲ್ಲಿಯೇ ಆಗಲಿ, ನನ್ನ ಮಟ್ಟಿಗೆ ಯಾವುದು ಯಥಾರ್ಥ ನಡತೆ ಎಂದು ನನ್ನ ಸ್ವಪ್ರಜ್ಞೆಗೆ ಎನ್ನಿಸುತ್ತದೋ ಅದೇ ನನಗೆ ಮುಖ್ಯ'' ಎನ್ನುವುದು ಅವನ ದೃಢವಾದ ನಿಲುವಾಗಿತ್ತು.**




ಕಳೆದುಕೊಳ್ಳಲು ನನ್ನ ದೇಶಕ್ಕೆ ಸಾಧ್ಯವಿಲ್ಲ. ನಿನಗೆ ಏನು ಬೇಕೋ, ನೀನು ಏನನ್ನು ಅಪೇಕ್ಷಿಸುತ್ತೀಯೋ ಅದನ್ನು ನಿನಗೆ ಕೊಡಲಾಗುತ್ತದೆ.'' ಲೆನಿನ್ ತನ್ನ ಭರವಸೆಯಂತೆಯೇ ಪಾವ್ಲೋವ್‌ಗೆ ಅವಶ್ಯಕವಾದ ಎಲ್ಲ ಸವಲತ್ತುಗಳನ್ನೂ ಒದಗಿಸಿಕೊಟ್ಟ, ಹಾಗಾಗಿ ಪಾವ್ಲೋವ್‌ನ ಸಂಶೋಧನೆಗಳು ನಿರಾತಂಕವಾಗಿ ಮುಂದುವರಿದುಕೊಂಡು ಹೋದವು.

ಶರೀರಶಾಸ್ತ್ರದಲ್ಲಿ ಪಾವ್ಲೋವ್ ನಡೆಸಿದ ಸಂಶೋಧನೆಗಳ ಸಮಗ್ರ ಸಮೀಕ್ಷೆ ಇಲ್ಲಿನ ಉದ್ದೇಶವಲ್ಲ. ಹಾಗಾದರೂ ಅವನು ಮಾನವ ವರ್ತನೆಯ ಅರಿವಿಗೆ ಕೊಟ್ಟ ಕೊಡುಗೆಯನ್ನು ಇಲ್ಲಿ ಕಡೆಗಣಿಸಲಾಗದು. ಜೀರ್ಣಕ್ರಿಯೆ ಮತ್ತು ಲಾಲಾರಸಗಳ ನಡುವಿನ ಸಂಬಂಧಗಳ ಅನ್ವೇಷಣೆಯಲ್ಲಿ ತೊಡಗಿದ್ದಾಗ, ಪಾವ್ಲೋವ್‌ಗೆ ಅವನ ಹೆಸರಾಂತ 'ಅನುಬಂಧಿತ ಪ್ರತಿವರ್ತ' ಪರಿಕಲ್ಪನೆಯ ಸುಳಿವು ಸಿಕ್ಕಿತು. ಯಾವುದಾದರೂ ಎರಡು ಕ್ರಿಯೆಗಳು ಒಂದರ ನಂತರದಲ್ಲಿ ಮತ್ತೊಂದು ಅಥವಾ ಏಕಕಾಲಕ್ಕೆ ಸಂಭವಿಸಿದರೆ ಅವೆರಡರ ನಡುವೆ ಸಂಬಂಧ ಏರ್ಪಡುತ್ತದೆ ಎನ್ನುವುದು ಈ ಪರಿಕಲ್ಪನೆಯ ಮೂಲ ತತ್ವವಾಗಿದೆ. ಈ ತತ್ವವನ್ನು ಸಾಬೀತುಪಡಿಸಲು ಆತ ನಡೆಸಿದ ಪ್ರಯೋಗಗಳು ಮನಶ್ಶಾಸ್ತ್ರದ ಮೊದಲ ಪಂಕ್ತಿಯ ಪ್ರಯೋಗಗಳ ಪಟ್ಟಿಯಲ್ಲಿ ಅಗ್ರಸ್ಥಾನ ಪಡೆದುಕೊಂಡಿವೆ. ಈ ಪ್ರಯೋಗಗಳಲ್ಲಿ ಬಳಸಲಾದ ವಿಧಾನವನ್ನು ಸಂಕ್ಷಿಪ್ತವಾಗಿ ಹೀಗೆ ವಿವರಿಸಬಹುದು :

೧. ನಾಯಿಗಳಿಗೆ ಆಹಾರವನ್ನು ತೋರಿಸಿದಾಗ, ಅವು ಜೊಲ್ಲು ಸುರಿಸುತ್ತವೆ. ಇಲ್ಲಿ ಆಹಾರ ಸಹಜ ಪ್ರಚೋದನೆ ಮತ್ತು ಜೊಲ್ಲು ಸೋರುವಿಕೆ ಸಹಜ ಪ್ರತಿಕ್ರಿಯೆ **[ಆಹಾರ → ಜೊಲ್ಲು ಸುರಿಸುವಿಕೆ : ಸಹಜ ಪ್ರತಿಕ್ರಿಯೆ]**

೨. ಘಂಟೆಯೊಂದನ್ನು ಬಾರಿಸಿದರೆ, ಅದರ ನಾದಕ್ಕೆ ನಾಯಿಗಳು ಯಾವುದೇ ಪ್ರತಿಕ್ರಿಯೆ ತೋರುವುದಿಲ್ಲ **[ಘಂಟೆಯ ನಾದ → ಪ್ರತಿಕ್ರಿಯೆ ಇಲ್ಲ]**

೩. ನಂತರ ಅವುಗಳಿಗೆ ಘಂಟೆಯ ನಾದದೊಡನೆ ಆಹಾರವನ್ನು ಕೊಡಲಾಗುತ್ತದೆ. **[ಘಂಟೆಯ ನಾದ + ಆಹಾರ → ಜೊಲ್ಲು ಸುರಿಸುವಿಕೆ]**

೪. ಹೀಗೆಯೇ ಹಲವು ಬಾರಿ ಮಾಡಿದಾಗ, ನಾಯಿಗಳು ಕೇವಲ ಘಂಟೆಯ ನಾದಕ್ಕೆ ಜೊಲ್ಲು ಸುರಿಸುವ ಪ್ರತಿಕ್ರಿಯೆ ತೋರುತ್ತವೆ. ಈಗ ಘಂಟೆಯ ನಾದ ಅನುಬಂಧಿತ ಪ್ರಚೋದನೆಯಾಗಿ ಕಾರ್ಯ ನಿರ್ವಹಿಸುತ್ತದೆ; ಹೀಗೆ ಘಂಟೆಯ ನಾದಕ್ಕೆ ಅವು ತೋರುವ ಪ್ರತಿಕ್ರಿಯೆ-ಜೊಲ್ಲು ಸುರಿಸುವಿಕೆ- ಅನುಬಂಧಿತ ಪ್ರತಿಕ್ರಿಯೆ **[ಘಂಟೆಯ ನಾದ → ಜೊಲ್ಲು ಸುರಿಸುವಿಕೆ : ಅನುಬಂಧಿತ ಪ್ರತಿಕ್ರಿಯೆ]**

೫. ನಾಯಿಗಳು ಘಂಟೆಯ ನಾದ ಮತ್ತು ಆಹಾರಗಳ ನಡುವೆ ಸಾಹಚರ್ಯವನ್ನು ಕಂಡುಕೊಳ್ಳುತ್ತವೆ.

ಪಾವ್ಲೋವ್‌ನ ಅನುಬಂಧಿತ ಪ್ರತಿಕ್ರಿಯೆಯ ಆವಿಷ್ಕಾರ ಮನೋವಿಜ್ಞಾನದ ಪ್ರಮುಖ ಪಂಥವಾಗಿರುವ ವರ್ತನಾವಾದಕ್ಕೆ (ಅಂದರೆ, ನಡವಳಿಕೆಯನ್ನು ನಿರ್ಧಾರಕ ಸೂತ್ರಗಳಿಗೆ) ಅಗತ್ಯವಾದ ಪುಷ್ಟಿಯನ್ನು ದೊರಕಿಸಿಕೊಟ್ಟಿತು. ಇಂದಿನ ದಿನಗಳಲ್ಲಿ, ಪ್ರಾಣಿಗಳ ಮತ್ತು ಮಾನವರ ವರ್ತನೆಯನ್ನು ವಿಶ್ಲೇಷಿಸಲು, ಅವರಿಗೆ ನಿರ್ದಿಷ್ಟ ಬಗೆಯ ತರಬೇತಿ ನೀಡಲು ಪಾವ್ಲೋವ್‌ನ ಅನುಬಂಧಿತ ಪ್ರತಿಕ್ರಿಯೆ ತತ್ವವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಗುತ್ತಿದೆ. ಈ ತತ್ವಗಳನ್ನು ಆಧರಿಸಿ ಹೊಸ ನಡವಳಿಕೆಗಳನ್ನು ಹುಟ್ಟುಹಾಕುವ ಮತ್ತು ಅಹಿತಕರ ಅಭ್ಯಾಸಗಳನ್ನು ತೊಡೆದುಹಾಕುವ ವಿಧಾನಗಳನ್ನು ಸಹ ಮನೋವಿಜ್ಞಾನಿಗಳು ರೂಪಿಸಿದ್ದಾರೆ. ಮನೋರೋಗಗಳ ಚಿಕಿತ್ಸೆಯಲ್ಲಿ ಕೂಡ ಅನುಬಂಧಿತ ಪ್ರತಿಕ್ರಿಯೆಯ ತತ್ವಗಳು ವ್ಯಾಪಕವಾಗಿ ಬಳಕೆಯಲ್ಲಿವೆ. ಕಲಿಕೆ ಮತ್ತು ತರಬೇತಿ ಕಾರ್ಯಕ್ರಮಗಳಲ್ಲಿ, ಅಪಸಾಮಾನ್ಯ ವರ್ತನೆಗಳ ನಿರ್ವಹಣೆಯಲ್ಲಿ 'ಅನುಬಂಧನ'ದ ಪಾತ್ರ ತುಂಬ ಗಣನೀಯವಾಗಿದೆ. ಅದಕ್ಕಾಗಿ ಮಾನವ ಜನಾಂಗ ಪಾವ್ಲೋವ್‌ನ ಈ ಸಂಶೋಧನೆಗೆ ಆಭಾರಿಯಾಗಿರಬೇಕು.

ಪಾವ್ಲೋವ್ ಒಬ್ಬ ಮಹಾನ್ ಆದರ್ಶವಾದಿ; ಪ್ರತಿಭಾವಂತ ಪ್ರಾಯೋಗಿಕ ವಿಜ್ಞಾನಿ. ಅವನು ಮಾನವ ಕಲ್ಯಾಣಕ್ಕೆ ವಿಜ್ಞಾನದ ಕೊಡುಗೆಯಲ್ಲಿ ಅಪಾರ ನಂಬಿಕೆ ಹೊಂದಿದ್ದವನು. ರಷ್ಯಾದ ಜನರು ಈತನನ್ನು ತಮ್ಮ ರಾಷ್ಟ್ರದ 'ಹೀರೋ' ಎಂದೂ, ಅಂತರರಾಷ್ಟ್ರೀಯ ವಿಜ್ಞಾನದ ಪ್ರಮುಖ ನೇತಾರನೆಂದೂ ಗುರುತಿಸಿ, ಗೌರವಿಸುತ್ತಾರೆ. ಪಾವ್ಲೋವ್ ತನ್ನ ೮೬ನೆಯ ವಯಸ್ಸಿನಲ್ಲಿ, ಫೆಬ್ರವರಿ ೨೭, ೧೯೩೬ರಲ್ಲಿ ತೀರಿಕೊಂಡ.

ಈ ಸಂದರ್ಭದಲ್ಲಿ, ಯುವ ವಿಜ್ಞಾನಿಗಳು ಪಾವ್ಲೋವ್‌ನ ಸಂದೇಶವನ್ನು ಸ್ಮರಿಸಿಕೊಳ್ಳುವುದು ಸೂಕ್ತವೆನಿಸುತ್ತದೆ. ಯುವ ವಿಜ್ಞಾನಿಗಳನ್ನು ಉದ್ದೇಶಿಸಿ ಬರೆದ ಒಂದು ಪತ್ರದಲ್ಲಿ ಈ ಸಂದೇಶ ಅಡಕವಾಗಿದೆ: ''ವಿಜ್ಞಾನಕ್ಕೆ ತಮ್ಮನ್ನು ಅರ್ಪಿಸಿಕೊಂಡಿರುವ ನನ್ನ ತಾಯ್ನಾಡಿನ ಯುವಕರಿಗೆ ನಾನು ಏನನ್ನು ಹಾರೈಸಲಿ ?'' – ಎಂದು ಆರಂಭಗೊಳ್ಳುವ ಈ ಪತ್ರದಲ್ಲಿ, ಪಾವ್ಲೋವ್ ಅವರಿಗೆ ಮೂರು ಸಲಹೆಗಳನ್ನು ನೀಡಿದ್ದಾನೆ. ಅವನ ಸಂದೇಶದ ಸಾರಾಂಶ ಹೀಗಿದೆ: ಎಲ್ಲಕ್ಕೂ ಮೊದಲು - ನಿಷ್ಠೆ. ಜ್ಞಾನವನ್ನು ಸಂಪಾದಿಸುವಲ್ಲಿ ತೀವ್ರ ನಿಷ್ಠತೆಯನ್ನು ಆರಂಭದಿಂದಲೇ ಬೆಳೆಸಿಕೊಳ್ಳಬೇಕು. ವಿಜ್ಞಾನದ ಉನ್ನತ ಶಿಖರಗಳನ್ನೇರುವ ಪ್ರಯತ್ನ ಮಾಡುವ ಮೊದಲೇ ಅದರ ಎ, ಬಿ, ಸಿ.ಗಳನ್ನು ಮನನ ಮಾಡಿಕೊಳ್ಳಬೇಕು. ಆರಂಭದ ವಿಚಾರಗಳನ್ನು ಪಾರಂಗತ ಮಾಡಿಕೊಳ್ಳದೆ, ನಂತರದ ವಿಚಾರಗಳಲ್ಲಿ ತೊಡಗಿಸಿಕೊಳ್ಳಕೂಡದು. ಸಂಯಮ ಮತ್ತು ತಾಳ್ಮೆಗಳನ್ನು ರೂಢಿಸಿಕೊಳ್ಳಬೇಕು. ಸಂಗತಿಗಳ ಅಧ್ಯಯನ, ತುಲನೆ, ಕಲೆಹಾಕುವ ಕೆಲಸಗಳನ್ನು ಕೈಗೊಳ್ಳಬೇಕು. ಒಂದು ಪಕ್ಷಿಯ ರೆಕ್ಕೆಗಳು ಎಷ್ಟೇ ಪರಿಪೂರ್ಣವಾಗಿದ್ದರೂ ಗಾಳಿಯ ಬೆಂಬಲವಿಲ್ಲದೆ ಅವು ಹಾರಾಟದಲ್ಲಿ ತೊಡಗಲಾರವು. ವಾಸ್ತವಾಂಶಗಳು (ಸಂಗತಿಗಳು) ವಿಜ್ಞಾನಿಯ ಉಸಿರು. ಅವುಗಳ ನೆರವಿಲ್ಲದೆ ಪ್ರತಿಪಾದಿಸುವ 'ಸಿದ್ಧಾಂತಗಳು' ಬರಿಯ ಬರಡು. ಅಧ್ಯಯನ, ಪ್ರಯೋಗ, ಅವಲೋಕನಗಳಲ್ಲಿ ಸಂಗತಿಗಳ 'ಅಂತರಾಳಕ್ಕೆ' ಇಳಿಯುವ ಪ್ರಯತ್ನ ಮಾಡಬೇಕು. ಕೇವಲ ಸಂಗತಿಗಳನ್ನು ಬರಿದೆ ಕಲೆಹಾಕುವುದರಿಂದ ಲಾಭವಾಗುವುದಿಲ್ಲ. ಅವುಗಳ ಮೂಲದ ಗುಟ್ಟುಗಳನ್ನು ತಿಳಿದುಕೊಳ್ಳುವ ಪ್ರಯತ್ನ ನಡೆಯಬೇಕು. ಅವುಗಳನ್ನು ನಿರ್ದೇಶಿಸುವ ತತ್ವಗಳನ್ನು ಹುಡುಕಿ ತೆಗೆಯಬೇಕು. ಎರಡನೆಯದು, **ವಿನಯ, ನಮ್ರತೆ**. ಎಲ್ಲವನ್ನು ತಿಳಿದುಕೊಂಡಿದ್ದೇನೆ ಎಂಬ ಗರ್ವ ಸಲ್ಲದು. ಒಬ್ಬ ವ್ಯಕ್ತಿ ಎಷ್ಟೇ ಉನ್ನತ ಗೌರವವನ್ನು ಪಡೆದುಕೊಂಡಿದ್ದರೂ, ತಾನು ಅಜ್ಞಾನಿ ಎಂದು ಒಪ್ಪಿಕೊಳ್ಳುವ ಧೈರ್ಯ ಹೊಂದಿರಬೇಕು. ಹೆಮ್ಮೆಯಿಂದ ಬೀಗಬಾರದು. ಎಲ್ಲಿ ಸಂಧಾನ, ಸಮನ್ವಯಗಳ ಅಗತ್ಯವಿದೆಯೋ ಅಲ್ಲಿ ಹಠ, ಮೊಂಡುತನಗಳಿಗೆ ಎಡೆಯಾಗುತ್ತದೆ; ಉಪಯುಕ್ತ ಸಲಹೆ ಹಾಗೂ ಆತ್ಮೀಯ ಸಹಾಯಗಳನ್ನು ನಿರಾಕರಿಸಲು ಕಾರಣವಾಗುತ್ತದೆ. ವಸ್ತುನಿಷ್ಠತೆಯಿಂದ ವಂಚಿತರಾಗುವಂತೆ ಮಾಡುತ್ತದೆ. ಮೂರನೆಯದು **ತೀವ್ರಾಸಕ್ತಿ**. ವಿಜ್ಞಾನಕ್ಕೆ ಇಡಿಯ ಜೀವನವನ್ನು ಮುಡುಪಾಗಿಟ್ಟರೂ ಸಾಲದು. ಅಷ್ಟೇ ಏಕೆ, ಎರಡು ಜೀವನ ಪಡೆದರೂ ಸಾಕಾಗುವುದಿಲ್ಲ. ವಿಜ್ಞಾನಿಗಳಿಗೆ ಅತಿಯಾದ ಶ್ರಮ ಮತ್ತು ತೀವ್ರಾಸಕ್ತಿಗಳು ಅತ್ಯವಶ್ಯಕವಾದ ಗುಣಗಳು.

ಯುವ ವಿಜ್ಞಾನಿಗಳಿಗೆ ಪಾವ್ಲೋವ್‌ನ ಈ ಮೇಲಿನ ಹಿತವಚನಗಳು ದಾರಿದೀಪವಾಗಬೇಕು. ಅವುಗಳನ್ನು ಕರಾರುವಾಕ್ಕಾಗಿ ತಮ್ಮ ಜೀವನದಲ್ಲಿ ಅನುಷ್ಠಾನಗೊಳಿಸಿದರೆ ಅವರು ತಮ್ಮ ಸಂಶೋಧನೆಯ ಹಾದಿಯಲ್ಲಿ ಸಫಲತೆಯನ್ನು ಸಾಧಿಸುವುದು ಬಹುಪಾಲು ಸಂಭವನೀಯ.

**ಎಚ್. ಎಸ್. ಈಶ್ವರ**
ಎಚ್.ಐ.ಜಿ. ೧೧, ಕೆ. ಹೆಚ್. ಬಿ. ಕಾಲೋನಿ
ಮೊದಲನೇ ಹಂತ, ಬಸವೇಶ್ವರನಗರ
ಬೆಂಗಳೂರು - ೫೬೦ ೦೭೯



# ಆಧುನಿಕ ಕಾವ್ಯದ ಹಾಡು ಮತ್ತು ಜಾಡುಗಳು...

**ಕಾ**ವ್ಯ ಕಟ್ಟುವ ಕೆಲಸ ಎಷ್ಟು ಪ್ರಮುಖವೋ ನಮ್ಮ ಪರಂಪರೆಯಲ್ಲಿ ಕಾವ್ಯದ ಹಾಡುವಿಕೆ ಅಷ್ಟೇ ಪ್ರಮುಖವಾದದ್ದು. ಮುದ್ರಣ ಯಂತ್ರಗಳು ಬರುವ ಮುನ್ನ ಈ ರೀತಿ ಹಾಡುವಿಕೆ ಎಂಬುದು ಕವಿಯು ಸಮುದಾಯಕ್ಕೆ ಆತ್ಮೀಯವಾಗಿ ನಿವೇದಿಸಿಕೊಳ್ಳುವ ಮುಖ್ಯ ಮಾದರಿಯಾಗಿತ್ತು. ಬಸವಣ್ಣ 'ಆನು ಒಲಿದಂತೆ ಹಾಡುವೆ' ಎನ್ನುವುದು ಕೇವಲ ಖಾಸಗಿತನ ಮಾತ್ರವಲ್ಲ, ಅದು ಕೂಡಲ ಸಂಗನಿಗೆ ಹಾಗೂ ಸಮುದಾಯಕ್ಕೆ ತಾನು ನಿವೇದಿಸಿಕೊಳ್ಳಬಯಸಿದ ಮಾದರಿ ಕೂಡ ಆಗಿತ್ತು. ಅದರಲ್ಲೂ ಶ್ರಮ ಸಮುದಾಯದೊಳಗೆ ಹುಟ್ಟುವ ಕಾವ್ಯದಲ್ಲಿ ಈ ಬಗೆಯ ಹಾಡುವಿಕೆಯೇ ಪ್ರಧಾನ.

ಜನಪದರಲ್ಲಿ ಹಾಡುವ ಮತ್ತು ರಚಿಸುವ ಕವಿ ಬೇರೆ ಬೇರೆ ಅಲ್ಲ. ಹಾಡುವಿಕೆ ಮತ್ತು ಹಾಡು ಕಟ್ಟುವಿಕೆಗಳು ಬೇರೆ ಬೇರೆಯಾದದ್ದು 'ಆಧುನಿಕತೆ' ಕಾಲಿಟ್ಟ ಮೇಲೆ. 'ಆಧುನಿಕ' ಕವಿ ''ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ'' ಎನ್ನುವಾಗ ಈ ಕವಿ ಜನಪದ ಸಂಪ್ರದಾಯದವನಲ್ಲ ಎಂಬುದೇ ವ್ಯಂಗ್ಯ. ಹೀಗೆ ಹೇಳುವಾಗ ಆತನಿಗೆ ಸಮೂಹ ಬಿಡುವ ಹಠವಿಲ್ಲ, ಆತ ಅದನ್ನು ಬರೆದು ಅಚ್ಚು ಹಾಕಿಸುತ್ತಿದ್ದಾನೆ. ಆದರೆ ಜನಪದ ಕವಿ 'ಎಲ್ಲ ಕೇಳಲಿ' ಎಂದೇ ಹಾಡುತ್ತಾನೆ.




ವಸಾಹತೀಕರಣದಿಂದ ಬಂದ 'ಆಧುನಿಕ' ಬಾಳಿನಿಂದ ಹಾಡುವ ಮತ್ತು ಕಟ್ಟುವ ಸಂಪ್ರದಾಯವು ವ್ಯಕ್ತಿ ಸಂಪ್ರದಾಯಕ್ಕೆ ಆದ್ಯತೆ ನೀಡುತ್ತ ಹೋಯಿತು. ಅಕ್ಷರವು ಒಂದು ರಾಜಕೀಯ ಶಕ್ತಿಯಾದ ಕಾಲವಿದು. ಹಾಗಾಗಿ ಕವಿತೆ ಸಾಮುದಾಯಿಕ ಪ್ರಧಾನತೆಯನ್ನು ಕಳೆದುಕೊಳ್ಳುತ್ತಾ 'ವೈಯಕ್ತಿಕ' ರಚನೆಯಾಗಿ ಮಾರ್ಪಟ್ಟಿತು. ಸಂಬಂಧ ಮತ್ತು ಸಹಬಾಳ್ವೆಯನ್ನು ಬೆಳೆಸುವ ಬದುಕಿನ ರೀತಿಯಲ್ಲೇ ಹಿಂದಿನ ಕಾವ್ಯವೂ ಇತ್ತು.

ವಸಾಹತೀಕರಣದ ಪ್ರಭಾವ ದೇಸೀಯ ಮತ್ತು ವಿದೇಶಿಯ ಎರಡೂ ರೂಪಗಳಲ್ಲೂ ಘಟಿಸಿದ್ದು ಅಕ್ಷರ ಕಾವ್ಯದೊಳಗೆ. ಮೌಖಿಕ ಕಾವ್ಯದಲ್ಲಿ ಈ ಬಗೆ ಇಲ್ಲ.ಅಲ್ಲಿ ದೇಸಿಯ ಬಹುಸಂಸ್ಕೃತಿಗಳ ವ್ಯವಸ್ಥೆಯನ್ನ ಗಟ್ಟಿಗೊಳಿಸುವ ಉಮೇದು ಇದೆ. ಉದಾಹರಣೆ : ''ಬಂಗ್ಲದೊಳಗೆ ಸಾಬ ಬಂದಾನಂತ ಹೇಳಿದರೆ ಕಲ್ತವರು ಹೋಗತಾರ ಓಡೋಡಿ, ಇಂಗ್ಲಿಷ್ ಮಾತಿಲೆ ಟಿಸ್ ಪುಸ್ ಮಾತನಾಡಿ ಉಪಕರ ಮಾಡತಾರ ಲಗುಮಾಡಿ''.

ಇಲ್ಲಿನ ಬಂಗ್ಲೆ, ಇಂಗ್ಲಿಷ್ ಸಾಹೇಬ ಮತ್ತು ಅವನ ಭಾಷೆ ಮೂರೂ ಹೇಗೆ ಹೊರರೂಪಿಯಾಗಿ ಆಕರ್ಷಿಸಬಲ್ಲವೆಂಬುದಕ್ಕೆ ಈ ಎರಡು ಸಾಲುಗಳೇ ಸಾಕು. ಇಲ್ಲಿನ ಈ ರೀತಿ ವ್ಯಂಗ್ಯವೂ ಹೌದು. ಇನ್ನು ಒಳರೂಪಿಯಾಗಿ ಶಕ್ತರಾಜಕೀಯ ವ್ಯವಸ್ಥೆಯೊಂದು ಹಲವು ಸಂಸ್ಕೃತಿಗಳ ದೇಶೀಯ ರಿವಾಜುಗಳನ್ನು ತನ್ನ ಆರ್ಥಿಕ ಅಸ್ತ್ರಗಳ ಮೂಲಕ ಅಧೀನಗೊಳಿಸಿಕೊಳ್ಳುತ್ತದೆ ಎಂಬುದಕ್ಕೆ ಉದಾಹರಣೆ :

*''ಕಂಡ ತಿನ್ನುವ ಕುಲ ಕಡಿಮೆ ಅಂತ ನಮ್ಮವರಿಗೆ ನುಡಿಯುವರು*
*ಹಂದಿ ತಿನ್ನುವ ಇಂಗ್ಲೆಂಡ್‌ದವರಿಗೆ ಒಳಗೆ ಕುರ್ಚಿಹಾಕಿ ಕೂಡ್ರಿಸುವರು.''*

ಸಮುದಾಯವಾಗುವಲ್ಲಿ ಜನಪದರು ನುಡಿಯ ಜೊತೆಗೆ ನಾದವನ್ನೂ, ತಾಳವನ್ನೂ, ನೃತ್ಯವನ್ನೂ ಹಿಡಿದಿದ್ದಾರೆ. ಹಾಗಾಗಿ ಇಡೀ ಪಂಡಿತ ಕಾವ್ಯ ಪರಂಪರೆಯಲ್ಲಿ ಮೌನದ ಹುಟ್ಟಾಗಿ ಸಂಭವಿಸುತ್ತಿದ್ದ ಕಾವ್ಯ ಆಧುನಿಕವಾಗುವಲ್ಲಿ ಜನ ಸಮುದಾಯದ ನಾದ ಮತ್ತು ನೃತ್ಯಗಳ ಗತ್ತಿನ ಹೆಜ್ಜೆಯವರೆಗೂ ಹರಿದುಬಂದಿದೆ.

ಉದಾಹರಣೆಗೆ : ''ರೈಲುಗಾಡಿ'' ಆಧುನಿಕತೆಯ ಸಂಕೇತವಾಗಿ ನಗರೀಕರಣದ ಕ್ರೌರ್ಯವಾಗಿ ನಾಡಿಗೆ ಬರುವಾಗ ಅದು ''ಪರಂಗೇರು ಮಾಡಿದ ಕೌತುಕ''ವೆಂದಷ್ಟೇ ಹಾಡಿ ಅದು ಇಲ್ಲಿ ಸುಮ್ಮನಾಗುವುದಿಲ್ಲ, ಇದರಾಚೆಗೆ ''ದಿಕ್ಕು ದೆಸೆಯೆಲ್ಲ ಮಾಡ್ಯಾರೋ ಸೆಡಕಾ'' ಎಂದು ಅದರ ಆಗಮನದ ವಿರುದ್ಧದ ಸಿಟ್ಟು ಸೆಡವುಗಳನ್ನೂ ಅದು ಕಟ್ಟಿ ಕೊಡುತ್ತದೆ. ಯಾಕೆ ಈ ಹಾಡು ಈ ಎರಡೂ ಭಾವವನ್ನು ಹಿಡಿದಿದೆ ಎನ್ನುವುದಕ್ಕೆ ಕೇವಲ ಈ ಹಾಡಿನ ಒಳ ಮತ್ತು ಹೊರ ರೂಪವನ್ನು ಗಮನಿಸಿದರೆ ತಿಳಿಯದು. ಇದರ ಹೊರಗೆ ಬಂದು ಕಾಸೀಬಾಯಿಯ ಪದ ಗಮನಿಸಿದರೆ ಮೇಲಿನ ಚರ್ಚೆಗೆ ಇನ್ನೊಂದು ಆಯಾಮ ದೊರಕುವುದು.

*ಹೊತ್ತು ಹೊಂಟು ಹೊರಳ್ಯಾಡಿ ಅಳತಾಳೋ ಭೂಮಿಗೆ ತೆಲೀ ಬಡದಾ*
*ತಲಿ ಕೂದಲು ಹರಕೊಂಡು ಎದಿ ಬಡದಾ*
*ಕಡ್ಡಿಮಟ್ಟಿ ಟೇಸಣಾಗಿತ್ತು ಸುಂದಾ ||ಹಾಹಾ||*
*ಕಾಸೀಬಾಯಿಯ ದೆಸಿಂದಾ.*

ಹೆಣ್ಣನ್ನು ಈ ರೀತಿ ದಾರುಣ ಸ್ಥಿತಿಗೆ ತಳ್ಳುವಲ್ಲಿ ರೈಲು ಮುಖ್ಯವೇ ಅಲ್ಲ. ಅದರ ಹಿಂದಿನ ಆಳುವ ಸಂಸ್ಕೃತಿಯೂ ಮುಖ್ಯವಾಗಿದೆ. ಈ ಬಗೆಯ ಬಹುತೇಕ 'ಆಧುನಿಕ' ಪದಗಳು ಈ ನಾಡಿನ ಬಹು ಸಂಸ್ಕೃತಿಯನ್ನು ಒಡೆಯುವ ಭೀಕರತೆಯನ್ನು ತಂದೊಡ್ಡುವ ಒಂಟಿತನವನ್ನು, ಹೇಳುವ ಪದಗಳಾಗಿವೆ. ಹಾಗಾಗಿ ಆಧುನಿಕ ಕಾವ್ಯಗಳಲ್ಲಿ ಬಂದ ಆರಂಭದ ಕೋರ್ಟನ್ನು, ರೈಲುಗಾಡಿಯನ್ನು, ಕ್ರಿಸ್ತನನ್ನು ಬರಿಯ ಪದಗಳಾಗಿ ನೋಡುವುದಕ್ಕಿಂತ ಅದರೊಳಗಿನ ಸಾಂಸ್ಕೃತಿಕ ಹಿನ್ನೆಲೆಯಲ್ಲೂ ಗಮನಿಸಬೇಕು.

ಇನ್ನೊಂದು ಪದ ಇಡೀ ದೇಶದ ದಿವಾಳಿತನವನ್ನು ಹೇಳುತ್ತದೆ :

*ಹಿಂದುಸ್ಥಾನ ಖಜಾನಿ ಖಾಲಿಮಾಡಿ*
*ಇಂಗ್ಲೆಂಡಕ ಒಯ್ಯಾತಾರ ಓಡೋಡಿ*
*ಬ್ರಟ್ರೇಷ್ಟ ಪಾರ್ಲಿಮೆಂಟಿನೊಳು ಕೂಡಿ*
*ಕಾಯ್ದೆ ತೆಗಿತಾರ ಬಹಳ ಅಡ್ನಾಡಿ*

ಇಲ್ಲೆಲ್ಲಾ 'ವಾಚ್ಯ'ವೆನ್ನಲಾಗುವ ಲಯಗಾರಿಕೆ ಇದ್ದರೂ ಇವು ತಮ್ಮ ಒಳಗಿನ ಜೀವಂತವಾಗಿರುವ ಮತ್ತು ಚಲಾವಣೆಯಲ್ಲಿರುವ ಸಾಂಸ್ಕೃತಿಕ ರೂಪಗಳನ್ನು ತಮ್ಮ ಆಕೃತಿಯಾಗಿರಿಸಿಕೊಂಡಿರುತ್ತವೆ. ಆ ಮೂಲಕ ಇವು 'ಶಕ್ತ' ಎನ್ನಲಾಗುವ ಪರಂಪರೆಗೆ ಎದೆಕೊಡುತ್ತವೆ. ಜೀವ ಸಂಸ್ಕೃತಿ ಹಳ್ಳಿಗಳ ಪ್ರಧಾನ ಕಾಳಜಿಯಾದರೆ ವ್ಯಕ್ತಿ ಸಂಸ್ಕೃತಿ ನಗರದ ಮುಖ್ಯ ನಿಲುವಾಗಿದೆ. ಹಾಗಾಗಿ ಜನಪದರ ಹಾಡುಗಳಲ್ಲಿ, ಮೌಖಿಕ ಚರಿತ್ರೆಗಳಲ್ಲಿ ಬಹು ಸಂಸ್ಕೃತಿಯ ನೆರಳನ್ನ ಗುರುತಿಸಬಹುದು. ಜನರ ಜಾಡುಹಿಡಿದ ನಗರದವರ ಕಾವ್ಯಗಳಲ್ಲಿ ಮತ್ತು ಚರಿತ್ರೆಗಳಲ್ಲಿ ವ್ಯಕ್ತಿ ಸಂಸ್ಕೃತಿಯ ಏಕ ಪ್ರಕಾರಗಳ ಒಳಗೂ ಆಧುನಿಕ ಕಾವ್ಯಕ್ಕೆ ಅನೇಕ ಬಗೆಯ ಪ್ರವೇಶಗಳಿವೆ.

**ಡಾ|| ಶಿವಕುಮಾರ್ ಕಂಪ್ಲಿ**
ಹಿರಿಯಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೂಡ್ಲಿಗಿ - ೫೮೩ ೧೩೫

# ಚಿತ್ರಕಲಾವಿದ ರಾ. ಸೂರಿ



ಇವರ ಪೇಂಟಿಂಗ್‌ಗಳ ಪ್ರದರ್ಶನ ಕಳೆದ ಯುಗಾದಿಯಂದು (೨೩-೦೩-೨೦೧೨) ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಜರುಗಿತು. ಸಾಕಷ್ಟು ಕಲಾಸಕ್ತರನ್ನು ಆಕರ್ಷಿಸಿದ ಅವರ ಪೇಂಟಿಂಗ್‌ಗಳ ವಸ್ತು ತಮ್ಮಷ್ಟಕ್ಕೆ ತಮ್ಮ ಕಾಯಕಗಳಲ್ಲಿ ನಿರತರಾಗಿರುವ ಸಾಮಾನ್ಯ ಜನರು. ಬಹುಮಟ್ಟಿಗೆ ಗ್ರಾಮ ಪ್ರದೇಶಗಳಲ್ಲಿ ಕಾಣಸಿಗುವವರು. ಜೊತೆಗೆ ಚಾರ್‌ಕೋಲ್ ಮಾಧ್ಯಮದಲ್ಲಿ ಧಾರವಾಡದ ಎಮ್ಮೆಗಳ ಹಲವು ಚಿತ್ರಗಳನ್ನು ಸಹ ಪ್ರದರ್ಶಿಸಿದ್ದರು.

ರಾ. ಸೂರಿಯವರು ಮೂಲತಃ ಹಾಸನ ಜಿಲ್ಲೆಯವರಾದರೂ ಅವರು ಹುಟ್ಟಿ ಬೆಳೆದದ್ದು ಶಾಲೆಗೆ ಹೋದದ್ದು ಬೆಂಗಳೂರಿನಲ್ಲಿಯೇ. ಚಿಕ್ಕಂದಿನಿಂದಲೂ ಚಿತ್ರ ರಚನೆಯಲ್ಲಿ ಆಸಕ್ತಿ. ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ಚಿತ್ರರಚನೆಯ ಹಂಬಲ ಹೆಚ್ಚಿತು. ಅದೇ ಸಂದರ್ಭದಲ್ಲಿ ಪ್ರಕಟಣೆ ಪ್ರಾರಂಭಿಸಿದ್ದ 'ಸುಧಾ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಚಿತ್ರಗಳನ್ನು ನೋಡಿ ತಾನೂ ಚಿತ್ರಕಲಾವಿದನಾಗಬೇಕೆಂಬ ಬಯಕೆ ಮತ್ತಷ್ಟು ಹೆಚ್ಚಿತು.

ಆಗ ತರಬೇತಿಗಾಗಿ ಎಂ. ಟಿ. ವಿ. ಆಚಾರ್ಯರ ಕಲಾಶಾಲೆಗೆ ಸೇರಬೇಕೆಂಬ ಹಂಬಲ ಈಡೇರಲಿಲ್ಲ. ಮುಖ್ಯ ಕಾರಣ ಅವರ ತಂದೆಗೆ ತಿಂಗಳಿಗೆ ಅರವತ್ತು ರೂಪಾಯಿ ಶುಲ್ಕ ತೆರಲು ಸಾಧ್ಯವಾಗದೆ ಹೋದದ್ದು!

ಹೈಸ್ಕೂಲು ಶಿಕ್ಷಣ ಮುಗಿದನಂತರ ತಾನು ಆರ್ಟಿಸ್ಟ್ ಆಗಿಯೇ ಸಿದ್ಧ ಎಂದು ಹಟ ಹಿಡಿದು ಇವರು ಸಿನಿಮಾ ಬ್ಯಾನರ್ ರಚಿಸುವವರ ಸಹಾಯಕನಾಗಿ ಕೆಲಸಕ್ಕೆ ಸೇರಿದರು. ಹಿರಿಯ ಚಿತ್ರಕಾರರು ದೊಡ್ಡ ಕ್ಯಾನ್‌ವಾಸಿನ ಮೇಲೆ ಮೂಡಿಸುತ್ತಿದ್ದ ಚಿತ್ರ ತಾರೆಯರನ್ನು ನೋಡಿ ಬೆರಗುಗೊಳ್ಳುವುದು, ಮತ್ತು ಕಲಾಕಾರರಿಗೆ ಅಗತ್ಯವಾದ ಬ್ರಷ್‌ಗಳನ್ನು ತೆಗೆದುಕೊಡುವುದು – ಇವು ಇವರ ತರಬೇತಿ ಅವಧಿಯ ಮುಖ್ಯ ಕೆಲಸಗಳು.

ಕೊನೆಗೂ ಇವರು ಚಿತ್ರ ಕಲಾಶಾಲೆಗೆ ಸೇರಲು ತಂದೆ ಸಹಕರಿಸಿದರು. ಬಸವನಗುಡಿಯ ಗಾಂಧಿಬಜಾರಿನಲ್ಲಿರುವ ಅ. ನ. ಸುಬ್ಬರಾಯರ 'ಕಲಾ ಮಂದಿರ'ದಲ್ಲಿ ಮೂರು ವರ್ಷ ಕಲಾಭ್ಯಾಸ ಮಾಡಿದರು.

ಮೊದಲಿಗೆ 'ಮಲ್ಲಿಗೆ' ಮಾಸಿಕದಲ್ಲಿ ಚಿತ್ರಕಲಾವಿದನಾಗಿ ಕೆಲಸ ಮಾಡುವ ಅವಕಾಶ ಸಿಕ್ಕಿತು. ಆಗ ಕಲಾವಿದ ಜಿ. ಕೆ. ಸತ್ಯ ಅಲ್ಲಿ ಕೆಲಸ ಮಾಡುತ್ತಿದ್ದರು. ಅಲ್ಲಿಂದ ಮಣಿಪಾಲದ ಉದಯವಾಣಿ ಪತ್ರಿಕಾ ಬಳಗದಲ್ಲಿ ಚಿತ್ರ ಕಲಾವಿದ. ಮತ್ತಷ್ಟು ಕಲಿಯುವ, ಕಥೆ, ಕವಿತೆಗಳಿಗೆ ಚಿತ್ರ ಬಿಡಿಸುವ ಮೂಲಕ ಚಿತ್ರಗಳ ಗುಣಮಟ್ಟವನ್ನು ಉತ್ತಮಗೊಳಿಸಿಕೊಳ್ಳುವ ಸದವಕಾಶ. 'ತರಂಗ' ಮತ್ತು 'ತುಷಾರ' ಪತ್ರಿಕೆಗಳಿಗೆ ಚಿತ್ರ ಬಿಡಿಸುವುದು, ಪ್ರತಿ ಬಾರಿ ಬೇರೆ ಬೇರೆ ಶೈಲಿಯ ಶೀರ್ಷಿಕೆಗಳನ್ನು ರಚಿಸುವುದರ ಜೊತೆಗೆ ಪುಟವಿನ್ಯಾಸದಲ್ಲೂ ಹಲವು ಪ್ರಯೋಗಗಳ ಮೂಲಕ ಓದುಗರನ್ನು ಆಕರ್ಷಿಸುವ ಅವಕಾಶ. ಇವರ ಪ್ರಯತ್ನಕ್ಕೆ ಪ್ರತಿಫಲವೆಂಬಂತೆ 'ಉದಯವಾಣಿ' ದೀಪಾವಳಿ ಸಂಚಿಕೆಯ ವಿನ್ಯಾಸಕ್ಕಾಗಿ ಭಾರತ ಸರಕಾರ ನೀಡುವ ರಾಷ್ಟ್ರೀಯ ಪುರಸ್ಕಾರ (೧೯೭೭) ಲಭಿಸಿತು. 'ಉದಯವಾಣಿ'ಯ ನಂತರ ಬೆಂಗಳೂರಿನ ಐಬಿಎಚ್ ಪ್ರಕಾಶನದವರು ಪ್ರಕಟಿಸುತ್ತಿದ್ದ 'ಇಂಚರ' ಪತ್ರಿಕೆಯ ಕಲಾವಿದ.



ವಿದ್ಯಾರ್ಥಿ ದೆಸೆಯಲ್ಲಿನ ಆಸೆಯಂತೆಯೇ ಮುಂದೆ ಪ್ರಜಾವಾಣಿ ಪತ್ರಿಕಾ ಬಳಗದಲ್ಲಿ, ಶ್ರೀ ರಮೇಶ್, ರಾಮಮೂರ್ತಿ, ಚಂದ್ರನಾಥ ಆಚಾರ್ಯ, ಗುಜ್ಜಾರಪ್ಪ, ಶ್ರೀ – ಮುಂತಾದ ಖ್ಯಾತ ಚಿತ್ರಕಲಾವಿದರೊಂದಿಗೆ ಕೆಲಸ ಮಾಡುವ ಅವಕಾಶ ಒದಗಿಬಂತು. ೧೯೮೨ರಿಂದ ೨೦೦೦ದ ವರೆಗೆ ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್, ಸುಧಾ ಮತ್ತು ಮಯೂರ ಪತ್ರಿಕೆಗಳಲ್ಲಿ ಹಿರಿಯ ಕಲಾವಿದನಾಗಿ ಸೇವೆ ಸಲ್ಲಿಸಿ ನಿವೃತ್ತರಾದರು.

ನಾಟಕಗಳಲ್ಲಿ ಪಾತ್ರವಹಿಸುವುದು ಸಹ ಇವರ ಹವ್ಯಾಸಗಳಲ್ಲಿ ಒಂದು. ಪ್ರಜಾವಾಣಿ ಬಳಗ ನಡೆಸುತ್ತಿದ್ದ ನಾಟಕ ಪ್ರದರ್ಶನಗಳಲ್ಲಿ ತಪ್ಪದೆ ಭಾಗವಹಿಸುತ್ತಿದ್ದರು. ಹಾಸ್ಯ ಪಾತ್ರಗಳತ್ತ ಹೆಚ್ಚಿನ ಒಲವು. ಅದಕ್ಕಾಗಿ ಇವರು 'ಉತ್ತಮ ನಟ' ಪುರಸ್ಕಾರ ಗಳಿಸಿದರು.

ಮಣ್ಣಿನಲ್ಲಿ (ಕ್ಲೇ) ಶಿಲ್ಪ ರಚನೆ, ಪ್ರವಾಸ ಮತ್ತು ಫೋಟೋಗ್ರಫಿ ಇವರ ಇತರ ಪ್ರಿಯವಾದ ಹವ್ಯಾಸಗಳು. ಹಲವು ಕಲಾ ಶಿಬಿರಗಳಲ್ಲಿ ಮತ್ತು ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ. ಇವರ ಕೆಲವು ಚಿತ್ರಗಳು 'ಹೊಸತು' ಮುಖಪುಟಗಳಲ್ಲಿ ಪ್ರಕಟವಾಗಿವೆ.

ಚಿತ್ರರಚನೆಯ ಜೊತೆಗೆ ಕನ್ನಡ ಅಕ್ಷರಗಳನ್ನು ಮುದ್ದಾಗಿ ಬರೆಯಬೇಕೆನ್ನುವವರು. ಕನ್ನಡ ಅಕ್ಷರಗಳನ್ನು ಬೇರೆ ಬೇರೆ ರೀತಿಯಲ್ಲಿ ರಚಿಸಿ ಮುದ್ದು ಕನ್ನಡದ ಅಂದವನ್ನು ಹೆಚ್ಚಿಸುವುದರಲ್ಲಿ ಇವರಿಗೆ ಬಹಳ ಆಸಕ್ತಿ. ಪತ್ರಿಕೆಗಳ ಅಥವಾ ಪುಸ್ತಕಗಳ ಶೀರ್ಷಿಕೆಗಳಲ್ಲಿ ಬಳಸ ಬಹುದಾದ ಹಲವು ವಿನ್ಯಾಸದ ಅಕ್ಷರ ಫಾಂಟ್‌ಗಳನ್ನು ರಚಿಸಿದ್ದಾರೆ. ಈ 'ಸೂರಿ ಫಾಂಟ್'ಗಳನ್ನು ಯಾರೂ ಬಳಸಬಹುದಾದಂತೆ ಉಚಿತವಾಗಿ ವಿನಿಯೋಗಿಸಲು ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಸಹಕಾರ ನೀಡಿದೆ.

ಲಕ್ಷಗಟ್ಟಲೆ ಪ್ರತಿಗಳಲ್ಲಿ ಮುದ್ರಣಗೊಂಡ ರಾದುಗ ಮಾಸ್ಕೊ ಮತ್ತು ನವಕರ್ನಾಟಕ ಪ್ರಕಾಶನದ ಜಂಟಿ ಪ್ರಕಟಣೆಯಾಗಿ ಹೊರಬಂದ 'ಮುದ್ದು ಕನ್ನಡ'ವೆಂಬ ಪುಸ್ತಕಕ್ಕೆ ಅವರು ರಚಿಸಿದ ಬಣ್ಣದ ಚಿತ್ರಗಳು ಭಾರಿ ಜನಮನ್ನಣೆಗಳಿಸಿವೆ.

ಸದಾ ಬಣ್ಣದ ಕನಸಿನಲ್ಲಿ ಮುಳುಗಿರುವ ಇವರ ಅಗತ್ಯಗಳನ್ನು, ಮೂಡುಗಳನ್ನು ಅರಿತು ನಡೆಯುವ ಪತ್ನಿ, ಇಬ್ಬರು ಮಕ್ಕಳು. ಮಗ, ಸೊಸೆ ಉದ್ಯೋಗದಲ್ಲಿದ್ದಾರೆ. ಮಗಳು, ಅಳಿಯ ಇಂಗ್ಲೆಂಡಿನಲ್ಲಿ ಉದ್ಯೋಗದಲ್ಲಿದ್ದಾರೆ.

**ಕೆ. ಪಿ. ಸ್ವಾಮಿ**
ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಹಂತ
ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮









# ಚಿತ್ರ ಕಲಾವಿದ ರಾ. ಸೂರಿ

ರಾ. ಸೂರಿಯವರ ಕುರಿತ ಕಿರುಲೇಖನ 62ನೇ ಪುಟದಲ್ಲಿದೆ.









Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / MAY 2012 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)